ಮೊದಲನೆಯ ಮುದ್ರಣ ೧೯೩೩
ಎರಡನೆಯ ಮುದ್ರಣ ೧೯೩೭
ಮೂರನೆಯ ಮುದ್ರಣ ೧೯೫೧
ನಾಲ್ಕನೆಯ ಮುದ್ರಣ ೧೯೫೪

**ಬೆಲೆ ಒಂದು ರೂಪಾಯಿ**



**ಬೆಂಗಳೂರು ಪ್ರೆಸ್**
**ಮೈಸೂರು ರೋಡು, ಬೆಂಗಳೂರು ಸಿಟಿ**
**೧೯೫೪**

# ಮುನ್ನುಡಿ

ಈ ಪುಸ್ತಕ ಕವಿವರ ಶ್ರೀ ರವೀಂದ್ರನಾಥ ಠಾಕೂರರ ವಂಗ ನಾಟಕ ಚಿತ್ರಾಂಗದಾ ಗ್ರಂಥದ ಭಾಷಾಂತರ. ನನ್ನ ಮಿತ್ರರಾದ ಶ್ರೀ ಅ. ನಾರಾಯಣಸ್ವಾಮಿ ಅಯ್ಯರ್ ಅವರಿಂದ ಸ್ವಲ್ಪ ಬಂಗಾಳಿ ಭಾಷೆಯನ್ನು ಕಲಿಯುವುದರಲ್ಲಿ ನಾನು ಈ ನಾಟಕದ ಮೂಲವನ್ನು ಪದಶಃ ನೋಡಬೇಕಾಯಿತು. ಚಿತ್ರಾಂಗದಾ ಠಾಕೂರರ ಅತ್ಯುತ್ತಮವಾದ ಐದಾರು ಕೃತಿಗಳಲ್ಲಿ ಒಂದು. ಇಂಗ್ಲೀಷಿನಲ್ಲಿ ಪ್ರಕಟವಾಗಿರುವ ಇವರ ಗ್ರಂಥಗಳಲ್ಲಿ ಕೂಡ ಇದರ ಇಂಗ್ಲಿಷ್ ರೂಪವಾದ 'ಚಿತ್ರಾ' ಒಂದು ವಿಲಕ್ಷಣ ಸೌಂದರ್ಯದಿಂದ ಶೋಭಿಸುತ್ತದೆ. ಇಷ್ಟು ಉತ್ಕೃಷ್ಟವಾದ ಗ್ರಂಥ ಮೂಲದಲ್ಲಿ ಹೇಗಿದೆಯೆನ್ನುವುದು ನಮ್ಮ ಜನರ ಅವಗಾಹನೆಗೆ ಬರಲೆಂದು ನಾನು ಈ ಭಾಷಾಂತರವನ್ನು ಮಾಡಿದೇನೆ.

ಈ ಸಂದರ್ಭದ ವಂಗ ಭಾಷಾಜ್ಞಾನವೆಲ್ಲ ಶ್ರೀ ನಾರಾಯಣ ಸ್ವಾಮಿ ಅವರದು. ವಿಷಯ ಕನ್ನಡದಲ್ಲಿ ಪಡೆದಿರುವ ಮಾತು, ರೀತಿ, ಛಂದ, ಅಚ್ಚಂದ, ಎಲ್ಲವೂ ನನ್ನವು. ಕನ್ನಡದ ಮಾತು ರೀತಿಯನ್ನು ನಿರ್ಧರಿಸುವುದರಲ್ಲಿ ನಾನು ಇಂಗ್ಲಿಷ್ 'ಚಿತ್ರಾ' ಗ್ರಂಥದ ಸಹಾಯವನ್ನು ತೆಗೆದುಕೊಂಡಿದೇನೆ. ಮೂಲದ ಛಂದಸ್ಸು ಠಾಕೂರರು ವಂಗ ಭಾಷೆಯಲ್ಲಿ ಬಳಸಿದ ಹೊಸದೊಂದು ಛಂದಸ್ಸು. ಕನ್ನಡದಲ್ಲಿ ಅದಕ್ಕೆ ಹೋಲಬಹುದಾದ ಛಂದಸ್ಸನ್ನು ಬಳಸಲು ನಾನು ಯತ್ನ ಮಾಡಿದೆನು. ಅದು ಸಫಲವಾಗಲಿಲ್ಲ. ಅಳೆದು, ತಿದ್ದಿ, ಮತ್ತೆ ಅಳೆದು, ಕೊನೆಗೆ ಈಗ ಇರಿಸಿಕೊಂಡಿರುವ ಒಂದು ಪದ್ಯಗಂಧಿಯಾದ ಗದ್ಯವನ್ನು ಬಳಸಿದೇನೆ. ಸದ್ಯಕ್ಕೆ ಇದು ಒಂದು ಪ್ರಯೋಗಮಾತ್ರ. ಪ್ರಯೋಗಮಾತ್ರ ಆದರೂ ಕನ್ನಡದ ಹೊಸಕವಿಗೆ ಇದು ರುಚಿಸಬಹುದೆಂದೇ ನಾನು ನಂಬಿರುವೆನು.

ಈ ಭಾಷಾಂತರದ ಮೊದಲ ರೂಪ 'ಜೀವನ' ಪತ್ರಿಕೆಯಲ್ಲಿ ಪ್ರಕಟವಾಯಿತು. ಆದರಲ್ಲಿದ್ದ ತಪ್ಪುಗಳನ್ನು ತಿದ್ದಿ ಆವಶ್ಯಕವೆಂದು ಕಂಡ ಮಾರ್ಪಾಡುಗಳನ್ನು ಮಾಡಿ ಈಗಿನ ರೂಪವನ್ನು ಸಿದ್ಧಪಡಿಸಿದೆ.

ಪಾರ್ಥಿವ ಸಂವತ್ಸರ
ನಿಜ ಚೈತ್ರ ಶುದ್ಧ ಪಾಡ್ಯಮಿ }

**ಶ್ರೀನಿವಾಸ**

# ಸೂಚನೆ

ಅನೇಕ ವರ್ಷಗಳ ಹಿಂದೆ ರೈಲ್ ಗಾಡಿಯಲ್ಲಿ ಶಾಂತಿನಿಕೇತನ ದಿಂದ ಕಲ್ಕತ್ತೆಯ ಕಡೆಗೆ ಹೋಗುತ್ತಿದ್ದೆ. ನೆನಪಿರುವ ಮಟ್ಟಿಗೆ ಆಗ ಚೈತ್ರಮಾಸ. ರೈಲ್ ದಾರಿಯ ಇಕ್ಕೆಲದಲ್ಲೂ ಗಿಡಗೆಂಟೆಗಳ ಕಾಡು. ಹಳದಿ, ನೀಲಿ, ಬಿಳಿ ವರ್ಣಗಳ ಹೂ ಲೆಕ್ಕವಿಲ್ಲದೆ ಅರಳಿದ್ದವು. ನೋಡ ನೋಡುತ್ತ ಮನಸ್ಸಿನಲ್ಲಿ ಒಂದು ಭಾವನೆ ಮೂಡಿತು: "ಇನ್ನು ಕೆಲ ಹೊತ್ತಿನ ನಂತರ ಬಿಸಿಲೇರುವುದು. ಈ ಹೂಗಳು ತಮ್ಮ ವರ್ಣಗಳ ಮರೀಚಿಕೆಯನ್ನು ಎತ್ತಿಕೊಂಡು ಅದೃಶ್ಯವಾಗುವವು. ಆಗ ಹಳ್ಳಿಯ ಪ್ರಾಂಗಣದಲ್ಲಿ ಗಿಡಗಳ ರೆಂಬೆರೆಂಬೆಗಳಲ್ಲಿ ಮಿಡಿಮಾವು ತಲೆದೋರು ವುದು. ತರು ಪ್ರಕೃತಿ ಎಳೆಯ ಫಲಗಳ ಮೂಲಕ ತನ್ನಲ್ಲಿ ಅಡಗಿರುವ ರಸಭಂಡಾರದ ಪರಿಚಯ ಕೊಡುವುದು." ಅದೇ ಸಮಯದಲ್ಲಿ ಹಠಾ ತ್ತಾಗಿ ಮನಸ್ಸಿನಲ್ಲಿ ಹೀಗೆನಿಸಿತು: "ಸುಂದರಿಯಾದ ಯುವತಿ ತಾನು ಪ್ರೇಮಿಕನ ಹೃದಯವನ್ನು ವಶಪಡಿಸಿಕೊಂಡಿರುವುದು ತನ್ನ ಯೌವನದ ಮಾಯೆಯಿಂದ ಎಂಬುದನ್ನು ಒಂದು ವೇಳೆ ಅರಿತಳಾದರೆ ತನ್ನ ಸುಂದರ ರೂಪ ತನ್ನ ಪಾಲಿಗೆ ಬಂದ ಮುದ್ದಿನ ಹೆಚ್ಚು ಅಂಶಕ್ಕೆ ಅಧಿಕಾರಿ ಯಾಗಿರುವ ತಪ್ಪಿಗಾಗಿ ಅದನ್ನು ಸವತಿಯೆಂದು ಧಿಕ್ಕರಿಸುವಳು. ಋತುರಾಜ ವಸಂತನೆಡೆ ಪಡೆದ ವರದಂತೆ ಆ ಸೌಂದರ್ಯ ಆಕೆಯ ಬಾಹ್ಯವಸ್ತು; ನಶ್ವರ ಮೋಹದ ವಿಸ್ತಾರದ ಮೂಲಕ ತನ್ನ ಉದ್ದೇಶ ವನ್ನು ಸಾಧಿಸುವುದಕ್ಕಾಗಿ. ಅವಳ ಅಂತರ್ಯದಲ್ಲಿ ಯಥಾರ್ಥ ಶೀಲ ಶಕ್ತಿ ಇರುವುದಾದರೆ ಆಗ ಆ ಮೋಹಮುಕ್ತ ಶಕ್ತಿಯ ದಾನವೇ ಪ್ರೇಮಿಗೆ ಮಹಾಲಾಭವಾದೀತು. ಆ ಯುಗಲ ಜೀವನದ ಜಯ ಯಾತ್ರೆಯ ಸಾಧನವಾದೀತು. ಆ ದಾನವೇ ಆತ್ಮದ ಶಾಶ್ವತ ಪರಿಚಯ. ಇದರ ಪರಿಣಾಮದಲ್ಲಿ ಕ್ಲಾಂತಿಯಿರದು. ಉತ್ಸಾಹ ಭಂಗವಾಗದು. ಪರಿಚಯದ ಧೂಳು ಕವಿದು ಅದರ ಉಜ್ವಲತೆ ಮಲಿನವಾಗದು. ಈ

ಶೀಲಶಕ್ತಿ ಬಾಳುವೆಯ ಶಾಶ್ವತ ಬಂಡವಾಳ. ಮಮಕಾರವಿಹೀನ ಪ್ರಕೃತಿ ಸಾಕೆನ್ನುವ ಆಶುಪ್ರಯೋಜನವನ್ನು ಅದು ನಂಬಿರದು. ಎಂದರೆ ಇದರ ಮೂಲ್ಯ ಮಾನವಿಕ—ಬರಿಯ ಪ್ರಕೃತಿಯದಲ್ಲ".

ಈ ಭಾವನೆಗಳನ್ನು ನಾಟಕದ ರೂಪದಲ್ಲಿ ವ್ಯಕ್ತಮಾಡುವ ಆಶೆ ಆಗಲೇ ಮನದಲ್ಲಿ ಉದಯಿಸಿತು. ಅದರ ಸಂಗಡಲೇ ಮಹಾಭಾರತದ ಚಿತ್ರಾಂಗದೆಯ ಕಥೆ ನೆನಪಾಯಿತು. ಆ ಕಥೆ ಸ್ವಲ್ಪ ರೂಪಾಂತರ ಹೊಂದಿ ಬಹುಕಾಲ ನನ್ನ ಮನಸ್ಸಿನಲ್ಲಿ ಅಡಗಿತ್ತು. ಕೊನೆಗೆ ಅದನ್ನು ಬರೆಯುವ ಆನಂದಪೂರ್ಣ ಅವಕಾಶ ಒರಿಸ್ಸಾದ ಪಾಂಡುಯಾ ಎಂಬ ಹೆಸರಿನ ನಿಭೃತವಾದ ಹಳ್ಳಿಯಲ್ಲಿ ಸಿಕ್ಕಿತು.

ಕಟಕ್
೨೮ ಭಾದ್ರಪದ, ೧೨೯೮ (ವಂಗಾಬ್ದ)
[ಕ್ರಿ. ಶ. ೧೮೯೧]

**ಶ್ರೀ. ರವೀಂದ್ರನಾಥ ಠಾಕೂರ**

# ಚಿತ್ರಾಂಗದಾ

## ೧

## ಅನಂಗಾಶ್ರಮ

ಚಿತ್ರಾಂಗದಾ, ಮದನ, ವಸಂತ

**ಚಿತ್ರಾಂಗದಾ**

ತಾವು ಪಂಚ ಬಾಣರೊ ?

**ಮದನ**

ಹೌದು ; ನಾನು ಮನಸಿಜ ;
ಲೋಕದ ನರನಾರಿಯರ ಹೃದಯಗಳನ್ನು
ವೇದನೆಯ ಬಂಧನದಿಂದ ಎಳೆಯುವವನು.

**ಚಿತ್ರಾಂಗದಾ**

ಅದು ಎಂಥ ವೇದನ, ಎಂಥ ಬಂಧನ, ಅದನ್ನು
ನಿಮ್ಮ ಸೇವಕಿ ಬಲ್ಲೆನು. ತಮ್ಮಡಿಗೆ ಎರಗುತ್ತೇನೆ.
ಪ್ರಭು, ತಾವು ಯಾರು, ದೇವ ?

**ವಸಂತ**

ನಾನು ಋತುರಾಜ.
ಜರಾಮೃತ್ಯು ದೈತ್ಯದ್ವಯ ನಿಮಿಷ ನಿಮಿಷವೂ
ಸೃಷ್ಟಿಯ ಎಲುಗೂಡನ್ನು ಹೊರಗೆಡಹ ತೊಡಗಿದೆ.
ನಾನು ಅದರ ಹಿಂದೆಹಿಂದೆ ಸುಳಿದು ಪದೇಪದೇ ಅದನ್ನು
ಸೋಲಿಸುತ್ತಿರುವೆನು. ಹಗಲಿರುಳೂ ಸಂಗ್ರಾಮ.
ನಾನು ಸೃಷ್ಟಿಯ ಆ ಅನಂತ ಯೌವನ.

**ಚಿತ್ರಾಂಗದಾ**

ನಿಮಗೆ ಪ್ರಣಾಮ, ಭಗವಾನ್. ಸೇವಕಳು
ದೇವದರ್ಶನದಿಂದ ಚರಿತಾರ್ಥಳು.

ಮದನ

ಕಲ್ಯಾಣಿ,
ನೀನು ಈ ಕಠೋರ ವ್ರತವನ್ನು ಕೈಗೊಂಡು
ತಪಸ್ಯದ ತಾಪದಲ್ಲಿ ಯೌವನ ಕುಸುಮವನ್ನು
ಮಲಿನ ಖಿನ್ನ ಮಾಡುವುದು ಯಾವ ಉದ್ದೇಶದಿಂದ ?
ಅನಂಗಪೂಜೆಯ ವಿಧಾನ ಇದಲ್ಲ, ಭದ್ರೆ.
ನೀನು ಯಾರು, ನಿನ್ನ ಬಯಕೆಯೇನು ?

ಚಿತ್ರಾಂಗದಾ

ದಯೆ ಹುಟ್ಟಿರುವುದಾದರೆ ನನ್ನ ಕಥೆಯನ್ನು ಲಾಲಿಸಿ.
ಅದಾದ ನಂತರ ನನ್ನ ಬಯಕೆಯನ್ನು ತಿಳಿಸುವೆನು.

ಮದನ

ಹೇಳು, ಕೇಳಲು ಉತ್ಸುಕನಾಗಿದೇನೆ.

ಚಿತ್ರಾಂಗದಾ

ನಾನು ಚಿತ್ರಾಂಗದೆ. ಮಣಿಪುರದ ರಾಜಪುತ್ರಿ.
ತಪಸ್ಸಿನಿಂದ ತುಷ್ಟನಾಗಿ ದೇವ ಉಮಾಪತಿ
ನನ್ನ ಪಿತೃವಂಶದಲ್ಲಿ ಹೆಣ್ಣಿಂದ ಸಂತತಿ
ವಿಚ್ಛೇದವಾಗದೆಂದು ವರವನ್ನಿತ್ತನು.
ಆ ಮಹಾವರವನ್ನು ನಾನು ವ್ಯರ್ಥಗೊಳಿಸಿದೆನು.
ಅಮೋಘ ದೇವತಾವಾಕ್ಯ ಮಾತೃಗರ್ಭವನ್ನು ಮುಟ್ಟಿ
ನನ್ನ ಆರಬ್ಧ ಅಬಲಾತ್ವವನ್ನು ಶೈವ ತೇಜದಿಂದ
ಪುರುಷರೂಪ ಮಾಡಲಾರದೆ ಹೋಯಿತು.
ಅಂಥ ಕಠಿಣ ನಾರಿತ್ವ ನನ್ನದು.

ಮದನ

ನಾನು ಕೇಳಿ ಬಲ್ಲೆ.
ಅಂತೇ ನಿನ್ನ ತಂದೆ ನಿನ್ನನ್ನು ಪುತ್ರನೆಂಬಂತೆ ಸಲಹಿದನು,
ನಿನಗೆ ಧನುರ್ವಿದ್ಯೆ ರಾಜದಂಡನೀತಿಯನ್ನು ಕಲಿಸಿದನು.

ಚಿತ್ರಾಂಗದಾ

ಆದರಿಂದಲೇ ನಾನು ಯಾವಾಗಲೂ ಪುರುಷ ವೇಷದಲ್ಲಿ
ಯುವರಾಜನಂತೆ ರಾಜ್ಯಕಾರ್ಯ ಮಾಡುತ್ತ
ನನಗೆ ಇಷ್ಟ ಬಂದಂತೆ ತಿರುಗುತ್ತಿರುವೆನು.
ಲಜ್ಜೆ ಭಯ ಅಂತಃಪುರವಾಸವನ್ನು ಅರಿಯೆನು.
ಅರಿಯೆನು ಹೆಣ್ಣ ಹಾವಭಾವ ವಿಲಾಸ ಚಾತುರಿಯನ್ನು.
ಧನುರ್ವಿದ್ಯೆ ಕಲಿತೆನು. ಆದರೆ, ದೇವ, ಕಣ್ಣ ಕೊನೆಯಲ್ಲಿ
ನಿನ್ನ ಪುಷ್ಪಧನುವನ್ನು ಬಾಗಿಸುವ ಪರಿಯನ್ನು
ತೀರಾ ಕಲಿಯದೆ ಬಿಟ್ಟೆನು.

ವಸಂತ

ಓ ಚಾರುಲೋಚನೆ
ಆ ವಿದ್ಯೆ ಯಾವ ನಾರಿಗೂ ಕಲಿವಿಂದ ಬರುವುದಿಲ್ಲ.
ಕಣ್ಣು ತಮ್ಮ ಕೆಲಸವನ್ನು ಮಾಡಿಬಿಡುತ್ತವೆ.
ಯಾರ ಎದೆಗೆ ತಾಗಿತು, ಅವರೇ ಬಲ್ಲರು.

ಚಿತ್ರಾಂಗದಾ

ಒಂದು ದಿನ
ನಾನು ಒಬ್ಬಳೆ ಪೂರ್ಣಾನದೀ ತೀರದಲ್ಲಿ
ಘನವನದಲ್ಲಿ ಮೃಗಾನ್ವೇಷಣಕ್ಕೆ ಹೋಗಿದ್ದೆನು.
ಒಂದು ಮರದಡಿ ಕುದುರೆಯನ್ನು ಕಟ್ಟಿ
ದುರ್ಗಮ ಕುಟಿಲ ವನಪಥದಲ್ಲಿ
ಜಿಂಕೆಯ ಅಡಿಯ ಗುರುತನ್ನು ಅನುಸರಿಸಿ ಹೊಕ್ಕೆನು.
ಝಿಲ್ಲಿಯ ಮಂದ್ರಸ್ವರದಿಂದ ತೀವಿ ತುಂಬಿ
ಲತಾಗುಲ್ಮದಿಂದ ಎಲ್ಲ ಹೊತ್ತೂ ಕತ್ತಲಾದ
ಗಹನ ಗಂಭೀರವಾದ ಮಹಾರಣ್ಯದಲ್ಲಿ
ಸ್ವಲ್ಪದೂರ ಮುಂದರಿದು ಸಹಸಾ ಕಂಡೆನು:
ಕಿರಿದಾದ ದಾರಿಯನ್ನು ತೀರಾ ಅಡ್ಡಗಟ್ಟಿ
ನೆಲದಲ್ಲಿ ಮಲಗಿರುವ ಚೀರಧಾರಿಯಾದ

ಮಲಿನ ಪುರುಷನನ್ನು. ಅಸಡ್ಡೆಯ ಸ್ವರದಿಂದ,
ಏಳು, ಪಕ್ಕಕ್ಕೆ ಸರಿ ಎಂದು ಹೇಳಿದೆನು.
ಅವನು ಅಲುಗಲಿಲ್ಲ ತಿರುಗಿ ನೋಡಲಿಲ್ಲ.
ಉದ್ಧತಳಾಗಿ ಅತಿ ರೋಷದಿಂದ ಅವನನ್ನು
ಧನುವಿನ ಕೊನೆಯಿಂದ ತಾಡನ ಮಾಡಿದೆನು.
ಬೂದಿಯಲ್ಲಿ ಅಡಗಿರುವ ಅಗ್ನಿ ಘೃತಾಹುತಿ ಹೊಂದಿ
ಎವೆಯಿಕ್ಕುವಷ್ಟರಲ್ಲಿ ಶಿಖಾರೂಪದಿಂದ
ಮೇಲೆ ಏಳುವ ರೀತಿ ಅವನ ಸರಲ ಸುದೀರ್ಘದೇಹ
ಕ್ಷಣಮಾತ್ರದಲ್ಲಿ ಅಂಬಿನ ವೇಗದಿಂದ
ನನ್ನ ಎದುರಿನಲ್ಲಿ ಎದ್ದು ನಿಂತಿತು.
ಕ್ಷಣಮಾತ್ರ ಅವನು ನನ್ನ ಮುಖವನ್ನು ನೋಡಿದನು;
ನನ್ನ ಬಾಲಕಮೂರ್ತಿ ಕಂಡದ್ದರಿಂದ ಇರಬೇಕು,
ಮೊದಲ ರೋಷದೃಷ್ಟಿ ಅವನ ರೆಪ್ಪೆಯಲ್ಲಿ ಅಡಗಿತು.
ತುಂಬಿದ, ಆದರೂ ಅಡಗಿದ, ಕೌತುಕದ ಮೆದು ನಗೆಯ
ಗೆರೆ ಒಂದು ಅವನ ಅಧರದ ಕೊನೆಯಲ್ಲಿ ಕುಣಿಯಿತು.
ಪುರುಷವಿದ್ಯೆಯನ್ನು ಕಲಿತು ಪುರುಷವೇಷವನ್ನು ತಳೆದು
ಪುರುಷರ ಜೊತೆ ಇದ್ದು ಇಷ್ಟುದಿನ ನಾನು ಮರೆತಿದ್ದ
ನಾನೊಂದು ಹೆಣ್ಣೆಂಬ ದಿಟವನ್ನು ನಾನು
ಆ ಮುಖವನ್ನೂ, ತನ್ನಲ್ಲಿ ತಾನು ಅಚಲವಾಗಿದ್ದ
ಆ ಮೂರ್ತಿಯನ್ನೂ ಕಂಡು ಒಂದೆ ಕ್ಷಣದಲ್ಲಿ
ನನ್ನ ಮನಸ್ಸಿನಲ್ಲಿ ತಿಳಿದೆನು. ಆ ಕ್ಷಣ ನನ್ನೆದುರಲ್ಲಿ
ನನ್ನ ಪುರುಷನನ್ನು ಮೊತ್ತಮೊದಲು ಕಂಡೆನು.

**ಮದನ**

ಅದು ನಾನು ಕಲಿಸಿದ ಪಾಠ, ಓ ಸುಲಕ್ಷಣೇ.
ಯಾವಾಗಲೋ ಬಾಳಿನ ಒಂದು ಶುಭಪಾವನಕ್ಷಣದಲ್ಲಿ
ನಾರಿ ನಾರಿಯಾಗುವಂತೆ, ಪುರುಷ ಪುರುಷನಾಗುವಂತೆ
ನಾನೇ ಅವರನ್ನು ಎಚ್ಚರಗೊಳಿಸುವೆನು. ಆ ಮೇಲೆ?

## ಚಿತ್ರಾಂಗದಾ

ಸಭಯವಿಸ್ಮಯ ಕಂಠದಿಂದ ನಾನು ಅವನನ್ನು
"ಯಾರು ನೀನು?" ಎಂದು ಪ್ರಶ್ನೆ ಮಾಡಿದೆನು.
ಉತ್ತರ ಕೇಳಿಸಿತು: "ನಾನು ಪಾರ್ಥ; ಕುರುವಂಶಧರ."
ಇದನ್ನು ಕೇಳಿ ನಾನು ಚಿತ್ರದಂತೆ ನಿಂತುಬಿಟ್ಟೆನು.
ಅವನಿಗೆ ಪ್ರಣಾಮ ಮಾಡುವುದನ್ನು ಮರೆತೆನು.
ಹುಟ್ಟಿದ ಮೊದಲು ನಾನು ಕುತೂಹಲದಿಂದ ನೆನೆದಿದ್ದ
ಪಾರ್ಥನೆ ಇವನು? ಕೇಳಿಬಲ್ಲೆ, ಪಾರ್ಥನು ಸತ್ಯಕ್ಕಾಗಿ
ಹನ್ನೆರಡು ವರ್ಷ ವನವನದಲ್ಲಿ ಸುತ್ತುತ್ತ
ಬ್ರಹ್ಮಚರ್ಯವನ್ನು ಪಾಲಿಸುತ್ತಿರುವನು ಎಂದು:
ಇವನೇ ಆ ವೀರ ಪಾರ್ಥ?

ಬಾಲ್ಯದಲ್ಲಿ
ಎಷ್ಟುಸಲ ನಾನು ಮನಸ್ಸಿನಲ್ಲಿ ಹಿರಿಯಾಸೆಪಟ್ಟವಳು:
ನನ್ನ ಭುಜಬಲದಿಂದ ಪಾರ್ಥನ ಕೀರ್ತಿಯನ್ನು
ನಿಷ್ಪ್ರಭೆಪಡಿಸಬೇಕು, ತಪ್ಪದೆ ಗುರಿ ಸಾಧಿಸಬೇಕು,
ಪುರುಷನ ಛದ್ಮವೇಷದಿಂದ ಅವನೊಡನೆ ಯುದ್ಧಬೇಡಿ
ನನ್ನ ಶೌರ್ಯದ ಪರಿಚಯವನ್ನು ಕೊಡಬೇಕು ಎಂದು!
ಎಲೆಮುಗ್ಧೆ, ಆ ನಿನ್ನ ಸ್ಪರ್ಧೆ ಈಗ ಎತ್ತಹೋಯಿತು?
ಈಗ ಅವನು ನಿಂತಿದ್ದ ನೆಲದ ಹುಲ್ಲೆಸಳು ಆಗಿದ್ದೆನಾದರೆ
ನನ್ನ ಶೌರ್ಯ ವೀರ್ಯ ಎಲ್ಲವನ್ನೂ ಧೂಳಿನಲ್ಲಿ ಬೆರಸಿ
ಅವನ ಚರಣತಲದಲ್ಲಿ ಮರಣವನ್ನು ಪಡೆದು
ಅದು ಎಂಥ ಭಾಗ್ಯ ಎಂದು ಭಾವಿಸುವಂತಾದೆನು.
ಏನೇನು ಯೋಚಿಸಿದೆನೋ ನನಗೆ ನೆನಪಿಲ್ಲ.
ನಾನು ನೋಡುತಿದ್ದಂತೆಯೇ ಆ ವೀರನು
ಗಂಭೀರ ಗತಿಯಿಂದ ವನದ ಒಳಗೆ ಮರೆದನು.
ಬೆಚ್ಚಿ ಎಚ್ಚತ್ತೆನು. ಆ ಕ್ಷಣ ಹುಟ್ಟಿತು ಚೈತನ್ಯ.
ನನ್ನನ್ನು ನಾನೇ ನೂರು ಸಲ ಹಳಿದುಕೊಂಡೆನು:

ಛೀ ಛೀ ಮೂಢೇ ! ಮಾತನಾಡಲಿಲ್ಲ; ಕೇಳಲಿಲ್ಲ ;
ಕ್ಷಮೆ ಬೇಡಲಿಲ್ಲ; ವನ್ಯಜೀವಿಯಂತೆ ಸಿಂತೆ ;
ನಿನ್ನನ್ನು ತಿರಸ್ಕರಿಸಿ ನಡೆದನಲ್ಲವೆ ವೀರ!
ಆ ಕ್ಷಣವೇ ನಾನು ಸತ್ತು ಮುಗಿದಿದ್ದರೆ
ಚೆನ್ನಾಗಿತ್ತು ಎಂದುಕೊಂಡೆನು. ಮಾರನೆಯ ಉದಯ
ನನ್ನ ಪುರುಷವೇಷವನ್ನು ದೂರ ಎಸೆದೆನು.
ಚಂದ್ರಗಾವಿಯನ್ನುಟ್ಟೆನು; ಕಡಗ ಪಾಡಗ
ಒಡ್ಯಾಣವನ್ನು ತಳೆದೆನು. ವಾಡಿಕೆಯದಲ್ಲದ
ಈ ಅಲಂಕಾರದಿಂದ ನಾಚಿ ನನ್ನೊಡಲು
ಪೂರಾ ಸಂಕೋಚಪಟ್ಟು ನೆಗ್ಗಿಹೋಗುತ್ತಿರಲು
ಯಾರೂ ಅರಿಯದಂತೆ ಆ ವನಕ್ಕೆ ಹೋಗಿ
ಅರಣ್ಯದ ಶಿವಾಲಯದಲ್ಲಿ ಅವನನ್ನು ನೋಡಿದೆನು.

ಮದನ

ಹೇಳು, ಬಾಲೆ. ನನ್ನೆದುರು ನಾಚಿಕೆ ಬೇಡ.
ನಾನು ಮನಸಿಜ ; ಮನಸ್ಸಿನ ಒಳಗಿನದು
ಸಕಲ ರಹಸ್ಯವನ್ನೂ ನಾನು ಬಲ್ಲೆನು.

ಚಿತ್ರಾಂಗದಾ

ನಾನು ಆ ವೇಳೆ ಅಲ್ಲಿ ಏನು ಹೇಳಿದೆನೋ
ಅವನಿಂದ ಪ್ರತಿಯಾಗಿ ಅದೇನು ಕೇಳಿದೆನೋ
ಚೆನ್ನಾಗಿ ನೆನಪಿಲ್ಲ. ಇನ್ನು ಕೆದಕಬೇಡ, ಭಗವನ್.
ಅಪಮಾನ ತಲೆಯ ಮೇಲೆ ಸಿಡಿಲಂತೆ ಎರಗಿತು ;
ಆದರೂ ನನ್ನನ್ನು ನೂರುಪಾಲು ಮಾಡದೆಹೋಯಿತು.
ನಾರಿಯದಾದರೂ ನನ್ನ ಪ್ರಾಣ ಹೀಗೆ ಗಡುಸಾದದ್ದು.
ಕೆಟ್ಟ ಕನಸಿನಿಂದ ವಿಹ್ವಲಳಾದಂತೆ ಅದು ಹೇಗೋ
ನನಗೇ ತಿಳಿಯದೆ ಮನೆಗೆ ಮರಳಿ ಬಂದೆನು.
ಅವನು ಕೊನೆಗೆ ಹೇಳಿದ ಮಾತು ಮಾತ್ರ

ಕಾದ ದಬ್ಬಳದಂತೆ ನನ್ನ ಕಿವಿಯನ್ನು ಇರಿಯುತಿತ್ತು :
"ನಾನು ಬ್ರಹ್ಮಚರ್ಯವ್ರತ ಧರಿಸಿದೇನೆ, ವರಾಂಗನೆ,
ನನಗೆ ಮದುವೆಯಾಗುವ ಅಧಿಕಾರವಿಲ್ಲ."

ಪುರುಷನ ಬ್ರಹ್ಮಚರ್ಯ! ನನ್ನ ಹಾಳು ಮೋರೆಯೋ
ನಾನು ಅದನ್ನು ಅಲುಗಿಸಲಾರದೆಹೋದೆನು.
ಮೀನಕೇತನ, ನೀನು ಬಲ್ಲೆ ಎಷ್ಟು ಋಷಿಮುನಿಗಳು
ತಮ್ಮ ಚಿರಾರ್ಜಿತವಾದ ತಪಃಫಲವನ್ನು
ನಾರಿಯರ ಪದ ತಲದಲ್ಲಿ ವಿಸರ್ಜನ ಮಾಡಿದಾರೆ.
ಕ್ಷತ್ರಿಯನ ಬ್ರಹ್ಮಚರ್ಯ! ನಾನು ಮನೆ ಸೇರಿದೆನು.
ಬಿಲ್ಲುಬಾಣ ಇದ್ದದನ್ನೆಲ್ಲ ಮುರಿದೆಸೆದೆನು ;
ಈ ವರೆಗೆ ನನಗೆ ಹೆಮ್ಮೆಯ ಸಂಪತ್ತಾಗಿದ್ದ
ಕಿಣಾಂಕಿತವಾದ ಈ ಕಠಿಣ ಬಾಹುಗಳನ್ನು
ವ್ಯರ್ಥ ಆಕ್ರೋಶಭರದಲ್ಲಿ ತಿರಸ್ಕರಿಸಿದೆನು.
ಯಾವಾಗ ನಾರಿಯಾದವಳು ಪುರುಷನ ಮನಸ್ಸನ್ನು
ಗೆಲ್ಲದೆ ಹೋದೆನೋ ಆಗ ಕಲಿವೆಲ್ಲ ವ್ಯರ್ಥ
ಎಂಬ ವಿಷಯವನ್ನು ಇಷ್ಟು ದಿನದ ಮೇಲೆ ಅರಿತೆನು.
ಅಬಲೆಯೆಂಬವಳ ಕೋಮಲ ಮೃಣಾಲ ಬಾಹುದ್ವಯ
ಈ ನನ್ನ ಬಾಹುಗಳಿಗಿಂತ ಶತಗುಣ ಬಲವುಳ್ಳವು.
ಪರಾವಲಂಬಿ, ಮುಗ್ಧ ಮೂರ್ಖ, ಕ್ಷೀಣತನುಲತೆಯ ಹೆಣ್ಣು
ಲಜ್ಜಾ ಭಯದಿಂದ ಲೀನಾಂಗಿನಿ ಆದ ಸಾಮಾನ್ಯ ಲಲನೆ,
ನಿಜವಾಗಿ ಧನ್ಯೆ ; ಅವಳ ಕಣ್ಣೆವೆ ಅದುರಿದರೆ
ಶೂರನ ಬಲ, ತಪಸ್ವಿಯ ತೇಜ, ಸೋಲನ್ನೊಪ್ಪುತ್ತವೆ.
ಹೇ ಅನಂಗದೇವ, ನನ್ನ ಎಲ್ಲ ಜಂಭವನ್ನೂ
ಒಂದೇ ಸಲಕ್ಕೆ ಕಿತ್ತುಕೊಂಡಿದೀಯೆ ;
ನನ್ನ ಎಲ್ಲ ವಿದ್ಯವನ್ನೂ ಎಲ್ಲ ಬಲವನ್ನೂ
ಒಮ್ಮೆಗೇ ನಿನ್ನಡಿಗೆ ಎರಗಿಸಿಕೊಂಡಿದೀಯೆ.
ಈಗ ನನಗೆ ನಿನ್ನ ವಿದ್ಯೆಯನ್ನು ಕಲಿಸಿಕೊಡು ;

ಅಬಲೆಯ ಬಲವನ್ನು, ನಿರಸ್ತ್ರಳ ಎಲ್ಲ ಅಸ್ತ್ರವನ್ನು,
ನನಗೆ ದಯಪಾಲಿಸು.

ಮದನ

ಆಗಲಿ, ಶುಭಾಂಗಿ ;
ನಾನು ನಿನ್ನ ಸಹಾಯಕನಾಗಿ ನಿಲ್ಲುತ್ತೇನೆ ;
ವಿಶ್ವವಿಜಯಿಯಾದ ಅರ್ಜುನನನ್ನು ಜಯಿಸಿ
ಬಂದಿಮಾಡಿ ನಿನ್ನ ಸಮ್ಮುಖದಲ್ಲಿ ಒಡ್ಡುತ್ತೇನೆ ;
ರಾಜ್ಞಿಯಾಗಿ ನೀನು ಅವನಿಗೆ ನಿನ್ನ ಇಚ್ಛೆ
ಎಷ್ಟು ಇದೆ ಅಷ್ಟು ದಂಡ ಪುರಸ್ಕಾರಕೊಡು,
ವಿದ್ರೋಹಿಯಾದ ಅವನಿಗೆ ತಕ್ಕ ಶಿಕ್ಷೆಯನ್ನು ವಿಧಿಸು.

ಚಿತ್ರಾಂಗದಾ

ಸಮಯವಿದ್ದರೆ, ನಾನೇ, ಇತರರ ನೆರವಿಲ್ಲದೆ,
ಸ್ವಲ್ಪಸ್ವಲ್ಪವಾಗಿ ಅವನ ಮನಸ್ಸನ್ನು ವಶಪಡಿಸಿಕೊಳ್ಳುತಿದ್ದೆನು
ದೇವತೆಗಳ ಸಹಾಯವನ್ನು ಬಯಸುತ್ತಿರಲಿಲ್ಲ.
ಜೊತೆಯಾಗಿ ಅವನೊಡನೆ ಬಾಳು ನಡಸುತ್ತ,
ಅವನ ಸಾರಥಿಯಾಗಿ ರಣದಲ್ಲಿ ರಥ ನಡಸಿ,
ಬೇಟೆಯಲ್ಲಿ ಅವನ ಅನುಚರನಾಗಿ ನಡೆದು,
ಶಿಬಿರದ್ವಾರದಲ್ಲಿ ಇರುಳು ಕಾವಲು ಕಾದು,
ಭಕ್ತನಂತೆ ಪೂಜಿಸಿ, ಭೃತ್ಯನಂತೆ ಊಳಿಗಮಾಡಿ,
ಕ್ಷತ್ರಿಯರ ವ್ರತವಾದ ಆರ್ತಪರಿತ್ರಾಣದಲ್ಲಿ
ಅವನಿಗೆ ಸಖನಂತೆ ಸಹಾಯಳಾಗುತಿದ್ದೆನು.
ಎಂದೋ ಒಂದು ದಿನ ಅವನು ನನ್ನನ್ನು
ಕೌತುಕದಿಂದ ನೋಡಿ 'ಯಾರು ಈ ಬಾಲಕ?
ಪೂರ್ವ ಜನ್ಮದ ದಾಸನೋ? ಹಿಂಬಾಲಿಸುವ ಸುಕೃತದಂತೆ
ಈ ಜನ್ಮದಲ್ಲಿ ಜೊತೆಗೆ ಸೇರಿರುವನು'
ಎಂದು ತನ್ನ ಮನಸ್ಸಿನಲ್ಲಿ ಯೋಚಿಸುತ್ತಿದ್ದನು.
ಕ್ರಮೇಣ ನಾನು ಅವನ ಹೃದಯ ದ್ವಾರವನ್ನು ತೆರೆದು

ಅಲ್ಲಿ ಚಿರವಾದ ಸ್ಥಾನವನ್ನು ಪಡೆಯುತ್ತಿದ್ದೆನು.
ನಾನು ಬಲ್ಲೆ, ನನ್ನ ಪ್ರೇಮ ಬರಿಯ ಕ್ರಂದನದ್ದಲ್ಲ.
ನಿಶೀಥ ನಯನಜಲದಲ್ಲಿ, ಮೆಲ್ಲನೆ, ಮಾತಿಲ್ಲದೆ
ಚಿರಮರ್ಮ ವ್ಯಥೆಯನ್ನು ಪಾಲನಮಾಡಿ
ಹಗಲ ಬೆಳಕಿನಲ್ಲಿ ಅದನ್ನು ಮ್ಲಾನವಾದ
ಹಾಸದಡಿಯಲ್ಲಿ ಮರಸಿ ಮುಚ್ಚಿಡುವಂಥ
ಹುಟ್ಟು ವಿಧವೆ ನಾರಿಯರುಂಟು! ನಾನಂಥವಳಲ್ಲ.
ನನ್ನ ಎಣಿಕೆ ಎಂದೂ ನಿಷ್ಫಲವಾಗದು.
ನನ್ನ ಸ್ವರೂಪವನ್ನು ಅವನಿಗೆ ಒಮ್ಮೆ ತಿಳಿಸ ಬಲ್ಲೆನೇ,
ನಿಶ್ಚಯವಾಗಿ ಅವನು ನನಗೆ ಸಿಕ್ಕುವನು. ಹಾ ಹತವಿಧಿ!
ಆ ದಿನ ನೀನು ಏನು ನೋಡಿದೆ! ನಾಚಿಕೆಯಿಂದ ಕುಗ್ಗಿದ
ಶಂಕಿತ ಕಂಪಿತ ನಾರಿಯನ್ನು; ವಿವಶ ವಿಹ್ವಲ
ಪ್ರಲಾಪ ವಾದಿನಿಯನ್ನು. ನಾನು ನಿಜವಾಗಿ ಅಷ್ಟೆಯೇ ?
ಯಾವ ಸಹಸ್ರ ನಾರಿಯರು ದಾರಿಯಲ್ಲಿ, ಮನೆಯಲ್ಲಿ,
ನಾಲ್ಕು ದಿಕ್ಕಿನಲ್ಲಿ ಕೇವಲ ಕ್ರಂದನಾಧಿಕಾರಿಗಳಿದಾರೆ,
ಅವರಿಗಿಂತ ನಾನು ಏನೂ ಹೆಚ್ಚೇ ಅಲ್ಲವೆ ?
ಆದರೆ, ಅಯ್ಯೋ, ನಾನೆ ನನ್ನ ಪರಿಚಯ ಮಾಡಿ ಕೊಡುವುದು
ಬಹುಮೆಲ್ಲನೆ, ಬಹುದಿನದಲ್ಲಿ, ಆಗತಕ್ಕ ಕೆಲಸ ;
ಚಿರಜೀವನದ ದುಡಿಮೆ; ಜನ್ಮಜನ್ಮಾಂತರದ ವ್ರತ.
ಆದ್ದರಿಂದ ನಾನು ನಿಮ್ಮ ಬಾಗಿಲಿಗೆ ಬಂದು
ಕಠೋರ ತಪ ಮಾಡಿದೇನೆ. ಹೇ ಭುವನವಿಜಯಿ
ಮನಸಿಜ, ಹೇ ಮಹಾಸುಂದರ ಋತುರಾಜ,
ಕೇವಲ ಒಂದು ದಿನ ಮಾತ್ರ ಜನ್ಮದಾತ ವಿಧಾತನ
ಈ ನಿಷ್ಕಾರಣ ಅಭಿಶಾಪ ಕುರೂಪ ನಾರೀರೂಪನ್ನು
ತೊಡೆದು ನನ್ನನ್ನು ಅಪೂರ್ವ ಸುಂದರಿಯಾಗಿ ಮಾಡಿ.
ಆ ಒಂದು ದಿನವನ್ನು ಕೊಡಿ; ಅವರ ನಂತರ ಎಲ್ಲ ದಿನ
ನನ್ನ ಕೈಯಲ್ಲಿರುವುವು. ಅವನನ್ನು ನೋಡಿದ ಆ ಕ್ಷಣ

ಅದೇ ಮುಹೂರ್ತದಲ್ಲಿ ನನ್ನ ಹೃದಯವನ್ನು
ಅಂತ್ಯವನ್ನರಿಯದ ವಸಂತಋತು ಹೊಕ್ಕಿತು.
ಆ ಯೌವನೋಚ್ಛ್ವಾಸದಲ್ಲಿ ನೋಡುತಿದ್ದಂತೆ,
ಸರ್ವಾಂಗವೂ ಅಪೂರ್ವ ಪುಲಕ ಭರದಿಂದ
ಲಕ್ಷ್ಮಿಯ ಪದತಲದ ಪದ್ಮದಂತೆ ಮಲರೀತೆ ಎಂದು
ಹಿರಿಯಾಸೆ ಹುಟ್ಟಿತು. ಓ ವಸಂತ, ಓ ವಸಂತಸಖ,
ಆ ನನ್ನ ಆಸೆಯನ್ನು ಬರೀ ಒಂದು ದಿನದ ಮಾತ್ರ
ತುಂಬಿರಿ.

**ಮದನ**

ತಥಾಸ್ತು.

**ವಸಂತ**

ತಥಾಸ್ತು. ಒಂದು ದಿನವಲ್ಲ,
ವಸಂತದ ಪುಷ್ಪ ಶೋಭೆ ಒಂದು ವರ್ಷದ ಕಾಲ
ನಿನ್ನ ಮೈಯನ್ನು ಮುತ್ತಿ ವಿಕಾಸವಾಗಿರುವುದು.

## ೨

## ಮಣಿಪುರದ ಅರಣ್ಯದಲ್ಲಿ ಶಿವಾಲಯ

**ಅರ್ಜುನ**

ನಾನು ನೋಡಿದ್ದು, ಅದೇನು ನಿಜವೊ ಮಾಟವೋ?
ನಿಬಿಡ ನಿರ್ಜನ ವನದಲ್ಲಿ ನಿರ್ಮಲ ಸರೋವರ;
ಅದೆಷ್ಟು ನಿಭೃತ ನಿರಾಲಯವೆಂದರೆ, ನನಗೆ ತೋರುತ್ತದೆ:
ನಿಸ್ತಬ್ಧ ಮಧ್ಯಾಹ್ನದಲ್ಲಿ ವನಲಕ್ಷ್ಮೀಗಣ
ಅಲ್ಲಿಗೆ ಸ್ನಾನಕ್ಕೆ ಹೋಗುತ್ತದೆಂದು; ಗಭೀರ ಪೂರ್ಣಿಮಾ ರಾತ್ರಿ
ಆ ಸುಪ್ತ ಸರಸಿಯ ದಟ್ಟವಾದ ಹಸುರಿನ
ಹುಲ್ಲದಡದಲ್ಲಿ ಶಂಕೆಯಿಲ್ಲದೆ ವಿಶ್ರಮಿಸಿಕೊಳ್ಳುತ್ತ
ನೆರಗುಜಾರಿ ಸುಖವಾಗಿ ನಿದ್ರಿಸುತ್ತದೆಂದು;

ಅಲ್ಲಿ ಮರಗಳ ಅಂತರಾಲದಲ್ಲಿ ಅಪರಾಹ್ಣದ ಕೊನೆಯಲ್ಲಿ
ಸಂಸಾರದ ಮರುಳಾಟ, ದುಃಖ ಸುಖ, ಏರು ಬೀಳು,
ಜೀವನದ ಅಸಂತೋಷ, ಅಸಂಪೂರ್ಣ ಆಶೆ,
ಮರ್ತ್ಯ ಮಾನವನ ಈ ಅನಂತ ದಾರಿದ್ರ್ಯ:
ಇವನ್ನೊಳಗೊಂಡ ಆಶೈಶವ ಜೀವನ ಕಥೆಯನ್ನು
ನೆನೆಯುತ್ತಿದ್ದೆನು. ಆಗ ದೊಡ್ಡ ಮರಗಳ ಕತ್ತಲಿಂದ
ಮೆಲ್ಲನೆ ಹೊರಬಂದು ಯಾರೋ ಆಕೆ ಸರೋವರದ
ಸೋಪಾನದ ಬಿಳಿಗಲ್ಲ ಹಾಸರೆಯ ಮೇಲೆ ನಿಂತಳು.
ಅದೆಂಥ ಅಪೂರ್ವರೂಪ! ಆ ಕೋಮಲ ಚರಣತಲದ
ಸೋಂಕಿನಿಂದ ಭೂಮಿ ಆನಂದದಿಂದ ಉಬ್ಬಬೇಕು.
ಉಷೆಯ ಕನಕಮೇಘ ಹೇಗೆ ನೋಡನೋಡುತ
ಒಂದುಗೂಡಿಕೊಂಡು ಪೂರ್ವಾಚಲದ ಶುಭ್ರಶಿರದ
ಅಕಲಂಕ ನಗ್ನ ಶೋಭೆಯನ್ನು ವಿಕಾಸಮಾಡುವುದೊ
ಹಾಗೆ ಅವಳು ಧರಿಸಿದ ವಸ್ತ್ರ ಸುಖಾವೇಶದಿಂದ
ಅವಳ ಅಂಗಲಾವಣ್ಯದಲ್ಲಿ ಬೆರೆಯಲೆಳಸುವಂತಿತ್ತು.
ಅವಳು ಸರೋವರದ ತೀರಕ್ಕೆ ಮೆಲ್ಲನೆ ಇಳಿದು
ಕುತೂಹಲದಿಂದ ತನ್ನ ಛಾಯೆಯನ್ನು ನೋಡಿಕೊಂಡು
ಬೆಚ್ಚಿ ಎದ್ದಳು ; ಮರುಕ್ಷಣ ಮೆಲ್ಲನೆ ನಕ್ಕು
ಎಡತೋಳನ್ನು ಬೀಸಿ ವಿಲಾಸದಿಂದ
ತನ್ನ ಹೆರಳನ್ನು ಬಿಚ್ಚಿದಳು. ಆ ಮುಕ್ತಕೇಶ
ಅವಳಡಿಯ ಬಳಿ ಬಿದ್ದು ವಿಹ್ವಲವಾಯಿತು.
ಆ ಮೇಲೆ ಅವಳು ಸೆರಗನ್ನು ಓಸರಿಸಿ ತಲೆಬಾಗಿ,
ಆಲಿಂಗನ ಸುಖಕ್ಕಾಗಿ ಕೋಮಲ ಕಾತರವಾಗಿ
ಪ್ರೇಮದ ಕರುಣೆಯಿಂದ ತುಂಬಿರುವ ಬಾಹುಗಳನ್ನು
ನೋಡಿಕೊಂಡಳು, ತಲೆಯನ್ನು ಬಾಗಿ
ಪರಿಸ್ಫುಟವಾದ ತನ್ನ ದೇಹತಟದಲ್ಲಿ ಕಂಡ
ಯೌವನದ ಉನ್ಮುಖ ವಿಕಾಸವನ್ನು ದೃಷ್ಟಿಸಿದಳು.

ನವಗೌರತನುತಲದಲ್ಲಿ ಕೆಂಪೇರಿ ಕಂಡ
ನಿಡುನಾಚಿಕೆಯ ಹೊದರನ್ನು ದೃಷ್ಟಿಸಿ ನೋಡಿದಳು.
ಸರೋವರದಲ್ಲಿ ಎರಡು ಅಡಿಯನ್ನೂ ಅದ್ದಿ
ತನ್ನ ಚರಣಗಳ ಚೆಲುವನ್ನು ಈಕ್ಷಿಸಿದಳು.
ಅವಳ ಅಚ್ಚರಿಗೆ ಕೊನೆ ಇಲ್ಲ. ಅದನ್ನು ನೋಡಿದರೆ,
ಶ್ವೇತ ಕಮಲವೊಂದು ಕೋರಕ ವಯಸ್ಸನ್ನು
ಕಣ್ಮುಚ್ಚಿ ಕಳೆದು ಒಂದು ಉದಯದಲ್ಲಿ
ಆಗತಾನೇ ಪೂರ್ಣ ಶೋಭೆಯನ್ನು ಪಡೆದು,
ಕೊರಳನ್ನು ಚಾಚಿ ನೀಲ ಸರೋವರದ ಜಲದಲ್ಲಿ
ತನ್ನನ್ನು ಮೊದಲ ಸಲ ನೋಡಿಕೊಂಡು
ಬೆರಗಿನಿಂದ ದಿಟ್ಟಿಸುವಂತೆ ಅವಳೂ ತನ್ನನ್ನು
ಅದೇ ಮೊದಲ ಸಲ ನೋಡಿಕೊಂಡಂತಿತ್ತು.
ಮರುಕ್ಷಣದಲ್ಲಿ ಯಾವ ದುಃಖದಿಂದಲೊ ಏನೊ
ಮುಖದ ನಗೆ ಮರೆಯಿತು; ಕಣ್ಣು ಮ್ಲಾನವಾದುವು.
ಅವಳು ತನ್ನ ಕೇಶಪಾಶವನ್ನು ಎತ್ತಿಕಟ್ಟಿ
ದೇಹವನ್ನು ಸೆರಗಿನಿಂದ ಹೊದೆದು ನಿಟ್ಟುಸಿರು ಬಿಟ್ಟು,
ಸಂಜೆಯು ಹೊಂಬಣ್ಣ ಮುಖವನ್ನು ಮ್ಲಾನ ಮಾಡಿ
ಕತ್ತಲ ಇರುಳೆದುರಲ್ಲಿ ಮೃದುಪದದಿಂದ ಮರೆಯುವಂತೆ,
ಮೆಲ್ಲನೆ ಹೊರಟುಹೋದಳು. ಧರಣಿ ತನ್ನೈಸಿರಿಯನ್ನು
ಹೊರಕ್ಕೆ ಹಾಕಿತೆಂದು ನಾನು ಯೋಚಿಸಿದೆನು.
ಆಸೆಯ ಪರಾಕಾಷ್ಠೆ ಹೊಳೆದು ಮರೆದಂತಾಯಿತು.
ಆ ಪೂರ್ಣ ಸೌಂದರ್ಯದ ಸನ್ನಿಧಿಯಲ್ಲಿ,
ಸಿಂಹವಾಹನೆಯ ಭುವನ ವಾಂಛಿತವಾದ
ಅರುಣ ಚರಣತಲದಲ್ಲಿ ಮೃಗರಾಜ ಸಿಂಹ ಹೇಗೆ ಹಾಗೆ,
ಎಷ್ಟು ಯುದ್ಧ ಎಷ್ಟು ಹಿಂಸೆ ಎಷ್ಟು ಆಟೋಪ
ಪುರುಷನ ಶೌರ್ಯದ ಹೆಮ್ಮೆ ವೀರನ ನಿತ್ಯಕೀರ್ತಿಯ ಆಸೆ
ಎಷ್ಟು ಅದು ಶಾಂತವಾಗಿ ಭೂಮಿಯಲ್ಲಿ ಕೆಡೆಯುವುದು

**ಚಿತ್ರಾಂಗದಾ**

ಎಂದು ನಾನೆಣಿಸಿದೆನು. ಇನ್ನೊಮ್ಮೆ ಏನಾದರೂ—
ಯಾರು ಬಾಗಿಲು ತಳ್ಳುವುದು ?

ಬಾಗಿಲು ತೆರೆಯುತ್ತದೆ

ಇದೇನು ! ಅದೆ ಆಕಾರ !
ಶಾಂತವಾಗು ಓ ಹೃದಯವೇ! ನನ್ನನ್ನು ನೋಡಿದ್ದರಿಂದ
ಏನೂ ಭಯಪಡುವುದು ಬೇಡ, ವರಾನನೇ.
ನಾನು ಕ್ಷತ್ರಕುಲ ಜಾತನು : ಭಯ ಭೀತ ದುರ್ಬಲರ
ಭಯ ನಿವಾರಕನು.

**ಚಿತ್ರಾಂಗದಾ**

ಆರ್ಯ, ನೀನು ನನ್ನ ಅತಿಥಿ ;
ಈ ದೇವಾಲಯ ನನ್ನ ಆಶ್ರಮ. ಯಾವ ಸತ್ಕಾರದಿಂದ
ನಿನ್ನನ್ನು ಸಂತೋಷಪಡಿಸಲಿ ಎಂದು ನಿನ್ನನ್ನು ಬೇಡುವುದು
ಹೇಗೆ ಅದನ್ನು ಅರಿಯದೆ ಇದೇನೆ.

**ಅರ್ಜುನ**

ಓ ಸುಂದರಿ
ನಿನ್ನ ದರ್ಶನದಿಂದಲೇ ಅತಿಥಿ ಸತ್ಕಾರ ಆಯಿತು.
ಈ ಉಪಚಾರದ ಮಾತೇ ನನ್ನ ಸೌಭಾಗ್ಯ.
ಅಪರಾಧವಾಗದಿದ್ದರೆ ಒಂದು ಪ್ರಶ್ನೆ ಕೇಳಬೇಕು ಎಂಬ
ಬಯಕೆಯಿಂದ ನನ್ನ ಮನಸ್ಸು ಕುತೂಹಲವಾಗಿದೆ.

**ಚಿತ್ರಾಂಗದಾ**

ನಿಸ್ಸಂಕೋಚವಾಗಿ ಕೇಳಬೇಕು.

**ಅರ್ಜುನ**

ಓ ಶುಚಿಸ್ಮಿತೆ !
ಯಾವ ಕಠೋರ ವ್ರತಕ್ಕಾಗಿ ಜನಹೀನ ದೇವಾಲಯದಲ್ಲಿ

ಇಂಥ ರೂಪರಾಶಿಯನ್ನು ವೃಥಾ ಹರಿಯಬಿಟ್ಟು
ಹತಭಾಗ್ಯರಾದ ಪುರುಷರನ್ನು ನೀನು ವಂಚಿಸಿದೀಯೆ?

ಚಿತ್ರಾಂಗದಾ

ಗುಪ್ತವಾದ ಒಂದು ಬಯಕೆಯನ್ನು ಸಾಧಿಸಲೆಂದು
ಒಂದೇ ಮನದಿಂದ ಶಿವಪೂಜೆ ಮಾಡುತಿದೇನೆ.

ಅರ್ಜುನ

ಆಹಾ
ಎಲ್ಲ ಲೋಕ ಬಯಸುವ ವಸ್ತುವಾಗಿರುವ ನೀನು
ಬಯಸಬಲ್ಲುದು ಏನಿದೆ? ಓ ಸುದರ್ಶನೆ,
ಉದಯಗಿರಿಯಿಂದ ಅಸ್ತಾಚಲದವರೆಗೆ
ಎಲ್ಲ ಧರಣಿಯನ್ನು ನಾನು ಸುತ್ತಿದೇನೆ.
ಸಪ್ತ ದ್ವೀಪಗಳಲ್ಲಿ ಎಲ್ಲಿ ಯಾವುದು ಇದೆ,
ದುರ್ಲಭವಾದುದು, ಸುಂದರವಾದುದು, ಅಚಿಂತ್ಯ ಮಹತ್ವದ್ದು,
ಎಲ್ಲವನ್ನೂ ಕಣ್ಣಾರೆ ನೋಡಿದೇನೆ.
ಏನು ಬಯಸುವೆ, ಯಾರನ್ನು ಬಯಸುವೆ, ಹೇಳಿದರೆ
ನನ್ನಿಂದ ಸುದ್ದಿ ತಿಳಿಯುವುದು.

ಚಿತ್ರಾಂಗದಾ

ನಾನು ಯಾರನ್ನು
ಬಯಸುವೆನೊ ಅವನು ತ್ರಿಭುವನ ಪರಿಚಿತನು.

ಅರ್ಜುನ

ಈ ಲೋಕದ ಆ ಬಹು ಪುಣ್ಯಶಾಲಿ ಯಾರು?
ಅಮರವಾಂಛಿತವಾದ ನಿನ್ನ ಮನೋರಾಜ್ಯದಲ್ಲಿ
ದುರ್ಲಭವಾದ ಪೀಠವನ್ನು ಪಡೆದುಕೊಂಡಿರುವುದು
ಯಾರ ಯಶೋರಾಶಿ? ಅವನ ಹೆಸರನ್ನು ಹೇಳು.
ಕೇಳಿ ಕೃತಾರ್ಥನಾಗುತ್ತೇನೆ.

**ಚಿತ್ರಾಂಗದಾ**

ಆತನು
ಸರ್ವಶ್ರೇಷ್ಠ ನರಪತಿ ಕುಲದಲ್ಲಿ ಹುಟ್ಟಿದಾತನು ;
ಸರ್ವಶ್ರೇಷ್ಠ ವೀರನು.

**ಅರ್ಜುನ**

ಮಿಥ್ಯಾಖ್ಯಾತಿ ಬೆಳೆದೇಳುತ್ತದೆ,
ಬಾಯಿಂದ ಬಾಯಿಗೆ, ಮಾತಿಂದ ಮಾತಿಗೆ :
ಕ್ಷಣ ಸ್ಥಾಯಿ ಮಂಜು ಸೂರ್ಯನು ಏಳದಿರುವ ವೇಳೆ
ಉಷೆಯನ್ನು ವಂಚಿಸಿ ಮುಚ್ಚುವ ರೀತಿ.
ಅಚ್ಚಮನದ ಬಾಲೆ, ದುರ್ಲಭಸೌಂದರ್ಯಸಂಪತ್ತಿನಿಂದ
ಸುಳ್ಳಿನ ಉಪಾಸನೆಮಾಡಬೇಡ; ಹೇಳು ಕೇಳೋಣ
ಯಾರು ಧರಣಿಯ ಸರ್ವಶ್ರೇಷ್ಠ ಕುಲದ ಸರ್ವಶ್ರೇಷ್ಠ ವೀರ ?

**ಚಿತ್ರಾಂಗದಾ**

ಪರಕೀರ್ತಿ ಸಹಿಸದ ನೀನು ಯಾರು, ಸಂನ್ಯಾಸಿ ?
ಯಾರರಿಯರು ಈ ಭುವನ ಮಧ್ಯದಲ್ಲಿ
ರಾಜವಂಶಚೂಡವಾದ ಕುರುವಂಶವನ್ನು ?

**ಅರ್ಜುನ**

ಕುರುವಂಶ !

**ಚಿತ್ರಾಂಗದಾ**

ಯಾರು ಅಕ್ಷಯ ಯಶಸ್ವಿ, ವೀರೇಂದ್ರ ಕೇಸರಿ,
ಅವನ ಹೆಸರನ್ನು ಕೇಳಿರುವೆಯಾ ಹೇಗೆ ?

**ಅರ್ಜುನ**

ಹೇಳು, ಭದ್ರೆ, ನಿನ್ನ ಬಾಯಿಂದ ಕೇಳುವೆನು.

**ಚಿತ್ರಾಂಗದಾ**

ಅರ್ಜುನ: ಗಾಂಡೀವಧರ ; ಭುವನ ವಿಜಯಿ.
ಅಖಿಲ ಜಗತ್ತಿನಿಂದ ಆ ಅಕ್ಷಯನಾಮವನ್ನು ಕಸಿದು

ಜತನವಾಗಿ ಮುಚ್ಚಿಟ್ಟು ಈ ಕುಮಾರೀ ಹೃದಯವನ್ನು
ತುಂಬಿಕೊಂಡಿದೇನೆ. ಓ ಬ್ರಹ್ಮಚಾರಿ,
ನೀನೇಕೆ ಅಧೀರನಾದೆ? ಹಾಗಾದರೆ ಇದು ಸುಳ್ಳೇ?
ಅರ್ಜುನನ ಖ್ಯಾತಿ ಸುಳ್ಳೆ? ಈಗಲೇ ಹೇಳು.
ಅದು ಸುಳ್ಳಾದರೆ ನನ್ನ ಹೃದಯವನ್ನು ಬಿರಿದು
ಆ ಹೆಸರನ್ನು ಕಿತ್ತೆಸೆಯುವೆನು. ಶೂನ್ಯದಿಂದ ಶೂನ್ಯಕ್ಕೆ
ಬಾಯಿಂದ ಬಾಯಿಗೆ ಹಾರುತ್ತ ಅದು ಸುಳಿಯಲಿ.
ನಾರಿಯ ಹೃದಯದಲ್ಲಿ ಅದಕ್ಕೆ ಸ್ಥಾನವಿಲ್ಲ.

**ಅರ್ಜುನ**

ವರಾಂಗನೆ!
ಆ ಅರ್ಜುನ, ಆ ಪಾಂಡವ, ಆ ಗಾಂಡೀವಧರ,
ಆ ಭಾಗ್ಯವಾನ್ ನಿನ್ನ ಚರಣದಲ್ಲಿ ಶರಣಾಗತನು.
ಅವನ ಹೆಸರು, ಅವನ ಖ್ಯಾತಿ, ಶೌರ್ಯ ವೀರ್ಯ,
ಮಿಥ್ಯವಾಗಲಿ ಸತ್ಯವಾಗಲಿ, ಯಾವ ದುರ್ಲಭ ಲೋಕದಲ್ಲಿ
ಅವನಿಗೆ ಸ್ಥಾನದಾನ ಮಾಡಿದೀಯೊ ಅಲ್ಲಿಂದ
ಅವನನ್ನು ಚ್ಯುತನಾಗಿ ಮಾಡದಿರು, ಪುಣ್ಯವೆಚ್ಚವಾಗಿ
ಸ್ವರ್ಗಸುಖ ಮುಗಿದ ಹತಭಾಗ್ಯನಂತೆ.

**ಚಿತ್ರಾಂಗದಾ**

ನೀನು ಪಾರ್ಥ?

**ಅರ್ಜುನ**

ಹೌದು. ನಾನು ಪಾರ್ಥ. ನಿನ್ನ ಹೃದಯದ್ವಾರದಲ್ಲಿ
ಪ್ರೇಮಾರ್ತನಾಗಿರುವ ಅತಿಥಿ.

**ಚಿತ್ರಾಂಗದಾ**

ಕೇಳಿ ಉಂಟು, ಅರ್ಜುನನು
ದ್ವಾದಶವರ್ಷ ಬ್ರಹ್ಮಚರ್ಯವನ್ನು ಪಾಲಿಸುತ್ತಿರುವನೆಂದು.
ಆ ವೀರನು ಒಬ್ಬ ಕಾಮಿನಿಯನ್ನು ಬಯಸಿ
ವ್ರತಭಂಗ ಮಾಡಿಯಾನೆ! ಸಂನ್ಯಾಸಿ, ನೀನು ಪಾರ್ಥನೆ?

ಅರ್ಜುನ

ನೀನು ಮುರಿದೆ ನನ್ನ ವ್ರತವನ್ನು, ಚಂದ್ರನೆದ್ದು
ನಿಮಿಷದಲ್ಲಿ ನಿಶೀಥದ ಯೋಗನಿದ್ರಾಂಧಕಾರವನ್ನು
ಮುರಿದು ಬಿಡುವಂತೆ.

ಚಿತ್ರಾಂಗದಾ

ಛೀ, ಪಾರ್ಥ, ಛೀ,
ನಾನು ಏನು ? ನನ್ನದೇನಿದೆ ? ನೀನು ಏನು ಕಂಡೆ ?
ನನ್ನನ್ನೇನೆಂದು ತಿಳಿದೆ ? ಯಾರಿಗಾಗಿ ನಿನ್ನನ್ನೇ ಮರೆತೆ ?
ಮುಹೂರ್ತ ಮಾತ್ರದಲ್ಲಿ ಸತ್ಯವನ್ನು ತೊರೆದು
ಯಾರಿಗಾಗಿ ಅರ್ಜುನನನ್ನು ಅನರ್ಜುನ ಮಾಡುವೆ ?
ನನಗಾಗಿ ಅಲ್ಲ. ಈ ನೀಲೋತ್ಪಲ ನಯನಗಳಿಗಾಗಿ
ಸವ್ಯಸಾಚಿ ಅರ್ಜುನನು ತನ್ನ ಎರಡು ಕೈಗಳಿಂದಲೂ
ಸತ್ಯದ ಕಟ್ಟುಗಳನ್ನು ಕಿತ್ತೊಗೆದು ಬಂದು
ಬೆಣ್ಣೆಯಂತ ಈ ತೋಳುಗಳಲ್ಲಿ ಸಿಕ್ಕಿಬಿದ್ದನೇ ?
ಪ್ರೇಮದ ಮರ್ಯಾದೆ ಎತ್ತ ಹೋಯಿತು ?
ಎಲ್ಲಿ ಹೋಗಿಬಿದ್ದಿತು ನಾರಿಯ ಗೌರವ ?
ಆಹಾ ನನ್ನನ್ನು, ನನ್ನ ಈ ಅಲ್ಪ ದೇಹ,
ಮೃತ್ಯುಹೀನ ಆತ್ಮವನ್ನು ಅದರ ಕ್ಷಣಸ್ಥಾಯಿ ಛದ್ಮವೇಷ
ಅತಿಕ್ರಮಿಸಿತು. ಈಗತಾನೆ ತಿಳಿದೆನು
ನಿನ್ನ ಶೌರ್ಯದ ಖ್ಯಾತಿ ಮಿಥ್ಯ ಎಂಬುದನ್ನು.

ಅರ್ಜುನ

ಖ್ಯಾತಿ ಮಿಥ್ಯಾ, ವೀರ್ಯ ಮಿಥ್ಯಾ, ಈಗ ಅರಿತೆನು.
ಈಗ ನನಗೆ ಸಪ್ತ ಲೋಕ ಸ್ವಪ್ನವೆನಿಸಿದೆ.
ಕೇವಲ ನೀನು ಒಬ್ಬಳು ಪೂರ್ಣ. ನೀನೇ ಎಲ್ಲ.
ವಿಶ್ವದ ಐಶ್ವರ್ಯ ನೀನು; ಒಬ್ಬಳೆ ನಾರಿ ನೀನು.
ನೀನು ಸಕಲ ದೈನ್ಯದ ಮಹದಂತವಾದೆ;

ಸಕಲ ಕರ್ಮಕ್ಕೆ ನೀನು ವಿಶ್ರಾಮ ರೂಪಿಣೀ ;
ಹೇಗೋ ಏನೋ ಅಕಸ್ಮಾತ್ ನಿನ್ನನ್ನು ನೋಡಿ
ನಾನು ಅರಿತೆನಾದೆನು : ಯಾವ ಆನಂದ ಕಿರಣದಲ್ಲಿ,
ಪ್ರಥಮ ಪ್ರತ್ಯೂಷದಲ್ಲಿ, ಅಂಧಕಾರ ಮಹಾರ್ಣವದಲ್ಲಿ,
ಸೃಷ್ಟಿ ಕಮಲವು ದಿಕ್ಕು ದಿಕ್ಕಿನಲ್ಲಿ ಎದ್ದಿತು ;
ಒಂದು ಮುಹೂರ್ತದ ಮಧ್ಯೆ ಕಣ್ಣು ತೆರೆಯಿತು.
ಉಳಿದ ಎಲ್ಲವನ್ನೂ ಪಲಪಲವಾಗಿ ತಿಲತಿಲವಾಗಿ
ಬಹುದಿನದನಂತರವೇ ಅರಿಯಬಹುದು ;
ಆದರೆ ನಿನ್ನನ್ನು ಯಾವಾಗ ನೋಡಿದೆನೋ ಆಗಲೇ
ನಿನ್ನನ್ನು ಕುರಿತು ಎಲ್ಲವನ್ನೂ ತಿಳಿಯಲು ಆಯಿತು.
ಆದರೂ ಕೊನೆ ಮುಟ್ಟಿಲ್ಲ. ಕೈಲಾಸ ಶಿಖರದಲ್ಲಿ ಒಮ್ಮೆ
ಮೃಗಯಾಶ್ರಾಂತನಾದ ನಾನು ಬಳಲಿ ಬಾಯಾರಿ
ನಡುಹಗಲು ಹೂವಿಂದ ಸೊಗಸಿದ ಮಾನಸ ಸರಸಿಯ
ತಟವನ್ನು ಸಾರಿದೆನು. ಸುರಸರಸಿಯ ನೀರನ್ನು ನೋಡಿದ
ಆ ಕ್ಷಣವೇ ಕಣ್ಣಿಗೆ ಅದರ ಅನಂತ ಅತಲ
ಸ್ವಚ್ಛ ಜಲದ ಎಷ್ಟು ಆಳಕ್ಕೂ ಕಂಡಿತು.
ಮಧ್ಯಾಹ್ನ ರವಿರಶ್ಮಿ ರೇಖೆಗಳು, ಸ್ವರ್ಣ ನಳಿನಗಳ
ಸುವರ್ಣಮೃಣಾಲದ ಜೊತೆ ಬೆರೆತು,
ಅಗಾಧ ಅಸೀಮಕ್ಕೆ ಇಳಿದವು ; ಜಲದ ಹಿಲ್ಲೋಲದಲ್ಲಿ
ಲಕ್ಷಕೋಟಿ ಅಗ್ನಿಮಯಿ ನಾಗಿನಿಯರಂತೆ
ಅಕ್ರವಕ್ರವಾಗಿ ಬಳುಕಿದವು. ಭಗವಾನ್ ಸೂರ್ಯನು
ಕರ್ಮಕ್ಲಾಂತ ಜನ್ಮಶ್ರಾಂತ ಮರ್ತ್ಯರಿಗೆ
ಅನಂತ ಶೀತಲ ಸುಂದರ ಮರಣ ಎಲ್ಲಿದೆ ಎಂಬುದನ್ನು
ಸಹಸ್ರ ಅಂಗುಲಿಗಳಿಂದ ನಿರ್ದೇಶಿಸಿ ತೋರಿದಂತಿತ್ತು.
ಆ ಸ್ವಚ್ಛ ಅತಲತೆಯನ್ನು ನಿನ್ನಲ್ಲಿ ನಾನು
ನೋಡುತ್ತಿದ್ದೇನೆ. ನಾಲ್ಕು ದಿಕ್ಕಿನಿಂದ
ದೇವರ ಅಂಗುಲಿ ನನಗೆ ತೋರಿಸುವಂತಿದೆ

**ಚಿತ್ರಾಂಗದಾ**

ಈ ನಿನ್ನ ಅಲೌಕಿಕ ದೀಪ್ತಿಯ ಮಧ್ಯೆ
ಕೀರ್ತಿಕ್ಲಿಷ್ಟ ಜೀವನದ ಪೂರ್ಣನಿರ್ವಾಪಣವನ್ನು.

**ಚಿತ್ರಾಂಗದಾ**

ನಾನಲ್ಲ; ನಾನಲ್ಲ; ಹಾ, ಪಾರ್ಥ, ಹಾ,
ದೇವರ ಎಂಥ ಮೋಸ! ನಡೆ, ನಡೆ, ಹಿಂತಿರುಗು.
ಹಿಂದಿರುಗು, ಓ ವೀರ. ಮಿಥ್ಯೆಗೆಯ್ಯಬೇಡ
ನಿನ್ನ ಉಪಾಸನೆಯನ್ನು; ನಿನ್ನ ಶೌರ್ಯವೀರ್ಯಮಹತ್ವವನ್ನು
ಮಿಥ್ಯೆಯ ಪಾದದಲ್ಲಿ ಹಾಕಬೇಡ. ನಡೆ ಹಿಂದಿರುಗು.

೩

ಮರದಡಿ ಚಿತ್ರಾಂಗದಾ

**ಚಿತ್ರಾಂಗದಾ**

ಹಾ, ಹಾ, ಇದನ್ನು ಹಿಂದಿರುಗಿಸಲು ಸಾಧ್ಯವೇ?
ತೃಷೆಯಿಂದ ಆರ್ತವಾಗಿ ಕಂಪಿತವಾಗಿ
ಕಿಡಿಯನ್ನುಗುಳುವ ಹೋಮಾಗ್ನಿ ಶಿಖಿಯಂತಿರುವ
ವೀರಹೃದಯದ ನಡುನಡುಗುವ ಈ ಉತ್ಕಂಠೆಯನ್ನು?
ಅವನಾ ಕಣ್ಣ ನೋಟ ಆ ಅಂತರ್ಯದ ತೋಳೆಂಬಂತೆ
ನನ್ನನ್ನು ಎಳೆದೊಯ್ಯಲು ಬಂದಿವೆ. ಉತ್ತಪ್ತ ಹೃದಯ
ಸರ್ವಾಂಗವನ್ನು ಭೇದಿಸಿಕೊಂಡು ಹೊರಬೀಳ ಬಯಸುತ್ತಿದೆ.
ಅದರ ಕ್ರಂದನ ಧ್ವನಿ ಪ್ರತಿ ಅಂಗದಲ್ಲಿ ಕೇಳ ಬಂದಂತಿದೆ.
ಈ ದಾಹವನ್ನು ತಡೆಯುವುದು ಸಾಧ್ಯವೇ?

ವಸಂತ ಮದನರ ಪ್ರವೇಶ

ಓ ಅನಂಗದೇವ ಇದಾವ ಸೌಂದರ್ಯಶಿಖಿಯಲ್ಲಿ
ನನ್ನನ್ನು ಮುತ್ತಿರುವೆ? ನಾನೇ ಉರಿಯುತ್ತಿದೇನೆ; ಅಂತೇ
ಉರಿಸುತ್ತಿದೇನೆ.

**ಮದನ**

ಹೇಳು, ತನ್ವಿ, ನಿನ್ನೆಯ ವಿವರವನ್ನು.
ನಾನೆಚ್ಚ ಪುಷ್ಪಶರದಲ್ಲಿ ಕೆಲಸ ಸಾಧಿಸಿತೆ?
ಕೇಳಲು ನನಗಾಸೆ.

**ಚಿತ್ರಾಂಗದಾ**

ನಿನ್ನೆ ಸಂಜೆಯಲ್ಲಿ
ಸರಸಿಯ ತೃಣಪುಂಜ ತೀರದಲ್ಲಿ, ಉದುರಿದ
ವಸಂತ ಪುಷ್ಪಗಳ ಪುಷ್ಪಶಯ್ಯೆ ಹಾಸಿದ್ದೆನು;
ಮೈ ಸೋತು ಅನ್ಯಮನಸ್ಕಳಾಗಿ ಮಲಗಿದ್ದೆನು;
ಬಳಲಿದ ತಲೆಯನ್ನು ಎಡತೋಳ ಮೇಲಿಟ್ಟು
ಹಿಂದಿನ ದಿನದ ಮಾತನ್ನು ನೆನೆಯುತ್ತಿದ್ದೆನು.
ಯಾವ ಸ್ತುತಿಯನ್ನು ಅರ್ಜುನನ ಬಾಯಿಂದ
ಕೇಳಿದ್ದೆನೋ ಅದನ್ನು ನೆನಪಿಗೆ ತರುತ್ತಿದ್ದೆನು.
ದಿನದ ಸೇರಿಸಿಟ್ಟ ಅಮೃತದಿಂದ ಒಂದೊಂದು
ಬಿಂದುವನ್ನು ತೆಗೆದುಕೊಂಡು ಸವಿಯುತ್ತಿದ್ದೆನು.
ಹಿಂದಿನ ವಿಷಯವನ್ನು ಗತಜನ್ಮದ ಮಾತೆಂಬಂತೆ
ಮರೆತಿದ್ದೆನು: ನಾನು ರಾಜ ಕನ್ಯೆ ಅಲ್ಲ ಎಂಬಂತೆ
ನನಗೆ ಪೂರ್ವಾಪರ ಇಲ್ಲ ಎಂಬಂತೆ, ನಾನು
ಧರಾತಲದಲ್ಲಿ ಒಂದೇ ದಿನದಲ್ಲಿ ಅರಳಿದ
ಮಾತೃಹೀನ ಪಿತೃಹೀನ ಅರಣ್ಯಪುಷ್ಪ ಎಂಬಂತೆ.
ಬರಿಯ ಒಂದು ಹೊತ್ತೇ ಪೂರ್ಣಾಯುಸ್ಸು;
ಅಷ್ಟರಲ್ಲೇ ಕೇಳಬೇಕು ಭ್ರಮರ ಗುಂಜನ ಗೀತಿ;
ವನವನಾಂತರದ ಆನಂದದ ಮರ್ಮರ; ಆಮೇಲೆ,
ನೀಲಾಂಬರದಿಂದ ಮೆಲ್ಲನೆ ಕಣ್ಣು ಬಾಗಿಸಿ ಅದು
ಕೊರಳನ್ನು ಚಾಚಿ ವಾಯುಸ್ಪರ್ಶದ ಭರದಲ್ಲಿ
ಕ್ರಂದನವೂ ಇಲ್ಲದೆ ಉರುಳಿ ಕಳೆದು ಹೋಗಬೇಕು.

ಚಿತ್ರಾಂಗದಾ

ಆ ಮಧ್ಯೆ ಆ ಕುಸುಮದ ಚರಿತ್ರೆ ಆದಿ ಅಂತ್ಯ ಇಲ್ಲದೆ
ಪೂರಯಿಸುವುದು.

ವಸಂತ

ಒಂದೇ ಪ್ರಭಾತದಲ್ಲಿ
ಅರಳುತ್ತದೆ ಅನಂತ ಜೀವನ ಓ ಸುಂದರಿ.

ಮದನ

ಸಂಗೀತದ ಒಂದು ಕ್ಷಣಿಕ ತಾನದಲ್ಲಿ ಯಾವ ರೀತಿ
ಅಂತ್ಯವಿಲ್ಲದ ಅರ್ಥ ಝೇಂಕರಿಸಿ ಮೊರೆದೇಳುತ್ತದೆ
ಆ ರೀತಿ. ಹೇಳು, ಆ ಮೇಲೆ ?

ಚಿತ್ರಾಂಗದಾ

ನೆನೆಯುತ್ತ ನೆನೆಯುತ್ತ
ದಕ್ಷಿಣಾನಿಲದಲ್ಲಿ ನಿದ್ರೆಯ ಹಿಲ್ಲೋಲ
ಸರ್ವಾಂಗವನ್ನು ಸೋಕಿದವು. ಅರಳಿದ ಮಾಲತೀಲತೆ
ಸಪ್ತಪರ್ಣದ ಶಾಖೆಯಿಂದ ನನ್ನ ಆಲಸ್ಯ ಆವೇಶದಲ್ಲಿ
ನನ್ನ ಗೌರತನುವಿಗೆ ನಿಶ್ಯಬ್ದ ಚುಂಬನವನ್ನು
ಕಳುಹುತ್ತಿತ್ತು. ಹೂಗಳು ಕೆಲವು ತಲೆಯ ಬಳಿ
ಕೆಲವು ಕಾಲಬಳಿ ಕೆಲವು ಸ್ತನ ತಟ ಮೂಲದಲ್ಲಿ
ಬಿದ್ದು ತಮ್ಮ ಮರಣಶಯ್ಯೆಯನ್ನು ಹಾಸಿಕೊಂಡುವು.
ಎಷ್ಟೋ ಹೊತ್ತು ಕದಲದೆ ಇದ್ದೆನು. ಆವೇಳೆ
ನಿದ್ರೆಯ ಮಧ್ಯೆ ಯಾವಾಗಲೋ ಅರಿತೆನು
ಯಾರದೋ ಮೋಹಗೊಂಡ ಕಣ್ಣುಗಳ ನೋಟ
ಹತ್ತು ಬೆರಳಂತೆ ತೀವ್ರ ಲಾಲಸೆಯಿಂದ
ನನ್ನ ನಿದ್ರಾಲಸ ದೇಹವನ್ನು ಸೋಕಿದುದನ್ನು.
ಬೆಚ್ಚಿ ನಿದ್ರೆ ಅರಿತು ಎಚ್ಚತ್ತೆನು. ನೋಡಿದೆನು
ಸಂನ್ಯಾಸಿ ಕಾಲಬಳಿ ನಿಶ್ಚಲ ಪ್ರತಿಮೆಯಂತೆ
ಎವೆಯಿಕ್ಕದೆ ದೃಷ್ಟಿಸುತ್ತ ನಿಂತಿರುವುದನ್ನು.
ಪೂರ್ವಾಚಲದಿಂದ ಮೆಲ್ಲಮೆಲ್ಲನೆ ಸರಿದು ಬಂದು

ಪಶ್ಚಿಮಕ್ಕೆ ಬಾಗಿದ ದ್ವಾದಶಿಯ ಚಂದ್ರನು
ತನ್ನ ಸಮಸ್ತ ಹಿಮಾಂಶುರಾಶಿಯನ್ನೂ ನನ್ನ
ಬರಿಮೆಯ್ಯ ಅಮ್ಲಾನ ನೂತನ ಸೌಂದರ್ಯದ ಮೇಲೆ
ಚೆಲ್ಲಿದಂತೆ ಆಯಿತು. ಪುಷ್ಪಗಂಧ ಪೂರ್ಣ ತರುತಲ;
ಝಿಲ್ಲೀರವ ತಂದ್ರ ಮಗ್ನ ನಿಶೀಥಿನಿ ;
ಸ್ವಚ್ಛ ಸರೋವರದಲ್ಲಿ ಅಕಂಪಿತ ಚಂದ್ರಕರಚ್ಛಾಯೆ;
ಸುಪ್ತವಾಯು. ತಿಂಗಳ ಬೆಳಕು ತಲೆಯಲ್ಲಿ ಹೊತ್ತೊಯ್ದು
ಕೋಮಲವಾದ ಒತ್ತಾದ ರಾಶಿ ರಾಶಿ ಕತ್ತಲ
ಪಲ್ಲವದ ಭಾರದಿಂದ ಅಡವಿ ಸ್ತಂಭಿತವಾಗಿತ್ತು.
ಹಾಗೆಯೇ ಛಾಯಾ ಸಹಚರ ದಂಡಧಾರಿ ಬ್ರಹ್ಮಚಾರಿ
ದೀರ್ಘಕಾಯ ವನಸ್ಪತಿಯಂತೆ ಚಿತ್ರಾರ್ಪಿತನಂತೆ
ನಿಂತಿದ್ದನು. ನಿದ್ರೆ ಎಚ್ಚರವಾದ ಆ ಕ್ಷಣ
ನಾಲ್ಕು ದಿಕ್ಕು ನೋಡಲಾಗಿ ಯಾವಾಗ
ಯಾವ ವಿಸ್ಮೃತ ಪ್ರದೋಷದಲ್ಲಿ ಜೀವನವನ್ನು ಬಿಟ್ಟು
ಅಪೂರ್ವ ಮೋಹನಿದ್ರಾಲೋಕದಲ್ಲಿ
ಜನಶೂನ್ಯ ಮ್ಲಾನ ಜ್ಯೋತ್ಸ್ನಾ ವೈತರಣೀ ತೀರದಲ್ಲಿ
ಸ್ವಪ್ನ ಜನ್ಮಪಡೆದೆನೋ ಎನಿಸಿತು. ಎದ್ದು ನಿಂತೆನು.
ಹುಸಿ ನಾಚಿಕೆ, ಸಂಕೋಚ, ಸಡಿಲವಾದ ವಸನದಂತೆ
ಕಾಲೆಡೆಗೆ ಜಾರಿದುವು. ಕೇಳಿದೆನು: " ಪ್ರಿಯೆ ಪ್ರಿಯತಮೇ."
ಈ ಗಂಭೀರ ಆಹ್ವಾನದಿಂದ ನನ್ನ ದೇಹದ ಒಳಗೆ
ಜನ್ಮ ಜನ್ಮ ಶತ ಜನ್ಮ, ಎಚ್ಚತ್ತು ನಿಂತವು.
ಹೇಳಿದೆನು: " ತೆಗೆದುಕೊ ; ಏನಿದೆ ಅದೆಲ್ಲವನ್ನು
ಕೋ, ಜೀವವಲ್ಲಭ." ಬಾಹುಗಳನ್ನು ನೀಡಿದೆನು.
ಚಂದ್ರನು ವನದಲ್ಲಿ ಮರೆಯಾದನು. ಮೇದಿನಿ
ಅಂಧಕಾರದಲ್ಲಿ ದುಮುಕಿತು. ಸ್ವರ್ಗ ಮರ್ತ್ಯ, ದೇಶ ಕಾಲ,
ದುಃಖ ಸುಖ, ಜೀವನ ಮರಣ, ಸ್ತಬ್ಧವಾದವು,
ಸಹಿಸಲಾಗದ ರೋಮಾಂಚದಲ್ಲಿ. ಪ್ರಭಾತದ

ಪ್ರಥಮ ಕಿರಣದಲ್ಲಿ, ಹಕ್ಕಿಗಳ ಮೊದಲ ಗೀತದಲ್ಲಿ,
ಎಡಕೈ ಊರಿ ಮೆಲ್ಲನೆ ಹಾಸಿಗೆಯಲ್ಲಿದ್ದು ಕುಳಿತೆನು ;
ಸುಖ ಸುಪ್ತನಾದ ವೀರನನ್ನು ದೃಷ್ಟಿಸಿ ನೋಡಿದೆನು ;
ಅವನ ತುಟಿಯೆಡೆ, ಉದಯದ ಚಂದ್ರಕಲೆಯಂತೆ,
ರಜನಿಯ ಆನಂದದ ಶೀರ್ಣ ಅವಶೇಷವಾಗಿ
ಸೊರಗಿದ ನಗೆ ಒಂದಿತ್ತು. ಮಲಗಿದ್ದ ಅವನ
ಉನ್ನತ ಲಲಾಟದ ಮೇಲೆ ಅರುಣ ಪ್ರಕಾಶ
ಮರ್ತ್ಯ ಲೋಕದಲ್ಲಿ ನವ ಉದಯ ಪರ್ವತದಲ್ಲಿ
ನವಕೀರ್ತಿ ಸೂರ್ಯ ಪ್ರಕಾಶ ಹೇಗೆ ಹಾಗೆ ಹೊಳೆಯಿತು.
ಹಾಸಿಗೆ ಉಳಿದು ನಿಟ್ಟುಸಿರು ಬಿಟ್ಟು ಎದ್ದೆನು.
ನಿದ್ರಿಸುವ ಮುಖದಿಂದ ಸೂರ್ಯ ರಶ್ಮಿಯನ್ನು ಮರಸುವಂತೆ
ಸಾವಧಾನವಾಗಿ ಮಾಲತೀಲತಾಜಾಲವನ್ನು ಎಳೆದೆನು.
ನಾಲ್ಕು ಕಡೆಯೂ ನೋಡಿದೆನು. ಅದೇ ಆ ಪರಿಚಿತ
ಪ್ರಾಚೀನ ಪೃಥ್ವಿ. ಮತ್ತೆ ನನಗೆ ನನ್ನರಿವಾಯಿತು.
ನವಪ್ರಭಾತದ ಶಿರೀಷ ಕುಸುಮದಿಂದ ಹರಡಿದ
ಹುಲ್ಲಿನ ವನಸ್ಥಲದ ಮೇಲೆ, ತನ್ನ ನೆರಳಿಗೆ ಹೆದರುವ
ಹರಿಣಿ ಹೇಗೆ ಹಾಗೆ, ಹೊರಟು ಓಡಿಬಂದೆನು.
ವಿಜನವಿತಾನ ತಲದಲ್ಲಿ ಕುಳಿತು ಕರಪುಟದಿಂದ
ಮುಖ ಮುಚ್ಚಿಕೊಂಡು ಅಳಲೆಳಸಿದೆನು. ಆಗಲಿಲ್ಲ.

**ಮದನ**

ಹಾ ಮಾನವ ನಂದಿನಿ, ಸ್ವರ್ಗದ ಸುಖದ ದಿನವನ್ನು
ನನ್ನ ಕೈಯಿಂದಲೇ ಮುರಿದು ತಂದು
ಧರಣಿಯ ಏಕರಾತ್ರಿಯನ್ನು ಆದರಿಂದ ತುಂಬಿ
ಎಚ್ಚರಿಕೆಯಿಂದ ನಿನ್ನ ತುಟಿಯೆಡೆ ಹಿಡಿದೆನು.
ಶಚಿಯ ಪ್ರಸಾದ ಸುಧೆಯನ್ನು, ರತಿ ಚುಂಬಿತ
ನಂದನವನ ಗಂಧಮೋದಿತ ಮಾಧುರ್ಯವನ್ನು
ಕುಡಿಸಿದೆನು ನಿನಗೆ. ಆದರೂ ಈ ಅಳುವೇ !

ಚಿತ್ರಾಂಗದಾ

ದೇವ,
ಯಾರಿಗೆ ಕುಡಿಸಿದೆ? ಯಾರ ದಾಹ ಅಡಗಿಸಿದೆ?
ಆ ಚುಂಬನ, ಆ ಪ್ರೇಮಸಂಗಮ, ವೀಣೆಯ ಝುಂಕಾರದಂ:
ಈಗಲೂ ಎದ್ದು ಈ ಅದುರುವ ಒಡಲನ್ನು
ವ್ಯಾಪಿಸುತ್ತಿವೆ. ಆದರೆ ಅವು ನನ್ನವಾಗಲಿಲ್ಲ.
ಬಹುಕಾಲ ಸಾಧಿಸಿ ಬರಿ ಒಂದು ಕ್ಷಣ ಮಾತ್ರ
ಪ್ರಥಮ ಮಿಲನ ಪಡೆಯಬಹುದು. ಆ ಮಿಲನವನ್ನು
ನನಗೆ ವಂಚನೆಮಾಡಿ ಯಾವುದು ಅನುಭವಿಸಿತು?
ಚಿರ ದುರ್ಲಭವಾದ ಆ ಮಿಲನದ ಸುಖಸ್ಮೃತಿಯನ್ನು
ತನ್ನ ಜೊತೆಗೆ ಒಯ್ದು ಈ ನನ್ನ ಮಾಯಾಲಾವಣ್ಯ
ಅತಿ ಅರಳಿದ ಪುಷ್ಪದಂತೆ ಉದುರಿ ನಾಶವಾಗುವುದು.
ನಿಜಳಾದ ದರಿದ್ರರಮಣಿ ರಿಕ್ತದೇಹದಿಂದ
ಅನೇಕ ಹಗಲು ಇರುಳು ಸ್ಥಿರವಾಗಿ ನಿಲ್ಲುವಳು.
ಮೀನಕೇತು, ಯಾವ ಮಹಾರಾಕ್ಷಸಿಯನ್ನು
ನೀನು ನನಗೆ ನೆರಳಿನಂತೆ ಜೊತೆಕಟ್ಟಿ ನಿಲ್ಲಿಸಿದೀಯೆ?
ಏನು ಅಭಿಸಂಪಾತ? ಚಿರಂತನ ತೃಷ್ಣೆಯಿಂದ
ನೊಂದು ಆಶಿಸಿದ ತುಟಿಯ ಬಳಿ ಬಂದಿತು ಚುಂಬನ;
ಅದನ್ನು ಇದು ಪಾನಮಾಡಿತು. ಆ ಪ್ರೇಮ ದೃಷ್ಟಿಪಾತ,
ಅಷ್ಟು ಆಗ್ರಹ ಪೂರ್ಣವಾದದ್ದು, ತಗುಲಿದ ಅಂಗದಲ್ಲಿ
ಆಸೆಯ ಕೆಂಪು ಗೆರೆಯಂತೆ ಗುರುತು ಮಾಡಿ ನಡೆಯುತಿತ್ತು,
ರವಿರಶ್ಮಿಯಂಥ ಆ ದೃಷ್ಟಿ ಚಿರರಾತ್ರಿ ತಾಪಸಿನಿಯಾದ
ಕುಮಾರೀ ಹೃದಯ ಪದ್ಮದ ಮುಂದೆ ಓಡಿ ಬಂದಿತು;
ಅದನ್ನು ಏಮಾರಿಸಿ ಇದು ಕರೆದೊಯ್ಯಿತು.

ಮದನ

ನಿನ್ನೆ ರಾತ್ರಿ
ಹಾಗಾದರೆ ವ್ಯರ್ಥವಾಯಿತು? ಆಶೆಯ ದೋಣಿ ತೀರ

ದಂಡೆಗೆ ಬಂದು ತರಂಗಾಘಾತದಲ್ಲಿ ಹಿಂದೆ ಸರಿಯಿತು ?

ಚಿತ್ರಾಂಗದಾ

ನಿನ್ನೆ ರಾತ್ರಿ ಯಾವುದೂ ತೋರಲಿಲ್ಲ, ದೇವ.
ಸುಖ ಸ್ವರ್ಗ ಇಷ್ಟು ಹತ್ತಿರವಾಗಿ ಸಿಕ್ಕಿಬಿಟ್ಟಿತ್ತು ;
ದೊರಕಿತೋ ಇಲ್ಲವೋ ಆತ್ಮವಿಸ್ಮರಣ ಸುಖದಲ್ಲಿ
ನಾನು ಗಣಿಸಲಿಲ್ಲ. ಈ ಉದಯದಲ್ಲಿ ಎದ್ದ ನನಗೆ
ನೈರಾಶ್ಯ ಧಿಕ್ಕಾರಗಳ ವೇಗದಲ್ಲಿ ಒಳಒಳಗೆ ಎದೆ ಬಿರಿಯುತ್ತಿದೆ.
ರಾತ್ರಿಯ ಸಂಗತಿ ಒಂದೊಂದೂ ವಿವರವಾಗಿ ನೆನಪಾಗುತ್ತಿದೆ.
ಜೀವ ವಿದ್ಯುದ್‌ವೇದನೆಯನ್ನು ಅನುಭವಿಸುತ್ತಿದೆ.
ನನ್ನ ಅಂತರ್ಯ ನನ್ನ ಬಾಹ್ಯ ಸವತಿಯಾಗಿವೆ :
ಇನ್ನು ಇದನ್ನು ಮರೆಯುವಂತಿಲ್ಲ. ಸಪತ್ನಿಯನ್ನು
ಸ್ವಹಸ್ತದಿಂದ ಯತ್ನಪೂರ್ವಕವಾಗಿ ಸಜ್ಜುಮಾಡಿ
ನನ್ನ ಬಯಕೆಯ ಕ್ಷೇತ್ರವಾದ ವಾಸರಶಯ್ಯೆಗೆ
ಕಳುಹಿಸಬೇಕಾಗಿದೆ. ಎಡೆಬಿಡದೆ ಜೊತೆಗೆ ಇದ್ದು
ಅದಕ್ಕೆ ದೊರೆಯುವ ಆದರವನ್ನು ಪ್ರತಿಕ್ಷಣವೂ ಕಣ್ಣಿಟ್ಟು
ನೋಡಬೇಕಾಗಿದೆ. ದೇಹದ ಮುದ್ದಾಟವನ್ನು ನೋಡಿ
ಅಂತರ್ಯ ಹಿಂಸಾನಲದಲ್ಲಿ ಉರಿಯುತ್ತಿದೆ. ಇಂಥ ಶಾಪವನ್ನು
ನರಲೋಕದಲ್ಲಿ ಮತ್ತಾರು ಪಡೆದರು ? ಹೇ ಅತನು,
ನಿನ್ನ ವರವನ್ನು ಹಿಂದಕ್ಕೆ ತೆಗೆದುಕೋ.

ಮದನ

ತೆಗೆದುಕೊಂಡೆನೆನ್ನು ;
ಮಾಯೆಯ ಈ ಹೊದಿಕೆಯನ್ನು ಕಳಚಿ ಎಸೆದುಬಿಟ್ಟು
ನಾಳೆ ಉದಯ ಪಾರ್ಥನ ಎದುರಲ್ಲಿ ಯಾವ ಮುಖದಿಂದ
ಹೋಗಿ ನಿಲ್ಲುವೆ ? ಕುಸುಮ ಪಲ್ಲವಗಳಿಲ್ಲದ
ಹೇಮಂತದ ಹಿಮಶೀರ್ಣಲತೆ ? ಪ್ರಮೋದದ
ಮೊದಲ ಆಸ್ವಾದವನ್ನು ಕುಡಿಯಕೊಟ್ಟು
ಬಾಯಬಳಿಯಿಂದ ಸುಧಾಪಾತ್ರೆಯನ್ನು ಕಿತ್ತುಕೊಂಡು

ಭೂಮಿತಲದಲ್ಲಿ ಚೂರ್ಣಮಾಡಿದೆಯಾದರೆ,
ಆ ಅಕಸ್ಮಾತ್ ಆಘಾತದ ಭರದಲ್ಲಿ ಬೆಚ್ಚಿ ಅವನು
ನಿನ್ನನ್ನು ಎಷ್ಟು ಕೋಪದಿಂದ ನೋಡುವನು!

ಚಿತ್ರಾಂಗದಾ

ಅದೂ ಒಳಿತೆ. ಈ ಛದ್ಮರೂಪಿಣಿಗಿಂತ
ನಾನು ನೂರು ಮಡಿ ಶ್ರೇಷ್ಠ; ನನ್ನನ್ನೇ ತೋರುವೆನು.
ಅದು ಚೆನ್ನವಾಗದೆ ಹೋದರೆ, ಅವನು ಬೇಸರದ ಭರದಲ್ಲಿ
ತೊರೆದೇ ನಡೆದರೆ, ನಾನು ಎದೆ ಬಿರಿದು ಮಡಿಯುವೆನು;
ನಾನೇ ಆಗಿರುವೆನು. ಅದೂ ಚೆನ್ನ, ಇಂದ್ರಸಖ.

ವಸಂತ

ನನ್ನ ಮಾತನ್ನು ಕೇಳು, ಹೂವಿನ ಕೆಲಸದಲ್ಲಿ
ಅರುಳುವುದೆನ್ನುವುದು ಮುಗಿದ ಮೇಲೆ ಫಲ
ತಾನೇ ಕಾಣುವುದು. ಯಥಾ ಕಾಲದಲ್ಲಿ
ತಾಪಕ್ಲಿಷ್ಟ ಲಘು ಲಾವಣ್ಯದ ದಲ
ತಾನಾಗಿ ಉದುರಿ ಬೀಳುವುದು. ಆಗ ನೀನು
ನಿನ್ನ ನಿಜಗೌರವದೊಡನೆ ಹೊರಗೆ ಕಾಣುವೆ.
ಆಗಣ ಆ ನಿನ್ನನ್ನು ಕಂಡು ಅರ್ಜುನನು
ನೂತನ ಸೌಭಾಗ್ಯವೆಂದು ಸ್ವೀಕರಿಸುವನು. ಹೋಗು,
ಹೋಗು, ವತ್ಸೆ, ಯೌವನ ಉತ್ಸವಕ್ಕೆ ಹಿಂದಿರುಗು.

೪

ಅರ್ಜುನ, ಚಿತ್ರಾಂಗದಾ

ಚಿತ್ರಾಂಗದಾ

ಏನು ನೋಡುತ್ತಿರುವೆ, ವೀರ, ಹಾಗೆ?

ಅರ್ಜುನ

ನಿನ್ನ ಕೋಮಲಾಂಗುಲಿ ಪುಷ್ಪವೃಂತವನ್ನು ಹಿಡಿದು
ಮಾಲೆಮಾಡುವುದನ್ನು ನೋಡುತ್ತಿದೇನೆ.

ಚಿತ್ರಾಂಗದಾ

ಚಳಕ ಬೆಡಗು ಎಂಬ ಒಡಹುಟ್ಟು ಎರಡು
ಚಂಚಲ ಉಲ್ಲಾಸದಿಂದ ಬೆರಳಿನ ಮುಂದೆ ಮುಂದೆ
ಜೊತೆಗೂಡಿ ಆಡುತ್ತಿರುವಂತೆ ಕಾಣುತ್ತದೆ.
ನೋಡುತ್ತ ಹಾಗೆಯೇ ಯೋಚಿಸುತ್ತಿದೇನೆ.

ಚಿತ್ರಾಂಗದಾ

ಏನೆಂದು ?

ಅರ್ಜುನ

ಹೀಗೆಯೇ ಸುಂದರ ಕರದಲ್ಲಿ ಹಿಡಿದು
ಸರಸವಾಗಿ ಅದೇ ವರ್ಣದ ಸ್ಪರ್ಶರಸದಿಂದ
ಪ್ರವಾಸದ ದಿನಗಳನ್ನು ಕಟ್ಟಿ ಕಟ್ಟಿ ಪ್ರಿಯೆ
ಮಾಲೆಯನ್ನು ಮಾಡುತ್ತಿದಾಳೆಂದು ಯೋಚಿಸಿದೆನು.
ಆ ಅಕ್ಷಯ ಆನಂದಹಾರವನ್ನು ತಲೆಯಲ್ಲಿ ಧರಿಸಿ
ಮನೆಗೆ ಹೋಗುವುದು.

ಚಿತ್ರಾಂಗದಾ

ಈ ಪ್ರೇಮಕ್ಕೆ ಮನೆ ಉಂಟೊ ?

ಅರ್ಜುನ

ಇಲ್ಲದೆ ಉಂಟೆ ?

ಚಿತ್ರಾಂಗದಾ

ಇಲ್ಲ. ಮನೆಗೆ ಕೊಂಡೊಯ್ಯುವೆಯಾ !
ಮನೆಯ ಮಾತೆತ್ತಬೇಡ. ಮನೆ ಬಹುಕಾಲದ್ದು ;
ನಿತ್ಯವಾದದ್ದನ್ನು ಮನೆಗೆ ತೆಗೆದುಕೊಂಡು ಹೋಗು.
ಅರಣ್ಯದ ಹೂ ಬಾಡುತ್ತದೆ. ಆಗ ಅದನ್ನು
ಎಸೆಯಲು ಮನೆಯಲ್ಲಿ ಸ್ಥಳ? ಅನಾದರದಿಂದ
ಕಲ್ಲ ಮಧ್ಯೆ ಎಸೆಯುವೆಯ ? ಅದಕ್ಕಿಂತಲೂ ನಾನು
ಅರಣ್ಯಾಂತಃಪುರದಲ್ಲಿದ್ದು ನನ್ನ ಆಟ ಮುಗಿದಾಗ,
ನಿತ್ಯನಿತ್ಯ ಎಲ್ಲಿ ಮೊಳಕೆಗಳು ಸಾಯುತ್ತವೆ,

ಪಲ್ಲವರಾಶಿ ಬೀಳುತ್ತದೆ, ಕೇಸರ ಉದುರುತ್ತದೆ,
ಕುಸುಮದಳ ಜಾರುತ್ತದೆ, ಪ್ರತಿ ಕ್ಷಣಕ್ಷಣವೂ
ನಶ್ವರ ಜೀವನಗಳು ಅರಳುತ್ತಿವೆ ಬೀಳುತ್ತಿವೆ,
ಅಲ್ಲಿ, ದಿನಾಂತದಲ್ಲಿ, ಕಾನನಪ್ರದೇಶದ
ಶತಶತ ಸಮಾಪ್ತ ಸುಖದ ಜೊತೆಯಲ್ಲಿ,
ಉದುರಿ ಹೋಗುತ್ತೇನೆ. ಯಾರ ಮನದಲ್ಲಿಯೂ
ಯಾವ ನೋವೂ ಇರದು.

**ಅರ್ಜುನ**

ಇಷ್ಟೇ ಸರಿಯೆ?

**ಚಿತ್ರಾಂಗದಾ**

ಇಷ್ಟೇ ಸರಿ. ವೀರ, ಇದಕ್ಕೆ ದುಃಖಿಸುವೆಯ?
ವಿರಾಮದ ದಿನದಲ್ಲಿ ಚೆನ್ನವೆಂದು ತೋರಿದ್ದನ್ನು
ವಿರಾಮದ ದಿನದೊಡನೆ ಮುಗಿಸಿ ಎಸೆದು ಬಿಡು.
ಸುಖವನ್ನು ಅದರ ಕಾಲಕ್ಕಿಂತ ಒಂದು ಕ್ಷಣ ಹೆಚ್ಚಾಗಿ
ಕಟ್ಟಿ ನಿಲ್ಲಿಸಿದರೆ, ಅದು ದುಃಖವಾಗುತ್ತದೆ.
ಏನಿದೆ ಅದನ್ನು ತೆಗೆದುಕೊ; ಎಷ್ಟು ಹೊತ್ತಿದೆ
ಅಷ್ಟು ಹೊತ್ತು ಇರಿಸಿಕೊ. ಆಸೆಯ ಉದಯದಲ್ಲಿ
ಎಷ್ಟು ಆಶಿಸಿದೆಯೋ, ತೃಪ್ತಿಯ ಸಂಜೆಯಲ್ಲಿ
ಅದಕ್ಕೆ ಹೆಚ್ಚಿನದನ್ನು ಆಶಿಸಬೇಡ.
ಹೊತ್ತು ಮುಳುಗಿತು,
ಈ ಮಾಲೆಯನ್ನು ಧರಿಸು. ದಣಿದ ನನ್ನ ಮೈಯನ್ನು
ನಿನ್ನ ಬಾಹುಗಳ ಮೇಲೆ ಎಳೆದುಕೋ ವೀರ.
ಅಧರದ ಸುಖ ಸಮ್ಮಿಲನದಿಂದ ಸಂಧಿಯಾಗಲಿ.
ಮಿಥ್ಯಾ ಅಸಂತೋಷ ಕ್ಷಾಂತ ಆಗಲಿ.
ಬಾ, ಬಾಹು ಬಂಧದಲ್ಲಿ ಒಬ್ಬರನ್ನೊಬ್ಬರು
ಪ್ರಣಯದ ಸುಧಾಮಯ ಚಿರಪರಾಜಯದಲ್ಲಿ
ಬಂದಿ ಮಾಡೋಣ.

ಅರ್ಜುನ

ಆಕೊ ಕೇಳು ಪ್ರಿಯತಮೆ
ವನಾಂತದ ದೂರದ ಜನದ ಮನೆಗಳಲ್ಲಿ
ಆರತಿಯ ಶಾಂತಿಯ ಶಂಖ ಎದ್ದು ಮೊಳಗಿದೆ.

೫

ಮದನ, ವಸಂತ

ಮದನ

ನಾನು ಪಂಚಶರ, ಸಖ; ಒಂದು ಬಾಣದಿಂದ ನಗು,
ಒಂದರಿಂದ ಅಳು; ಒಂದು ಶರದಿಂದ ಆಸೆ,
ಒಂದರಿಂದ ಭಯ; ಒಂದರಲ್ಲಿ, ಒಂದೇ ಕ್ಷಣದಲ್ಲಿ,
ವಿರಹಮಿಲನ, ಆಶಾಭಯ, ದುಃಖಸುಖ, ಎಲ್ಲ ಒಂದಿಗೆ.

ವಸಂತ

ನಾನು ಸೋತೆ, ಇನ್ನು ನಿಲ್ಲಿಸು ಸಖ.
ಓ ಅನಂಗ, ನಿನ್ನ ರಣರಂಗವನ್ನು ಮುಗಿಸು;
ಹಗಲಿರುಳು ಎಚ್ಚರವಿದ್ದು ನಿನ್ನ ಹುತಾಶನವನ್ನು
ಇನ್ನೆಷ್ಟು ಕಾಲ ಬೀಸುತ್ತಿರಲಿ? ನಡುನಡುವೆ ಕಣ್ಣಿಗೆ
ನಿದ್ರೆ ಕವಿಯುತ್ತಿದೆ. ಬೀಸಣಿಗೆ ಬಾಗಿ ಬೀಳುತ್ತಿದೆ.
ತಪ್ತದೀಪ್ತಿ ರಾಶಿ ಬೂದಿಯಿಂದ ಮ್ಲಾನವಾಗಿದೆ.
ಬೆಚ್ಚಿ ಎದ್ದು ಮತ್ತೆ ಹೊಸ ಉಸಿರಿನಿಂದ ಅದನ್ನು
ನೂತನ ಉಜ್ವಲತೆಯಿಂದ ಎಚ್ಚರಗೊಳಿಸಿದೇನೆ.
ಇನ್ನು ಬೀಳ್ಕೊಡು ಸಖ.

ಮದನ

ನಾನು ಬಲ್ಲೆ, ನೀನು
ಅನಂತ ಅಸ್ಥಿರನು, ಚಿರಶಿಶು. ಎಲ್ಲ ಕಾಲವೂ
ಬಂಧನವಿಲ್ಲದೆ ದೇವಲೋಕ ಭೂಲೋಕದಲ್ಲಿ
ಆಡುತ್ತಿರುವೆ. ಏಕಾಗ್ರವಾದ ಪ್ರಯತ್ನದಿಂದ ನಾನು

ಯಾವುದನ್ನು ಬಹುಕಾಲ ಹಿಡಿದು ಸುಂದರಪಡಿಸುವೆನೊ
ಅದನ್ನು ನೀನು ಕ್ಷಣದಲ್ಲಿ ಧೂಳಿಯಲ್ಲಿ ಎಸೆದು
ಹಿಂತಿರುಗಿ ನೋಡದೆ ಹೋಗುವೆ. ಇನ್ನು ಬಹುದಿನ ಇಲ್ಲ ;
ಆನಂದ ಚಂಚಲವಾದ ಅವು, ನಿನ್ನ ರೆಕ್ಕೆಯ ಗಾಳಿಯಿಂದ
ಚ್ಯುತಪಲ್ಲವಗಳಂತೆ ಲಘುವೇಗದಿಂದ,
ಹು ಹು ಎಂದು ಎಲ್ಲಿಯೋ ಹಾರುತ್ತವೆ ;
ಹರ್ಷದಿಂದ ನಿಶ್ಚೀತವಾದ ವರ್ಷ ಮುಗಿಯುತ್ತಿದೆ.

೬

ಅರಣ್ಯದಲ್ಲಿ ಅರ್ಜುನ

**ಅರ್ಜುನ**

ಪ್ರಭಾತದಲ್ಲಿ ನಿದ್ರೆಯಿಂದ ಎಚ್ಚತ್ತಹೊತ್ತು
ಸ್ವಪ್ನಲಬ್ಧ ಅಮೂರ್ತ ರತ್ನವನ್ನು ಪಡೆದಂತಿದೇನೆ.
ಆದನ್ನಿಡಲು ಈ ಭೂಮಿಯಲ್ಲಿ ಎಡೆಯಿಲ್ಲ ;
ಅದನ್ನು ಕೆತ್ತಬಹುದಾದಂಥ ಕಿರೀಟ ಎಲ್ಲಿಯೂ ಇಲ್ಲ;
ಪೋಣಿಸಲು ತಕ್ಕ ದಾರವಿಲ್ಲ; ಎಸೆದು ಹೋಗೋಣವೆ,
ನಾನು ಅಂಥ ನರಾಧಮನಲ್ಲ. ಈ ಕಾರಣದಿಂದ
ಅದನ್ನು ಎತ್ತಿಕೊಂಡು ಚಿರರಾತ್ರಿ ಚಿರದಿನ ಸೆರೆಯಾಗಿ
ಕ್ಷತ್ರಿಯನ ಬಾಹು ಕರ್ತವ್ಯಹೀನವಾಗಿ ಬಿದ್ದಿವೆ.

ಚಿತ್ರಾಂಗದೆಯ ಪ್ರವೇಶ

**ಚಿತ್ರಾಂಗದಾ**

ಏನು ಯೋಚಿಸುತ್ತಿದೀಯೆ ?

**ಅರ್ಜುನ**

ಬೇಟೆಯ ವಿಷಯ.

ಅಲ್ಲಿ ನೋಡು ಪರ್ವತದ ಮೇಲೆ ವೃಷ್ಟಿಧಾರೆ
ಇಳಿದು ಬಂದಿದೆ. ಅರಣ್ಯದಲ್ಲಿ ಘನಘೋರಛಾಯೆ.
ನಿರ್ಝರಿಣಿ ದುರ್ದಾಂತವಾಗಿ ಉಕ್ಕಿ ಎದ್ದಿದೆ.

ಕಲಗರ್ವ–ಉಪಹಾಸದಿಂದ ತಡಿಯನ್ನು ಭಯಪಡಿಸಿ
ಅವಹೇಳಿಸುತ್ತಿದೆ. ನನಗೆ ನೆನಪಾಗುತ್ತಿದೆ:
ಇಂಥ ಮಳೆ ದಿನದಲ್ಲಿ ನಾವು ಐವರು ಸೋದರರು
ಜೊತೆಯಾಗಿ ಚಿತ್ರಕ ಅರಣ್ಯತಟದಲ್ಲಿ
ಬೇಟೆಗೆ ಹೋಗುತ್ತಿದ್ದೆವು. ದಿನವೆಲ್ಲ ಬಿಸಿಲಿಲ್ಲದ
ಸ್ನಿಗ್ಧ ಅಂಧಕಾರದಲ್ಲಿ ಉತ್ಸಾಹದಿಂದ ಕಳೆಯುತಿತ್ತು.
ಗುರುಗುರು ಮೇಘಮಂದ್ರದಲ್ಲಿ ಹೃದಯ ಕುಣಿದೇಳುತಿತ್ತು;
ಝರಝರ ವೃಷ್ಟಿಜಲದಲ್ಲಿ ಹೊಳೆಯ ವಾಚಾಳ ಕಲ್ಲೋಲ್ಲಾಸದಲ್ಲಿ
ಮೃಗಗಳು ನಮ್ಮ ಮೆಲ್ನಡೆಯ ಸಪ್ಪುಳನ್ನು ಕೇಳವು.
ಬಣ್ಣದ ಹುಲಿ ದಾರಿಯ ಬದಿಯ ಮೇಲೆ
ಐದುಗುರ ಗುರುತನ್ನು ಇಟ್ಟುಹೋಗಿ ತನ್ನ ಮನೆ
ಎಲ್ಲಿ ಎಂದು ತೋರಿಸುತ್ತಿತ್ತು. ಕೇಕಾರವದಿಂದ
ಅರಣ್ಯ ಧ್ವನಿಸುತ್ತಿತ್ತು. ಬೇಟೆ ಮುಗಿದ ಮೇಲೆ
ನಾವು ಐವರು ಸಂಗಾತಿಗಳು ಪಂಥ ಹೂಡಿ
ಮಳೆಯ ಸೌಭಾಗ್ಯದ ಹೆಮ್ಮೆಯಿಂದ ಉಕ್ಕಿದ ನದಿಯನ್ನು
ಈಸಿ ದಾಟುತ್ತಿದ್ದೆವು. ಹಾಗೆ ಮತ್ತೆ ಬೇಟೆಗೆ
ಹೋದೇನೇ ಎಂದು ಯೋಚನೆ ಮಾಡಿದೆನು.

ಚಿತ್ರಾಂಗದಾ

ಓ ಬೇಟೆಗಾರ, ಯಾವ ಬೇಟವನ್ನು
ಆರಂಭ ಮಾಡಿದೀಯೆ ಮೊದಲು ಅದನ್ನು ಮುಗಿಸು.
ನಿನ್ನನ್ನು ಹಿಡಿದಿಟ್ಟಿರುವ ಈ ಸ್ವರ್ಣಮಾಯಾಮೃಗ
ಎಂದೂ ಇರುವುದೆಂದು ತಿಳಿದೆಯೋ? ಹಾಗಿಲ್ಲ ಕಂಡೆಯ!
ಈ ವನ್ಯಹರಿಣಿ ತನ್ನನ್ನುತಾನೇ ಇಟ್ಟುಕೊಳ್ಳಲಾರದು.
ಯಾವ ಕ್ಷಣದಲ್ಲಿ ಬೆಚ್ಚಿ ಕನಸಂತೆ ಓಡುವುದೋ
ಯಾರು ಬಲ್ಲರು? ಕ್ಷಣಿಕವಾದ ಆಟದಿಂದ
ಚಿರದಿನದ ಪಾಶವನ್ನು ಮಾಡುವುದು ಆಗದು.
ಅಕೋ ದೃಷ್ಟಿಸಿ ನೋಡು, ಗಾಳಿಗೆ ಮಳೆಗೆ

ಹೇಗೆ ಆಟ ನಡೆಯುತ್ತಿದೆ. ಗಾಳಿಯು ಬೆನ್ನ ಮೇಲೆ
ಶ್ಯಾಮವರ್ಷ ನಿಮಿಷಕ್ಕೆ ಸಹಸ್ರ ಶರವನ್ನು ಎಸೆಯುತ್ತಿದೆ.
ಆಗಲೂ ಆ ದುರ್ದಾಂತ ಮೃಗ ಅಕ್ಷತ ಅಜೇಯವಾಗಿ
ಸೋಲದೆ ತಿರುಗುತ್ತಿದೆ. ನಾಥ, ನನ್ನ ನಿನ್ನ
ಈ ಆಟ ಅಂಥದೇ. ಈ ಮಳೆಯ ದಿನದಲ್ಲಿ
ಸರ್ವಪ್ರಯತ್ನದಿಂದ ಚಂಚಲೆಯನ್ನು ಬೇಟೆಯಾಡು.
ಬತ್ತಳಿಕೆಯಲ್ಲಿ ಎಷ್ಟು ಶರ, ಎಷ್ಟು ಅಸ್ತ್ರ ಇವೆ
ಅವನ್ನೆಲ್ಲ ಏಕಾಗ್ರ ಆಗ್ರಹ ಭಾವದಿಂದ
ಸುರಿಸುವೆಯಂತೆ. ಒಮ್ಮೆ ಕತ್ತಲೆ, ಒಮ್ಮೆ ಚಕಿತ ದೀಪ್ತಿ,
ಬೆಚ್ಚಿ ನಗೆಯಲ್ಲಿ ಕಲೆಯಲಿ, ಒಮ್ಮೆ ಸ್ನಿಗ್ಧವಾದ
ವೃಷ್ಟಿ ವರ್ಷಣ, ಒಮ್ಮೆ ದೀಪ್ತ ವಜ್ರಜ್ವಾಲೆ.
ಮಧ್ಯೆ ಮೇಘ ಕವಿದ ಜಗದ ನಡುವೆ ಮಾಯಾಮೃಗಿ
ಬಾಧೆ ಇಲ್ಲದೆ ಚಿರಕಾಲ ಸುತ್ತಿ ಸುಳಿಯಲಿ.

೭

ಮದನ, ಚಿತ್ರಾಂಗದಾ

ಚಿತ್ರಾಂಗದಾ

ಹೇ ಮನ್ಮಥ, ನನ್ನ ದೇಹಾದ್ಯಂತ
ಏನನ್ನು ಲೇಪಿಸಿರುವೆಯೋ ನಾನರಿಯೆ.
ತೀವ್ರ ಮದಿರದಂತೆ ರಕ್ತದಲ್ಲಿ ಬೆರೆತು ಅದು
ನನ್ನ ಜೀವನವನ್ನು ಉನ್ಮಾದಗೊಳಿಸುತ್ತಿದೆ.
ನಡೆಯ ಹೆಮ್ಮೆಯಿಂದ ಮತ್ತಳಾದ ಹರಿಣಿ ನಾನು
ಕೆದರಿದ ಕೂದಲಿಂದ ಉಬ್ಬಸ ಪಡುತ್ತ
ಭೂಮಿಯನ್ನು ದಾಟಿ ಚಿಗಿದು ಓಡುತ್ತಿರುವೆನು.
ಧನುರ್ಧರ ಘನಶ್ಯಾಮರಾದ ನನ್ನ ವ್ಯಾಧರು,
ನಿರಾಶಳಾಗುವಂತೆ ನನ್ನನ್ನು ದಣಿಸಿರುವರು.
ಅವರು ದಾರಿದಾರಿಯಲ್ಲೂ ವನವನದಲ್ಲೂ

ನನ್ನನ್ನು ಅಲಸುತ್ತಿರುವರು. ನಿರ್ದಯರಾಗಿ
ವಿಜಯ ಸುಖದಲ್ಲಿ ಕೌತುಕದ ನಗೆಯನ್ನು
ನಗುತ್ತಿರುವರು. ಈ ಆಟವನ್ನು ನಿಲ್ಲಿಸಲು
ಭಯವಾಗುತ್ತಿದೆ; ಒಂದು ಕ್ಷಣ ಸುಮ್ಮನಾದೆನೋ
ಅಳುವಿಂದ ಎದೆ ತುಂಬಿ ಒಡೆದು ಹೋಗುವುದು.

**ಮದನ**

ಇರಲಿ, ನಿಲ್ಲಿಸಬೇಡ. ಈ ಆಟ ನನ್ನದು.
ನಡೆಯಲಿ; ಮುರಿಯಲಿ ಬಾಣ, ಹೃದಯ ಬಿರಿಯಲಿ;
ನನ್ನ ಬೇಟೆ ಇಂದು ಅರಣ್ಯದ ನಡುವೆ;
ನವೀನ ವರ್ಷಾಕಾಲದಲ್ಲಿ. ಅದನ್ನು ದಣಿಸಿಬಿಡು;
ಪದಾನತವಾಗಿ ಮಾಡು; ದೃಢಪಾಶದಲ್ಲಿ ಬಂಧಿಸು;
ಕನಿಕರ ತೋರಬೇಡ, ನಗುವಿಂದ ಜರ್ಜರಪಡಿಸು;
ಅಮೃತವಿಷದಿಂದ ಬಳಿದ ಕೂರಾದ ವಾಗ್ಬಾಣದಿಂದ
ಎದೆಯನ್ನು ನಾಟು. ಬೇಟೆಯಲ್ಲಿ ಕನಿಕರ ತರವಲ್ಲ.

## ೮

ಅರ್ಜುನ, ಚಿತ್ರಾಂಗದಾ

**ಅರ್ಜುನ**

ಒಡತಿ ಇಲ್ಲವೆಂದು ಪ್ರಿಯ ಪರಿಜನ ಅಳುವಂಥ
ಮನೆ ಒಂದು ಯಾವುದೂ ನಿನಗೆ ಇಲ್ಲವೆ ಪ್ರಿಯೆ?
ದಿನವೂ ಸ್ನೇಹ ಸೇವೆಮಾಡಿ ಯಾವ ಆನಂದ ಪುರಿಯನ್ನು
ಸುಧಾಮಗ್ನ ಮಾಡಿದ್ದೆಯೋ, ಯಾವ ಒಂದು ಎಡೆಯ
ದೀಪವನ್ನಾರಿಸಿ ಅರಣ್ಯದ ಮಧ್ಯೆ ತಿರುಗುತ್ತಿದೀಯೊ,
ನಿನ್ನ ಎಳವೆಯ ನೆನಪು ಎಲ್ಲಿಗೆ ಅಳುತ್ತ ಹೋಗುವುದೋ,
ಅಂಥ ಸ್ಥಾನ ಇಲ್ಲವೆ?

**ಚಿತ್ರಾಂಗದಾ**

ಏಕೆ ಕೇಳುವೆ? ನಿನಗೆ
ಈ ಸುಖ ಸಾಕಾಯಿತೊ? ನಿನಗೆ ಏನು ಕಾಣುತ್ತದೆ

ಅದೇ ನಾನು. ಮತ್ತೆ ಬೇರೆ ಪರಿಚಯ ಇಲ್ಲ.
ಪ್ರಭಾತದಲ್ಲಿ ಇಕೋ ಅಲುಗುತ್ತಿರುವುದಲ್ಲ,
ಕಿಂಶುಕದ ಒಂದು ಪಲ್ಲವದ ಕೊನೆಯಲ್ಲಿ
ಒಂದು ಹನಿ ಮಂಜು, ಅದಕ್ಕೆ ನಾಮ ಧಾಮ ಉಂಟೆ?
ಯಾರೇ ಆಗಲಿ ಅದರ ಪರಿಚಯ ಕೇಳುವರೆ?
ನೀನು ಯಾರನ್ನು ಪ್ರೀತಿಸುತ್ತಿರುವೆಯೊ ಅವಳು
ನಾಮ ಧಾಮ ಇಲ್ಲದ ಇಂಥದೆ ಮಂಜಿನ ಹನಿ.

ಅರ್ಜುನ

ಅವಳಿಗೆ ಪೃಥ್ವಿಯಲ್ಲಿ ಬಂಧನವೇ ಇಲ್ಲವೇ?
ಬರಿಯ ಒಂದೇ ಒಂದು ಬಿಂದು ಸ್ವರ್ಗ
ಮರವಿನಿಂದ ಭೂಮಿಗೆ ಬಿದ್ದಿತೇ?

ಚಿತ್ರಾಂಗದಾ

ಬಿದ್ದಿರುವುದು ಸಾಧ್ಯ.
ಅರಣ್ಯದ ಕುಸುಮಗಳು ಬರಿಯ ಒಂದು ಕ್ಷಣಕಾಲ
ತಮ್ಮ ಉಜ್ವಲತೆಯನ್ನು ಕೊಟ್ಟಿವೆ.

ಅರ್ಜುನ

ಆದರಿಂದಲೇ ಪ್ರಾಣ
ಸದಾ, ಹೋಯಿತೇ, ಹೋಯಿತೇ, ಎನ್ನುತ್ತಿದೆ.
ತೃಪ್ತಿಯಾಗದು; ಶಾಂತಿ ಬಾರದು; ಓ ಸುದುರ್ಲಭೆ,
ಇನ್ನೂ ಹತ್ತಿರ ಬಾ. ನಾಮ ಧಾಮದಲ್ಲಿ
ಗೋತ್ರ ಗೃಹ ವಾಕ್ಯ ದೇಹ ಮನಗಳಲ್ಲಿ
ಸಾವಿರ ಬಂಧನದಲ್ಲಿ ನನ್ನನ್ನು ಹಿಡಿ, ಪ್ರಿಯೆ.
ನಾಲ್ಕು ಕಡೆಯಿಂದ ಮುತ್ತಿ ನಿನ್ನನ್ನು ಸೋಕಿ,
ಈ ಭಯವುಳಿದು ನಾನು ಧೈರ್ಯದಿಂದ ಬಾಳುವೆನು.
ಹೆಸರಿಲ್ಲವೆಂಬೆಯ? ಹಾಗಾದರೆ ನಿನ್ನನ್ನು
ಯಾವ ಪ್ರೇಮಮಂತ್ರದಿಂದ ಹೃದಯದಲ್ಲಿ ಜಪಿಸಲಿ?

ಗೋತ್ರವಿಲ್ಲ ? ಹಾಗಾದರೆ ಈ ಕಮಲವನ್ನು
ಯಾವ ಮೃಣಾಲದಲ್ಲಿ ಸೆಕ್ಕಿ ನಿಲ್ಲಿಸಲಿ ?

**ಚಿತ್ರಾಂಗದಾ**

ಇಲ್ಲ, ಇಲ್ಲ.
ನೀನು ಯಾರನ್ನು ಕಟ್ಟಿಡಲು ಬಯಸುವೆ ಅವಳು
ಎಂದೂ ಬಂಧನವನ್ನರಿತವಳಲ್ಲ. ಆ ವಸ್ತು
ಕೇವಲ ಮೇಘದ ಮೇಲಣ ಸುವರ್ಣ ದೀಪ್ತಿ,
ಕುಸುಮಗಳ ಸುಗಂಧ, ತರಂಗಗಳ ಗಮನ.

**ಅರ್ಜುನ**

ಹಾಗಾದರೆ ಅವಳನ್ನು ಪ್ರೀತಿಸುವ ನಾನು ನಿರ್ಭಾಗ್ಯನು.
ಪ್ರಿಯೇ, ಪ್ರೇಮದ ಕೈಯಿಂದ ಆಕಾಶಕುಸುಮವನ್ನು ಕೊಡದಿರು.
ಸುಖದಲ್ಲಿ ದುಃಖದಲ್ಲಿ ಸುದಿನ ದುರ್ದಿನದಲ್ಲಿ
ಎದೆಯಲ್ಲಿಡಲು ಇವನಿಗೆ ಧನವನ್ನು ಕೊಡು.

**ಚಿತ್ರಾಂಗದಾ**

ವರ್ಷ ಮುಗಿಯಲಿಲ್ಲ, ಈ ಮಧ್ಯೆ ದಣಿವೇ ?
ಹಾ, ಈಗ ಅರಿತೆನು, ಪುಷ್ಪದ ಆಯುಸ್ಸು ಅಲ್ಪವಾಗಿರುವುದು
ದೇವರ ಅನುಗ್ರಹ. ಅಳಿದ ವಸಂತಗಳ
ಎಷ್ಟೋ ಮೃತ ಪುಷ್ಪಗಳೊಡನೆ ಈ ಮೋಹಕ ತನು
ಉದುರಿ ಬಿದ್ದಿದ್ದರೆ ಒಳಿತೇ ಆಗುತ್ತಿತ್ತು.
ಹೆಚ್ಚು ದಿನ ಇಲ್ಲ ಪಾರ್ಥ, ಇರುವಷ್ಟು ದಿನದಲ್ಲಿ
ಆಶೆಯನ್ನು ಪೂರ್ತಿಗೊಳಿಸುವ ಕುತೂಹಲದಿಂದ,
ಅವುಗಳ ಆನಂದ ಮಧುವನ್ನು ನಿಶ್ಶೇಷವಾಗಿ ಪಾನಮಾಡು.
ಆಮೇಲೆ ಬಾರಿಬಾರಿಗೆ ಸ್ಮೃತಿಯ ಕುಹಕದಲ್ಲಿ ಸಿಕ್ಕಿ
ಗತ ಸಂಧ್ಯಾಕಾಲದ ಚೂತವೃಂತ ಮಾಧವಿಯ ಬಳಿಗೆ
ತೃಷಿತ ಭೃಂಗ ಬರುವಂತೆ ಮರಮರಳಿ ಬರುವುದು ಬೇಡ.

೯

ವನಚರಗಣ, ಅರ್ಜುನ

**ವನಚರ**

ಹಾ, ಹಾ, ಯಾರು ರಕ್ಷಿಸುವವರು?

**ಅರ್ಜುನ**

ಏನಾಗಿದೆ?

**ವನಚರ**

ಉತ್ತರ ಪರ್ವತದಿಂದ ಹೊರಟು ದಸ್ಯುದಲ,
ಮಳೆಗಾಲದ ಪರ್ವತ ಪ್ರವಾಹದ ವೇಗದಿಂದ
ಹಾಯ್ದು ಬಂದು ಹಾಡಿಗಳನ್ನು ನಾಶಮಾಡುತ್ತಿದೆ.

**ಅರ್ಜುನ**

ಈ ರಾಜ್ಯದ ರಕ್ಷಕರು ಯಾರೂ ಇಲ್ಲವೆ?

**ವನಚರ**

ದುಷ್ಟರನ್ನು ದಮನಮಾಡಲು ನಮ್ಮ ರಾಜಕುಮಾರಿ
ಚಿತ್ರಾಂಗದಾ ಇದ್ದಳು. ಅವಳ ಭಯದಿಂದ
ರಾಜ್ಯದಲ್ಲಿ ಯಮನ ಭಯ ಒಂದು ಹೊರತಾಗಿ
ಬೇರೆ ಭಯ ಇರಲಿಲ್ಲ. ಅಜ್ಞಾತ ಭ್ರಮಣ ವ್ರತದಲ್ಲಿ
ಅವಳು ತೀರ್ಥಯಾತ್ರೆಗಾಗಿ ಹೋಗಿದಾಳಂತೆ.

**ಅರ್ಜುನ**

ಏನು? ಈ ರಾಜ್ಯದ ರಕ್ಷಕಿ ಸ್ತ್ರೀಯೆ?

**ವನಚರ**

ಆ ದೇವಿ ತನ್ನ ಅನುರಕ್ತ ಪ್ರಜೆಗಳಿಗೆ
ಒಂದು ದೇಹದಲ್ಲಿ ಬೆರೆತ ತಾಯಿ ತಂದೆ.
ಸ್ನೇಹದಿಂದ ರಾಜಮಾತೆ; ವೀರ್ಯದಲ್ಲಿ ಯುವರಾಜ.

ವನಚರರು ಹೋಗುತ್ತಾರೆ

ಚಿತ್ರಾಂಗದಾ ಬರುತ್ತಾಳೆ

ಚಿತ್ರಾಂಗದಾ

ಏನು ಯೋಚಿಸುವೆ ನಾಥ ?

ಅರ್ಜುನ

ಏಕೋ ಕಾಣೆ,
ಚಿತ್ರಾಂಗದಾ ಎನ್ನುವರಲ್ಲ, ರಾಜಕುಮಾರಿ,
ಅವಳು ಎಂಥವಳಿರಬಹುದೆಂದು ಯೋಚಿಸುತ್ತಿದೇನೆ.
ಪ್ರತಿ ದಿನ ನೂರಾರು ಬಾಯಿಂದ ಅವಳ ವಿಷಯವಾಗಿ
ನವನವ ಅಪೂರ್ವ ಕಥೆಯನ್ನು ಕೇಳುತ್ತಿದೇನೆ.

ಚಿತ್ರಾಂಗದಾ

ಅವಳೊಬ್ಬ ಕುತ್ಸಿತಳು. ಕುರೂಪಿ. ಅವಳಿಗೆ ಇಂಥ
ಬಾಗಿದ ಹುಬ್ಬಿಲ್ಲ ; ಇಂಥ ಕರಿಗಪ್ಪಾದ ಕಣ್ಣಿಲ್ಲ.
ಅವಳ ಕಠಿಣ ಶಕ್ತ ಬಾಹು ಲಕ್ಷ್ಯಭೇದವನ್ನು ಕಲಿತಿವೆ ;
ಗಂಡಿನ ಮೈಯನ್ನು ಇಂಥ ಸುಕೋಮಲ ನಾಗಪಾಶದಿಂದ
ಕಟ್ಟುವುದನ್ನು ಅವಳು ಅರಿಯಳು.

ಅರ್ಜುನ

ಆದರೂ ಅವಳು
ಸ್ನೇಹದಲ್ಲಿ ನಾರಿ, ಶೌರ್ಯದಲ್ಲಿ ಪುರುಷಳೆಂದು ಕೇಳಿರುವೆನು.

ಚಿತ್ರಾಂಗದಾ

ಛಿ ಬಿಡು, ಹಾಗಿರುವುದೇ ಅವಳ ದೌರ್ಭಾಗ್ಯ.
ನಾರಿ ತೀರಾ ನಾರಿಯಾದರೆ, ಭೂಮಿಗೆ ಒಂದು ಭೂಷಣ,
ಒಂದು ಬೆಳಕು. ಕೇವಲ ಪ್ರೇಮದಿಂದ, ಮಧುರವಾದ ಹಟದಿಂದ,
ನೂರು ತರದ ಬೆಡಗಿನಿಂದ, ಕ್ಷಣಬಿಡದೆ ಸಂತತವಾಗಿ
ದಾಳಿ ಮಾಡಿ ಅಪ್ಪಿಕೊಂಡು, ವಕ್ರವಾಗಿ ಕಟ್ಟಿಕೊಂಡು,
ನಗುತ್ತ ಅಳುತ್ತ ಸೇವೆಯಿಂದ ಲಲ್ಲೆಯಿಂದ,
ಪತಿಯನ್ನು ಸದಾ ನೋಡಿಕೊಂಡಳೇ, ಅವಳ ಜನ್ಮ ಸಾರ್ಥಕ.

ಹೆಣ್ಣಾದವಳ ಕಾರ್ಯದಕ್ಷತೆ, ಕೀರ್ತಿ, ಶೌರ್ಯ, ಬಲ,
ಶಿಕ್ಷೆ, ದೀಕ್ಷೆ ಏಕೆ ಬರುತ್ತವೆ? ಪ್ರಿಯು, ನೀನು ನಾಳೆ
ಅವಳನ್ನು ಇಲ್ಲಿ ವನಪಥದ ಪಕ್ಕದಲ್ಲಿ,
ಈ ಪೂರ್ಣಾತೀರದಲ್ಲಿ, ಆ ದೇವಾಲಯದ ಒಳಗೆ,
ನೋಡಿದ್ದೀ ಆದರೆ ನಕ್ಕು ಹೊರಟು ಹೋಗುವೆ.
ಹಾ, ಹಾ, ಇಂದು ನಾರಿಯ ಸೌಂದರ್ಯದಲ್ಲಿ
ಇಷ್ಟು ಅರುಚಿಯೇ? ಹೆಣ್ಣಿನಲ್ಲಿ ಗಂಡಿನ ಗುಣವನ್ನು
ಹುಡುಕ ಹೊರಟಿರುವೆಯಲ್ಲ!

ಬಾ ನಾಥ,

ಅಕೊ ನೋಡು ಶೈಲ ಗುಹಾಮುಖದಲ್ಲಿ.
ಆ ಗಾಢಛಾಯೆ, ಅಲ್ಲಿ ಎಳೆಯ ಪೀತ ಶ್ಯಾಮಲ
ಕಿಸಲಯವನ್ನು ಎತ್ತಿ ಝರಿಯ ತುಂತುರಿನಲ್ಲಿ ನೆನಸಿ
ನಮ್ಮ ಮಧ್ಯಾಹ್ನ ಶಯನವನ್ನು ಹಾಸಿ ಇದೇನೆ.
ಗಭೀರ ಪಲ್ಲವಛಾಯೆಯಲ್ಲಿ ಕುಳಿತು,
ಕ್ಲಾಂತ ಕಂಠದಿಂದ ಮೊರೆಯುತ್ತ ಕಪೋತ
"ಕಾಲಹೋಯಿತು", "ಕಾಲಹೋಯಿತು" ಎನ್ನುತ್ತಿದೆ.
ನದಿ ನೆರಳಡಿಯಲ್ಲಿ ಕುಲು ಕುಲು ಶಬ್ದದಿಂದ
ಹರಿದು ಹೋಗುತ್ತಿದೆ. ಬಂಡೆಯ ಮೇಲೆ
ಪದರ ಪದರದಲ್ಲಿ ಸರಸ ಸುಸ್ನಿಗ್ಧವಾದ
ನೆನೆದ ಕರಿಯ ಪಾಚಿ ಕೋಮಲಾಧರದಿಂದ
ಕಣ್ಣನ್ನು ಮುದ್ದಿಸುತ್ತಿದೆ. ಆ ನಿರ್ಜನ ಆಶ್ರಮಕ್ಕೆ
ಹೋಗೋಣ ಬಾ ನಾಥ

**ಅರ್ಜುನ**

ಇಂದು ಬೇಡ ಪ್ರಿಯೆ.

**ಚಿತ್ರಾಂಗದಾ**

ಏಕೆ ನಾಥ?

ಅರ್ಜುನ

ಕೇಳಿದೆನು, ಜನರನ್ನು ಹಿಂಸಿಸಲು
ದಸ್ಯುದಳ ಬಂದಿದೆಯೆಂದು. ಭೀತ ಜನರನ್ನು
ರಕ್ಷಿಸಲೆಳಸುವೆನು.

ಚಿತ್ರಾಂಗದಾ

ಭಯವೇನೂ ಇಲ್ಲ ಪ್ರಭು.
ಅರಗುವರಿ ಚಿತ್ರಾಂಗದೆ ತೀರ್ಥಯಾತ್ರಾ ಕಾಲದಲ್ಲಿ
ದಿಕ್ಕು ದಿಕ್ಕಿಗೆ ಎಚ್ಚರಿಕೆಯ ಕಾವಲವರನ್ನು
ನಿಲ್ಲಿಸಿ ಹೋಗಿರುವಳು. ವಿಪತ್ತಿನ ಮಾರ್ಗ ಎಷ್ಟುಂಟು
ಅವನ್ನೆಲ್ಲ ಜಾಗರೂಕತೆಯಿಂದ ತಡೆದು ಹೋಗಿರುವಳು.

ಅರ್ಜುನ

ಆದರೂ ಅಪ್ಪಣೆ ಕೊಡು ಪ್ರಿಯೆ. ಸ್ವಲ್ಪ ಕಾಲ
ಕ್ಷತ್ರಿಯ ಕರ್ತವ್ಯವನ್ನು ಮಾಡಿ ಬರುವೆನು.
ನನ್ನ ಈ ಬಾಹುಗಳು ಬಹುದಿನದಿಂದ
ಆಲಸ್ಯದಲ್ಲಿದ್ದಿವೆ. ಓ ಸುಮಧ್ಯಮೆ
ಕೀರ್ತಿ ಕ್ಷೀಣವಾಗಿರುವ ಈ ಭುಜದ್ವಯವನ್ನು
ಮತ್ತೊಮ್ಮೆ ನವೀನ ಗೌರವದಿಂದ ತುಂಬಿತರುವೆನು ;
ನಿನ್ನ ತಲೆಯ ಕೆಳಗೆ ಎಚ್ಚರಿಕೆಯಿಂದಿಡುವೆನು ;
ಆಗ ಅದು ನಿನಗೆ ತಕ್ಕ ದಿಂಬು ಆಗುವುದು.

ಚಿತ್ರಾಂಗದಾ

ನಾನು ಹೋಗಗೊಡದಿದ್ದರೆ, ಕಟ್ಟಿ ನಿಲ್ಲಿಸಿದರೆ
ಒದರಿಕೊಂಡು ಹೋಗುವೆಯ ? ಹಾಗಾದರೆ ಹೋಗು.
ಆದರೆ ಮರೆಯಬೇಡ. ಹರಿದ ಬಳ್ಳಿ ಮತ್ತೆ ಅಂಟಿಸಬರುವುದಿಲ್ಲ.
ತೃಪ್ತಿ ಆಗಿರುವುದಾದರೆ ಹೋಗು, ನಾನು ತಡೆಯುವುದಿಲ್ಲ.
ಆಗಿಲ್ಲವಾದರೆ ಇದು ನೆನವಿರಲಿ : ಚಂಚಲೆಯಾದ ಸುಖಲಕ್ಷ್ಮಿ
ಯಾರಿಗಾಗಿಯೂ ಕುಳಿತು ಕಾಯುವುದಿಲ್ಲ.

ಅವಳು ಯಾರಿಗೂ ಸೇವಾದಾಸಿಯಲ್ಲ.
ನರನಾರಿಯರು ಭಯದಿಂದ ಭಕ್ತಿಯಿಂದ
ಅವಳಿಗೆ ಸೇವೆ ಮಾಡಬೇಕು. ಹಗಲೂ ಇರುಳೂ
ಅವಳು ಪ್ರಸನ್ನಳಾಗಿರುವಷ್ಟು ಕಾಲವೂ
ಕಣ್ಣಲ್ಲಿ ಕಣ್ಣು ಇಟ್ಟುಕೊಂಡು ಇರಬೇಕು.
ಸುಖದ ಕಲಿಕೆಯನ್ನು ಇಟ್ಟುಕೆಲಸಕ್ಕೆ ಹೋಗುವವರು
ಕೆಲಸ ಮುಗಿದು ಸಂಜೆಯಲ್ಲಿ ಹಿಂದಿರುಗಿ ಬಂದಾಗ
ಮುಗುಳು ಅರಳಿ ದಳ ಉದುರಿ ಭೂಮಿಯಮೇಲೆ
ಬಿದ್ದಿರುವುದನ್ನು ನೋಡಿ ತಮ್ಮ ಎಲ್ಲ ಕೆಲಸವೂ
ವ್ಯರ್ಥವೆಂದು ಎಣಿಸುವರು. ಬಹುಕಾಲ
ಜೀವಂತ ಅತೃಪ್ತಿ ಅವರ ಜೀವನದ ಮಧ್ಯೆ
ಕ್ಷುಧಾತುರವಾಗಿ ನಿಲ್ಲುತ್ತದೆ. ಬಾ ನಾಥ ಕುಳಿತುಕೊ.
ಇಂದೇಕೆ ಇಷ್ಟು ಅನ್ಯ ಮನಸ್ಸು ? ಯಾರ ನೆನಪೆಂದೆ ?
ಚಿತ್ರಾಂಗದೆಯದೆ ? ಇಂದೇನು ಅವಳದು ಇಷ್ಟು ಪುಣ್ಯ ?

ಅರ್ಜುನ

ಆ ವೀರಾಂಗನೆ ಬೇರೆಯಾರ ಸಲುವಾಗಿ
ದುಷ್ಕರ ವ್ರತವನ್ನು ಹಿಡಿದಿರುವಳೋ ಎಂದು
ಯೋಚಿಸುತ್ತಿದೇನೆ. ಅವಳಿಗೇನು ಕಡಮೆಯೋ ?

ಚಿತ್ರಾಂಗದಾ

ಅವಳಿಗೇನು ಕಡಮೆಯೆ ? ಆ ನಿರ್ಭಾಗ್ಯಳಿಗೆ ಇದ್ದದ್ದೇನು ?
ಅಭ್ರಭೇದಿಯಾದ ದುರ್ಗ ಸುದುರ್ಗಮವಾದ
ಅವಳ ಶೌರ್ಯ ಲಲಿತವಾದ ರಮಣೀ ಸೌಂದರ್ಯವನ್ನು
ನಾಲ್ಕು ದಿಕ್ಕಿನಲ್ಲೂ ತಡೆದು ಸೆರೆ ಮಾಡಿಟ್ಟಿತು.
ಹೆಣ್ಣಾದವಳು ಸಹಜವಾಗಿ ಅಂತಃಪುರವಾಸಿನಿ.
ತನ್ನಷ್ಟಕ್ಕೆ ತಾನು ಗೋಪ್ಯದಲ್ಲಿರುವಳು.
ಹೃದಯದ ಪ್ರತಿಬಿಂಬ ದೇಹದ ಶೋಭೆಯಲ್ಲಿ ಕಾಣಿಸದಿದ್ದರೆ

ಹೆಣ್ಣಾದವಳನ್ನು ನೋಡಬಯಸುವವರು ಯಾರು?
ಅವಳಿಗೆ ಕಡಮೆಯೇನೆ? ಅರುಣ ಲಾವಣ್ಯಲೇಖೆ
ಎಂದಿಗೂ ಆರಿಹೋದ ಉಷೆಯಂತೆ ಹೆಣ್ಣಾದವಳು
ಶೌರ್ಯ ಶೈಲದ ಶಿಖರದ ಮೇಲೆ ತನ್ನ ನೂರು ಪದರದ
ತಿಮಿರದ ಅಡಿಯಲ್ಲಿ ನಿತ್ಯ ಏಕಾಕಿನಿಯಾಗಿ ಕುಳಿತರೆ
ಅವಳಿಗೇನು ಕಡಮೆಯೆ? ಬಿಡು ಅವಳ ಮಾತು.
ಅದು ಪುರುಷರ ಕಿವಿಗೆ ಇಂಪಾಗಿ ಕಾಣದು.

ಅರ್ಜುನ

ಇಲ್ಲ, ಹೇಳು; ನನ್ನ ಈ ಕೇಳಬೇಕೆಂಬಾಸೆ
ಬರುಬರುತ್ತ ಹೆಚ್ಚುತ್ತಿದೆ. ಹೃದಯ ಅಂತರಾಳದಲ್ಲಿ
ಅದನ್ನು ಅನುಭವಿಸುತ್ತಿದೆ. ಅರ್ಧ ರಾತ್ರಿಯಲ್ಲಿ ಯಾವುದೋ
ಅಪೂರ್ವಪ್ರದೇಶವನ್ನು ಹೊಕ್ಕ ದಾರಿಹೋಕನಂತಿದೇನೆ ನಾನು.
ನದಿ ಗಿರಿ ವನ ಭೂಮಿ ಸುಪ್ತಿನಿಮಗ್ನವಾಗಿರಲು
ಶುಭ್ರ ಸೌಧ ಕಿರೀಟನಿಯಾದ ಉದಾರ ನಗರಿ
ಅವನಿಗೆ ನೆರಳಂತೆ ಅರ್ಧ ಸ್ಫುಟವಾಗಿ ಕಾಣುತ್ತದೆ.
ಸಾಗರ ಗರ್ಜನೆ ಕೇಳುತ್ತದೆ. ಪ್ರಭಾತ ಪ್ರಕಾಶದಲ್ಲಿ
ನಾಲ್ಕು ದಿಕ್ಕೂ ವಿಚಿತ್ರ ವಿಸ್ಮಯದಲ್ಲಿ ಅರಳುತ್ತದೆ.
ಆ ವೇಳೆಯನ್ನು ಉತ್ಸುಕ ಹೃದಯದಿಂದ ಕುತೂಹಲನಾಗಿ
ಅವನು ಎದುರು ನೋಡುತ್ತಾನೆ. ಹೇಳು ಹೇಳು,
ಅವಳ ಮಾತನ್ನು ಕೇಳೋಣ.

ಚಿತ್ರಾಂಗದಾ

ಇನ್ನು ಕೇಳುವುದೇನಿದೆ?

ಅರ್ಜುನ

ಊಹಿಸಿ ನೋಡಬಲ್ಲೆನು. ತನ್ನ ಎಡಗೈಯಲ್ಲಿ
ಕುದುರೆಯ ಕಡಿವಾಣ ಹಿಡಿದು, ಬಲಗೈಯಲ್ಲಿ
ಧನುಸ್ಸು ಶರವನ್ನು ಸುಲಭವಾಗಿ ಎತ್ತಿ

ಹೃಷ್ಟನಗರದ ವಿಜಯಲಕ್ಷ್ಮಿಯೆಂಬಂತೆ
ಆರ್ತ ಪ್ರಜಾಗಣಕ್ಕೆ ವರ ಅಭಯದಾನ ಮಾಡುವ
ಆ ದೇವಿಯನ್ನು. ರಾಜರ ಮಹಿಮೆಯೆನ್ನುವುದು
ಎಲ್ಲಿ ಹೋಗಬೇಕಾದಾಗ ತೀರಾ ಬಾಗುವುದೋ
ಅಂಥ ದರಿದ್ರರ ಕಿರುಬಾಗಿಲ ಮುಂದೆ ನಿಂತು
ತಾಯಂತೆ ದಯೆಯನ್ನು ಹಂಚುತ್ತಿರುವಳು. ಸಿಂಹಿಯಂತೆ
ನಾಲ್ಕು ದಿಕ್ಕಿನಲ್ಲೂ ತನ್ನ ಮರಿಗಳನ್ನು ಕಾಯುತ್ತಿರುವಳು.
ಹೆದರಿಕೆಯಿಂದ ಯಾವ ಶತ್ರುವೂ ಹತ್ತಿರ ಬಾರನು.
ಲಜ್ಜೆಯುಳಿದು ಭಯರಹಿತಳಾಗಿ ಪ್ರಸನ್ನಹಾಸಿನಿ
ಶೌರ್ಯಸಿಂಹವನ್ನೇರಿದ ಜಗದ್ಧಾತ್ರಿನಿ
ದಯೆಯೇ ತಾನಾಗಿ ತಿರುಗುತ್ತಿರುವಳು.
ರಮಣಿಯ ಕಮನೀಯ ಬಾಹುದ್ವಯದ ಮೇಲಣ
ಆ ಸ್ವತಂತ್ರವಾದ, ಕುಂದಿಲ್ಲದ, ಬಲದೆದುರಲ್ಲಿ
ಕಂಕಣ ಕಿಂಕಿಣಿಗಳ ಝಣ ಝಣ ಶಬ್ದಕ್ಕೆ ಧಿಕ್.
ವರಾರೋಹೆ, ಬಹುಕಾಲ ಕೆಲಸಮಾಡದ
ನನ್ನ ಪ್ರಾಣ ದೀರ್ಘ ಶೀತದಲ್ಲಿ ನಿದ್ರಿಸಿದ್ದು
ಎಚ್ಚೆತ್ತ ಭುಜಂಗದಂತೆ ಅಶಾಂತವಾಗಿ ಎದ್ದಿದೆ.
ಬಾ ಇಬ್ಬರೂ ಬಲವಾದ ಅಶ್ವಗಳನ್ನು ತೆಗೆದುಕೊಂಡು
ದೀಪ್ತ ಗಗನ ಜ್ಯೋತಿಗಳಂತೆ ಅತಿ ವೇಗದಿಂದ
ಜೊತೆ ಜೊತೆಯಾಗಿ ಹೊರಟು ಹೋಗೋಣ.
ಕಟುವಾದ ಪುಷ್ಪಗಂಧದ ಮದಿರೆಯಿಂದ,
ಆಳವಾದ ನಿದ್ರೆಯಿಂದ, ರುದ್ಧ ಸಮೀರಣದ
ಘೋರವಾದ ಈ ಅರಣ್ಯದ ಹೊಟ್ಟೆಯೊಳಗಿಂದ
ಹೊರಬೀಳೋಣ.

ಚಿತ್ರಾಂಗದಾ

ಓ ಕೌಂತೇಯ, ಈ ಲಾಲಿತ್ಯ,
ಈ ಕೋಮಲ ಭೀರುತೆ, ಮುಟ್ಟಿದರೆ ನೋಯುವೆನೆಂದು

ಕಾತರಿಸುವ ಶಿರೀಷದಂತೆ ಮೆದುವಾದ ಈ ರೂಪು,
ಇದನ್ನೆಲ್ಲ ಎರವಲ, ನಾಲಿ ಬಟ್ಟೆಯಂತೆ
ತುಂಬು ಹೇಸಿಕೆಯಲ್ಲಿ ಹರಿದು ಕಾಲಡಿ ಎಸೆದರೆ
ಆ ನಷ್ಟವನ್ನು ಸಹಿಸಲಾಪೆಯಾ ಹೇಗೆ? ಕಾಮಿನಿಯರ
ಬೆರಗು ಒಯ್ಯಾರ ಮಾಯ ಮಂತ್ರವನ್ನು ದೂರಮಾಡಿ,
ಬಳ್ಳಿಯಂತೆ ಸದಾ ಕುಗ್ಗಿ ಹೊರಳುವುದನ್ನು ಬಿಟ್ಟು,
ಗಾಳಿಯ ಭರದಲ್ಲಿ ಬಾಗಿ ಸುಂದರವಾಗಿರುವ
ಪರ್ವತದ ತೇಜಸ್ವಿಯಾದ ತರುಣ ವೃಕ್ಷದಂತೆ
ಸರಳ ಉನ್ನತ ವೀರ್ಯವತ್ತಾದ ಆಂತರ್ಯ ಬಲದಿಂದ
ಎದ್ದು ನಿಂತುದಾದರೆ, ಆದೇನು ಗಂಡಿನ ಕಣ್ಣಿಗೆ
ಚೆನ್ನಾಗಿರುವುದೇ? ಇರಲಿ ಬಿಡು; ಆದಕ್ಕಿಂತ
ಇದೇ ಉತ್ತಮ. ನನ್ನ ಯೌವನವೆನ್ನುವುದು
ಎರಡು ದಿನದ ಬಹು ಮೂಲ್ಯ ಸಂಪತ್ತು. ಪ್ರಯತ್ನದಿಂದ
ಸಜ್ಜುಗೊಳಿಸಿ ದಾರಿ ಕಾದು ಕುಳಿತಿರುವೆನು.
ಸಮಯ ಬಂದಿರುವಾಗ ಈ ನನ್ನ ದೇಹಪಾತ್ರದ
ಸುಧೆಯನ್ನು ಅದರ ಅರುಗಿನವರೆಗೆ ತುಂಬಿ
ಕುಡಿಯುವನಾಗು. ಸುಖವನ್ನೀಂಟಿ ತಣಿದ ಮೇಲೆ
ಕೆಲಸದ ತೊಡಕಿನಲ್ಲಿ ಹೊರಟು ಹೋಗುವೆಯಂತೆ.
ಮುಪ್ಪು ಬರಲು ನಾನು ನೀನು ಕೊಟ್ಟ ಸ್ಥಾನದಲ್ಲಿ
ಒಂದು ಕಡೆ ಬಿದ್ದಿರುವೆನು. ರಾತ್ರಿಯ ಹೊತ್ತಿನ
ನರ್ಮಸಹಚರಿ ಹಗಲ ಕರ್ಮಸಹಚರಿಯಾಗಿ
ಬಲ ಕೈಗೆ ಅನುಚರವಾಗಿ ಸದಾ ಜೊತೆಯಾದ
ಎಡಗೈಯಂತೆ ಇದ್ದರೆ ಅದೇನು ಗಂಡಿನ ಚೇತನಕ್ಕೆ
ಚೆನ್ನಾಗಿರುತ್ತದೆಯೇ?

**ಅರ್ಜುನ**

ನಿನ್ನ ರಹಸ್ಯವನ್ನು
ನಾನು ಅರಿಯಲಾರೆನು. ಇಷ್ಟು ದಿನ ಇದ್ದು ಆಯಿತು.

ಆದರೂ ಗುಟ್ಟನ್ನು ಬಿಡಿಸದಂತಿದೇನೆ. ನೀನು ಸದಾ ಗುಪ್ತವಾಗಿರುತ್ತ
ನನ್ನಿಂದ ಮರಸಿಕೊಂಡಿರುವಂತೆ ಕಾಣುತ್ತದೆ.
ಪ್ರತಿಮೆಯ ಅಂತರಾಳದಲ್ಲಿರುವ ದೇವಿಯಂತೆ
ಮರೆಯ ನೀನು ನನಗೆ ಚುಂಬನದ ಅಮೂಲ್ಯ ರತ್ನವನ್ನು
ಆಲಿಂಗನ ಸುಧೆಯನ್ನು ಪ್ರಸಾದವಾಗಿ ನೀಡುತ್ತಿರುವೆ.
ನಿನಗಾಗಿ ನೀನು ಏನನ್ನೂ ಬಯಸಿಲ್ಲ, ತೆಗೆದುಕೊಂಡಿಲ್ಲ.
ಅಂಗಹೀನ ಛಂದಹೀನ ಪ್ರೇಮವೋ ಈ ದೇಹದಲ್ಲಿ
ಪ್ರತಿ ಕ್ಷಣವೂ ಸಂತಾಪವನ್ನು ಎಚ್ಚರಿಸುತ್ತಿದೆ.
ತೇಜಸ್ವಿನಿ! ಮಧ್ಯೆ ಮಧ್ಯೆ ಒಂದೊಂದು ಮಾತಿನಲ್ಲಿ
ನಿನ್ನ ಪರಿಚಯವನ್ನು ಪಡೆಯುತ್ತಿದೇನೆ. ಅದರೆದುರಲ್ಲಿ
ಈ ಸೌಂದರ್ಯರಾಶಿ ಬರಿಯ ಮಣ್ಣಿಂದ ಮಾಡಿದ
ಒಂದು ಮೂರ್ತಿಯಂತೆ, ನಿಪುಣನಿಂದ ಚಿತ್ರಿತವಾದ
ಶಿಲ್ಪ ಯವನಿಕೆಯಂತೆ, ತೋರುತ್ತಿದೆ. ಮಧ್ಯೆ ಮಧ್ಯೆ
ನೀನು ಈ ರೂಪವನ್ನು ತಡೆಯಲಾರೆ ಎಂಬಂತೆ,
ತಳಮಳದಿಂದ ನಡುಗುತ್ತಿರುವಂತೆ, ಕಾಣುತ್ತದೆ.
ನಿತ್ಯದೀಪ್ತವಾದ ನಗೆಯ ಒಳಗೆ ಕಣ್ಣೀರ ಭಾರ
ವಾಸಿಸುತ್ತಿದೆ; ಮಧ್ಯೆ ಮಧ್ಯೆ ಉಕ್ಕಿ ಹರಿಯುತ್ತಿದೆ.
ಇನ್ನೇನು ಕ್ಷಣದಲ್ಲಿ ಮರೆ ಮುರಿದು ಬೀಳುವುದೊ
ಎಂದು ತೋರುತ್ತಿದೆ. ಸಾಧಕನ ಬಳಿ ಮೊದಲು
ಮನೋಹರ ಮಾಯಾಶರೀರವನ್ನು ಧರಿಸಿ
ಭ್ರಾಂತಿ ಐತರುವುದು. ಅನಂತರ ಸತ್ಯ ಕಂಡರಿವುದು ;
ಭೂಷಣಹೀನ ರೂಪದಿಂದ ಒಳಹೊರಗನ್ನು ಬೆಳಗುವುದು.
ನಿನ್ನ ಆ ಮರೆಯ ಸತ್ಯ ಏನಿದೆ ಅದನ್ನು ಕೊಡು ;
ನನ್ನ ಸತ್ಯ ಏನಿದೆ, ಅದನ್ನು ತೆಗೆದುಕೋ.
ಅವುಗಳ ಮಿಲನ ಎಂದಿಗೂ ದಣಿಯದು. ಅಳು ಏಕೆ ಪ್ರಿಯೆ ?
ಮುಖವನ್ನು ಕೈಯಿಂದ ಮುಚ್ಚಿದ ವ್ಯಾಕುಲತೆ ಏಕೆ?
ನೋಯಿಸಿದೆನೆ ಪ್ರಿಯತಮೆ? ಹಾಗಾದರೆ ತಡೆ ತಡೆ;

ಈ ನಿನ್ನ ಮನೋಹರ ರೂಪ ನನ್ನ ಪುಣ್ಯ ಫಲ.
ಈ ಯೌವನಯಮುನೆಯ ಆಚೆಯ ದಡದಿಂದ
ವಸಂತ ಸಮೀರದಲ್ಲಿ ಮಧ್ಯೆ ಮಧ್ಯೆ ಇಕೋ ಸಂಗೀತ
ಕೇಳ ಬರುತ್ತಿದೆಯಲ್ಲಾ ಇದು ನನ್ನ ಮಹಾಪುಣ್ಯ.
ಈ ಅನುಭವ ನನ್ನ ಸುಖದಲ್ಲಿ ಹೆಚ್ಚಿನ ಸುಖ;
ಆಶೆಯಲ್ಲಿ ಹೆಚ್ಚಿನ ಆಸೆ, ಹೃದಯಕ್ಕಿಂತ ಹಿರಿದು;
ಆದ ಕಾರಣವೇ ಅದು ಹೀಗೆ ನನಗೆ
ಹೃದಯದ ವ್ಯಥೆಯೆಂದು ತೋರುವುದು ಪ್ರಿಯೆ.

೧೦

ಮದನ, ವಸಂತ ಮತ್ತು ಚಿತ್ರಾಂಗದಾ

**ಮದನ**

ಇಂದು ಕೊನೆಯ ರಾತ್ರಿ.

**ವಸಂತ**

ಈ ಒಂದು ರಾತ್ರಿ
ಮುಗಿಯಿತೆಂದ ಮೇಲೆ ನಿನ್ನ ಅಂಗಶೋಭೆ
ವಸಂತದ ಅಕ್ಷಯ ಭಾಂಡಾರಕ್ಕೆ ಹಿಂದಿರುಗುತ್ತದೆ.
ಪಾರ್ಥನ ಚುಂಬನದ ಸ್ಮೃತಿ ಮರೆತು ನಿನ್ನ ಓಷ್ಠರಾಗ
ಲತೆಯ ಎರಡು ನವಕಿಸಲಯದಲ್ಲಿ ಮಂಜರಿಯಾಗುತ್ತದೆ.
ನಿನ್ನ ಅಂಗವರ್ಣ ನೂರು ಬಿಳಿಯ ಹೂವಲ್ಲಿ
ನೂತನ ತನುವನ್ನು ಧರಿಸಿ, ಎಚ್ಚರವಾದಾಗ ಮರೆಯುವ
ಸ್ವಪ್ನದಂತೆ, ಹಿಂದಣ ಚರಿತೆಯನ್ನು ತೊರೆಯುವುದು.

**ಚಿತ್ರಾಂಗದಾ**

ಹೇ ಅನಂಗ, ಹೇ ವಸಂತ, ಹಾಗಾದರೆ ಈ ರಾತ್ರಿ
ಈ ನನ್ನ ನಾಶವಾಗಲು ಕಾದಿರುವ ರೂಪ

ಸೋತ ದೀಪದ ಅಂತಿಮ ಶಿಖೆ ರಾತ್ರಿಯ ಕೊನೆಯಲ್ಲಿ
ಹಠಾತ್ತಾಗಿ ಜ್ವಲಿಸುವಂತೆ ಉಜ್ವಲತರ ಆಗಲಿ.

**ಮದನ**

ಆಗಲಿ.

ಸಖಾ, ಪ್ರಾಣಪೂರ್ಣವೇಗದಿಂದ ದಕ್ಷಿಣ ಪವನವನ್ನು
ನೀನು ಊದಿಕೊಡು. ಯೌವನದ ಕ್ಲಾಂತ ಮಂದಸ್ರೋತ
ಅಂಗ ಅಂಗದಲ್ಲಿ ನವೋಲ್ಲಾಸದಲ್ಲಿ,
ಮತ್ತೊಮ್ಮೆ ಹೊಮ್ಮಲಿ. ನಾನು ಪುಷ್ಪಶರದಿಂದ
ನಿಶೀಥದ ನಿದ್ರೆಯನ್ನು ಭೇದಿಸಿ ಭೋಗವತೀ ತಟಿನಿಯ
ತರಂಗದ ಉಬ್ಬಿನಲ್ಲಿ ಬಾಹುಪಾಶಬದ್ಧವಾದ
ಇಬ್ಬರು ಪ್ರಣಯಿಗಳ ತನುವನ್ನು ತೇಲಬಿಡುತ್ತೇನೆ.

## ೧೧

ಕೊನೆಯ ರಾತ್ರಿ. ಅರ್ಜುನ, ಚಿತ್ರಾಂಗದಾ

**ಚಿತ್ರಾಂಗದಾ**

ಪ್ರಭು, ಆಶೆ ತೀರಿತೊ? ಈ ಸುಲಲಿತ ಸುಘಟಿತ
ನವನೀತ ಕೋಮಲವಾದ ಈ ಸೌಂದರ್ಯದ
ಗಂಧ ಎಷ್ಟು ಮಧು ಎಷ್ಟು ಇತ್ತೋ ಅಷ್ಟನ್ನೂ
ಪಾನ ಮಾಡಿ ಆಯಿತೊ? ಇಲ್ಲ ಇನ್ನೂ ಉಳಿದಿದೆಯೊ?
ಮತ್ತೇನನ್ನಾದರೂ ಬಯಸುವೆಯೊ? ನನ್ನಲ್ಲೇನಿತ್ತು
ಅದೆಲ್ಲ ಮುಗಿಯಿತೆ? ಇನ್ನೂ ಇಲ್ಲ, ಪ್ರಭು.
ಒಳಿತಾಗಲಿ ಅಲ್ಲದ್ದಾಗಲಿ ಇನ್ನೇನು ಉಳಿದಿದೆ
ಅದನ್ನೂ ಇಂದು ಕೊಡುವೆನು. ಪ್ರಿಯತಮ
ನಿನಗೆ ಚೆನ್ನಾಗಿರುವುದೆಂದು ಎಣಿಸಿ
ನಂದನ ಕಾನನದಿಂದ ಬಹು ಪ್ರಯತ್ನ ಪೂರ್ವಕ
ಈ ಸೌಂದರ್ಯ ಪುಷ್ಪರಾಶಿಯನ್ನು ಆರಿಸಿ ತಂದು

ನಿನ್ನ ಚರಣ ತಲದಲ್ಲಿ ನಿವೇದನ ಮಾಡಿದೆನು.
ಪೂಜೆ ಸಾಂಗವಾಗಿದ್ದರೆ ಅಪ್ಪಣೆ ಕೊಡು.
ನಿರ್ಮಾಲ್ಯದ ಹಾರವನ್ನು ಮಂದಿರದ ಹೊರಕ್ಕೆಸೆಯುವೆನು.
ಇನ್ನೊಮ್ಮೆ ಸೇವಿಕೆಯ ಕಡೆ ಪ್ರಸನ್ನ ನಯನದಿಂದ ನೋಡು.
ನಾನು ಈವರೆಗೆ ನಿನಗೆ ಪೂಜೆಯಲ್ಲಿ ಅರ್ಪಿಸಿದ
ಸುಕೋಮಲ ಸುಮಧುರ ಸಂಪೂರ್ಣ ಸುಂದರವಾದ
ಹೂವಾಗಿ ನಾನು ಎಲ್ಲವೇಳೆಯೂ ಇದ್ದಿಲ್ಲ, ಪ್ರಭು.
ನನ್ನಲ್ಲಿ ದೋಷ ಇದೆ, ಗುಣ ಇದೆ, ಪಾಪ ಇದೆ, ಪುಣ್ಯ ಇದೆ,
ಎಷ್ಟೋ ದೈನ್ಯ ಇದೆ; ಇದೆ ಆ ಜನ್ಮದ ಎಷ್ಟೋ
ಅತೃಪ್ತ ಅತಿ ಆಶೆ. ಸಂಸಾರ ಪಥದ ಪಾಂಥನು,
ಧೂಲಿಲಿಪ್ತನಾಗಿ ಮನೆಯುಳಿದ ನಡೆಯುವನು,
ಎರಡು ಕ್ಷಣದ ಜೀವನದ ಅಕಲಂಕ ಶೋಭೆಯೆಂಬ
ಕುಸುಮ ಲಾವಣ್ಯವನ್ನು ಎಲ್ಲಿಂದ ಪಡೆಯುವನು?
ಆದರೆ ರಮಣಿಯ ಹೃದಯ ಅಕ್ಷಯ ಅಮರವಾಗಿ ಉಳಿದಿದೆ.
ಒಂದು ಹೆಣ್ಣಿನ ದುಃಖ ಸುಖ ಆಶೆ ಭಯ ಲಜ್ಜೆ ದೌರ್ಬಲ್ಯ,
ಧೂಲೀಮಯಿಯಾದ ಧರಣಿಯ ಮಡಿಲ ಮಕ್ಕಳು,
ಬೇರೆ ಎಷ್ಟೋ ಭ್ರಾಂತಿ, ಮತ್ತೆ ಎಷ್ಟೋ ವ್ಯಥೆ,
ಇನ್ನು ಎಷ್ಟೋ ಪ್ರೇಮ, ಎಲ್ಲವೂ ಒಂದೆ ಸಲ
ಬೆರೆತು ಗಟ್ಟಿಯಾಗಿವೆ. ಒಂದು ಸೀಮಾಹೀನ
ಅನಂತಮಹದಪೂರ್ಣತೆ ಉಳಿದಿದೆ.
ಕುಸುಮದ ಸುಗಂಧ ದೊರಕಿದ್ದುದಾದರೆ ಒಮ್ಮೆ
ಜನ್ಮ ಜನ್ಮಾಂತರದಲ್ಲಿ ಈ ಸೇವಿಕೆಯಕಡೆ ನೋಡು.

ಸೂರ್ಯೋದಯ

ಅವಕುಂಠನ ತೆರೆದು

ನಾನು ಚಿತ್ರಾಂಗದಾ, ರಾಜೇಂದ್ರ ನಂದಿನಿ.
ನಿನಗೆ ನೆನಪಿದ್ದೀತು, ಹಿಂದೆ ಒಂದು ದಿನ
ಆ ಸರೋವರದ ತಡಿಯ ಶಿವಾಲಯದಲ್ಲಿ

ಒಬ್ಬ ಹೆಣ್ಣು ಬಹು ಆಭರಣದ ಭಾರವನ್ನು
ತನ್ನ ರೂಪಹೀನ ತನುವಿಗೆ ಹೇರಿಕೊಂಡು
ನಿನ್ನನ್ನು ಕಾಣಿಸಿಕೊಂಡಳು. ಯಾರು ಬಲ್ಲರು
ನಾಚಿಕೆಯಿಲ್ಲದೆ ವಾಚಾಳಿ ಏನು ಹರಟಿದಳೊ?
ಪುರುಷರು ಪುರುಷರನ್ನು ಆರಾಧಿಸುವಂತೆ ಅವಳು
ನಿನ್ನನ್ನು ಆರಾಧಿಸಿದಳು. ನೀನವಳನ್ನು ನಿರಾಕರಿಸಿದೆ.
ಒಳ್ಳೆಯದೆ ಮಾಡಿದೆ. ಒಂದು ವೇಳೆ ಅವಳನ್ನು
ಆ ಸಾಮಾನ್ಯ ನಾರೀರೂಪದಲ್ಲಿ ಗ್ರಹಿಸಿದ್ದೆಯಾದರೆ
ಅವಳ ಹೃದಯದಲ್ಲಿ ಸಾವುಬರುವವರೆಗೂ
ಅನುತಾಪ ಕೊರೆಯುತ್ತಿತ್ತು. ಪ್ರಭು! ನಾನು ಅದೆ ನಾರಿ.
ಆದರೂ ಅವಳಲ್ಲ. ಅದು ನನ್ನ ಹೀನ ಛದ್ಮವೇಷ.
ಆಮೇಲೆ ವಸಂತನ ವರದಿಂದ ಒಂದು ವರ್ಷ
ಅಪೂರ್ವ ರೂಪವನ್ನು ಪಡೆದೆನು. ವೀರಹೃದಯವನ್ನು
ಮಾಯಾಭರದಿಂದ ತಣಿಸಿದೆನು. ಇದುಕೂಡ ನಾನಲ್ಲ.
ನಾನು ಚಿತ್ರಾಂಗದಾ; ದೇವಿಯಲ್ಲ; ಹಾಗೆಯೇ
ನಾನೊಬ್ಬ ಸಾಮಾನ್ಯ ರಮಣಿಯೂ ಅಲ್ಲ.
ಪೂಜೆಮಾಡಿ ತಲೆ ಮೇಲೆ ಇರಿಸಿಕೊಳ್ಳಬೇಕೇ
ನಾನಂಥ ಹೆಣ್ಣಲ್ಲ. ಕಡಮೆಯೆಂದು ಕಂಡು
ಹಿಂದೆ ಇರಿಸಿ ಹೊರೆಯಬೇಕೇ ಅಂಥ ಹೆಣ್ಣುಕೂಡ
ನಾನಲ್ಲ. ಕಷ್ಟವಾದ ಜೀವನ ಮಾರ್ಗದಲ್ಲಿ
ಪಕ್ಕದಲ್ಲಿ ಇರಿಸಿಕೊಳ್ಳುವುದಾದರೆ, ದುರೂಹವಾದ
ಚಿಂತೆಯಲ್ಲಿ ಭಾಗ ಕೊಡುವುದಾದರೆ, ಕಠಿನ ವ್ರತದಲ್ಲಿ
ನಿನಗೆ ಸಹಾಯವಾಗಲು ಅನುಮತಿ ಕೊಡುವೆಯಾದರೆ,
ಸುಖದಲ್ಲಿ ದುಃಖದಲ್ಲಿ ನನ್ನನ್ನು ಸಹಚರಿ ಮಾಡಿದರೆ,
ನೀನು ನನ್ನನ್ನರಿಯುವೆ. ಈಗ ನಾನು ಗರ್ಭದಲ್ಲಿ
ಧರಿಸಿರುವ ನಿನ್ನ ಸಂತಾನ ಗಂಡೇ ಆದರೆ
ಎಳತನದಿಂದ ವೀರಶಿಕ್ಷೆಯನ್ನು ಕೊಟ್ಟು

ಅವನನ್ನು ಎರಡನೆಯ ಅರ್ಜುನನನ್ನು ಮಾಡಿ
ಒಂದು ದಿನ ತಂದೆಯ ಚರಣದ ಬಳಿ ಕಳುಹಿಸುವಾಗ
ನನ್ನನ್ನು ನೀನು ಅರಿಯುವೆ ಪ್ರಿಯತಮ. ಈ ದಿನ
ಇಷ್ಟುಮಾತ್ರ ಅರಿಕೆ ಮಾಡುತ್ತೇನೆ: ನಾನು ಚಿತ್ರಾಂಗದಾ
ರಾಜೇಂದ್ರನಂದಿನೀ.

**ಅರ್ಜುನ**

ಪ್ರಿಯೆ ನಾನಿಂದು ಧನ್ಯ.

Printed by U. Narasimha Mallya,
Proprietor, B. B. D. Power Press, Cottonpet, Bangalore City.

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾನ್ತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ನಾಟಕ)
ಜನಪದ ಸಾಹಿತ್ಯ (ಉಪನ್ಯಾಸ)
ಕಾಕನಕೋಟೆ (ನಾಟಕ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )
ತಾಯ್ನುಡಿಯ ತಮ್ಮಡಿ
ನವರಾತ್ರಿ ೨
ನವರಾತ್ರಿ ೪

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (in four volumes)
Subbanna

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಾಂಡಾರ, ಕೋಟೆ, ಬೆಂಗಳೂರು ಸಿಟಿ.
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ.
ಜೀವನ ಕಾರ್ಯಾಲಯ,
43–44, ಗವಿಪುರದ ವಿಸ್ತರಣ, ಬಸವನಗುಡಿ ಅಂಚೆ.

## ಮೊದಲ ಮುದ್ರಣದ ಪ್ರಕಾಶಕರ
## "ನಮ್ಮ ಮಾತು"

ಕನ್ನಡದಲ್ಲಿ ಛಂದೋಬದ್ಧ ರೂಪಕಗಳು, ನೃತ್ಯಪ್ರಧಾನ ರೂಪಕಗಳು ತಲೆದೋರಿವೆ. "ತಿರುಪಾಣಿ" ಎಂಬ ಈ ರೂಪಕವು ಗೀತಪ್ರಧಾನವಾದುದು. ಗ್ರಂಥಕರ್ತರು ಗೀತಮಯವಾಗಿ ಈ ಕೃತಿಯನ್ನು ರಚಿಸಬೇಕೆಂದು ಆಶೆಯಿಟ್ಟುಕೊಂಡಿದ್ದರೂ ಮಾತುಗಳು ಸಹಜವಾಗಿ ಇದರಲ್ಲಿ ಭಾವದ ಹೂಗಳ ಸುತ್ತಲು ಹರಹಿಕೊಂಡ ಎಲೆಗಳ ಪಸರದಂತೆ ಇದಕ್ಕೊಂದು ಪೂರ್ಣ ಸೌಂದರ್ಯವನ್ನೆ ತಂದಿವೆ. "ಸುಬ್ಬಣ್ಣ"ನ ಜೀವಮಾನದುದ್ದಕ್ಕೂ ಅದರ ರೀತಿಯನ್ನು ನಿರೂಪಿಸಿದ ಕೈಯೆ ಇಲ್ಲಿ ತಿರುಪಾಣಿಯ ಜೀವನದ ಕೊನೆದಿನದ ಭಾವದ ಹೂಗೊಂಚಲನ್ನು ಅರಳಿಸಿದೆ. ಒಳಗೆ ಪೂರ್ಣವಾದ ಒಂದು ಜೀವವು ಪ್ರಪಂಚದ ಕಣ್ಣಿಗೂ ಲೆಕ್ಕಕ್ಕೂ ಪೂರ್ಣವಾದುದನ್ನೂ ಕೃತಾರ್ಥವಾದುದನ್ನೂ ಇಲ್ಲಿ ರೂಪಿಸಿದೆ.

ಇಂಥ ಒಂದು ಕೃತಿಯನ್ನು ಮನೋಹರ ಗ್ರಂಥ ಪ್ರಕಾಶನ ಸಮಿತಿಯ ಬಿಡಿಮುತ್ತಿನ ಸರದಲ್ಲಿ ಪವಣಿಸಲು ನಮಗೆ ಅನುಕೂಲ ಮಾಡಿಕೊಟ್ಟದ್ದಕ್ಕಾಗಿ ಕನ್ನಡ ಸಾಹಿತ್ಯವನ್ನು ಬಹುವಿಧದಲ್ಲಿ ಸಂಪನ್ನವನ್ನಾಗಿ ಮಾಡಲು ವ್ರತಬದ್ಧರಾಗಿ ನಿಂತ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೆ ನಾವು ಋಣಿಗಳಾಗಿದ್ದೇವೆ.

**ಪ್ರಕಾಶಕರು**

# ಮೊದಲನೆಯ ಮುದ್ರಣದ ಮುನ್ನುಡಿ

ವೇದಾಂತದ ಮೂರು ಮತಗಳಲ್ಲಿ ವಿಶಿಷ್ಟಾದ್ವೈತ ಒಂದು ಎಂದೂ ಅದನ್ನು ಒಂದು ಸಿದ್ಧಾಂತವಾಗಿ ಸ್ಥಾಪಿಸಿದವರು ಶ್ರೀರಾಮಾನುಜಾಚಾರ್ಯರೆಂದೂ ಎಲ್ಲರೂ ಬಲ್ಲರು. ರಾಮಾನುಜಾಚಾರ್ಯರಿಗೆ ಹಿಂದೆ ಈ ಮತವು ಜನರಲ್ಲಿ ಒಂದು ಸಂಪ್ರದಾಯವಾಗಿ ಬೆಳೆದು ಬಂದಿತ್ತು. ಸಂಪ್ರದಾಯಕ್ಕೆ ಕಾರಣಪುರುಷರಾಗಿದ್ದು ದೈವವನ್ನು ಸಾಕ್ಷಾತ್ಕಾರ ಮಾಡಿಕೊಂಡ ಮಹನೀಯರನ್ನು ಅವರ ಅನುಯಾಯಿಗಳು ಆಳ್ವಾರ್‌ಗಳೆಂದು ಪೂಜಿಸುತ್ತಿದ್ದರು. ಆಳ್ವಾರುಗಳು ಹನ್ನೆರಡು ಮಂದಿ. ಇವರಲ್ಲಿ ಬೇರೆ ಬೇರೆ ಕುಲದ ಜನರಿದ್ದಾರೆ. ಇವರಲ್ಲಿ ಒಬ್ಬರಾದ ತಿರುಪಾಣಿ ಎನ್ನುವವರು ಅಂತ್ಯಜರಾಗಿ ಹುಟ್ಟಿದವರಂತೆ. ಬಹುವರ್ಷ ರಂಗನಾಥರಿಗೆ ಸೇವೆ ಸಲ್ಲಿಸುತ್ತಿದ್ದ ಇವರಮೇಲೆ ಒಂದು ದಿನ ದಾರಿ ಬಿಡಲಿಲ್ಲವೆಂಬ ಕಾರಣದಿಂದ ದೇವಾಲಯದ ಚಾಕರನೊಬ್ಬನು ಕಲ್ಲೆಸೆದನೆಂದೂ ದೇವರು ಇದನ್ನು ಸಹಿಸಲಾರದೆ ಭಕ್ತನನ್ನು ಒಳಗೆ ಕರತರಬೇಕೆಂದು ದೇವಾಲಯದ ಸರ್ವಾಧಿಕಾರಿಗೆ ಆಜ್ಞೆ ಮಾಡಿದನೆಂದೂ ಸರ್ವಾಧಿಕಾರಿ ಲೋಕಸಾರಂಗನು ಹಾಗೆ ಮಾಡಲು ತಿರುಪಾಣಿ ದೇವರ ಮೂರ್ತಿಯಲ್ಲಿ ಐಕ್ಯವಾದರೆಂದೂ ಸಂಪ್ರದಾಯದ ಇತಿಹಾಸ ಹೇಳುತ್ತದೆ. ಆ ಭಕ್ತನೆಂಥವನಿದ್ದಿರಬಹುದು ಅವನ ಆವರಣವೆಂಥದಿದ್ದಿರಬಹುದು ಎಂದು ಊಹಿಸುವುದಕ್ಕೆ ಈ ಸಣ್ಣ ದೃಶ್ಯವನ್ನು ರಚಿಸಿರುವುದಾಗಿದೆ.

ಈ ಪುಸ್ತಕವನ್ನು ಧಾರವಾಡದ ನಮ್ಮ ಗೆಳೆಯರು ಪ್ರಕಟಿಸಬೇಕೆಂದು ಅಪೇಕ್ಷಿಸಿದಾರೆ. ಇದಕ್ಕೆ ಕಾರಣರಾದ ಗೆಳೆಯ ಶ್ರೀ ದತ್ತಾತ್ರೇಯ ಬೇಂದ್ರೆ ಇವರಿಗೂ ಪ್ರಕಾಶಕರಾದ ಮನೋಹರ ಗ್ರಂಥಮಾಲೆಯ ಮಿತ್ರರಿಗೂ ನಾನು ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತೇನೆ.

ಬೆಂಗಳೂರು, ಧಾತು ಸಂವತ್ಸರ ಫಾಲ್ಗುಣ ಶುದ್ಧ ಪ್ರಥಮ

**ಮಾಸ್ತಿ ವೆಂಕಟೇಶ ಅಯ್ಯಂಗಾರ್**

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)

ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ
ಕಾಕನಕೋಟೆ
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ
ರಾಮನವಮಿ
ಮೂಕನ ಮಕ್ಕಳು
ತಾಯ್ನುಡಿಯ ತಮ್ಮಡಿ
ನವರಾತ್ರಿ ೨, ೪
ಚಿತ್ರಾಂಗದಾ (ಭಾಷಾಂತರ)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
ಜೀವನ ಕಾರ್ಯಾಲಯ, ೪೩-೪೪, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಪಾತ್ರಗಳು

ಭಕ್ತ ಪಾಣಿ

ಅಳಿಯ

ಭಾವ

ತಂಗಿ

ಲೋಕಸಾರಂಗ

ಆಳ್ವಾರ್

ಮಧುರ

ಶಠಕೋಪ

ಕಾರೀದಾಸ

ಮಡಿಯಾಕೆ

ಹರಿದಾಸ

ಕೋಲಾಟದ ಗುರು

ಅರ್ಚಕರು, ಸುಮಂಗಲಿಯರು, ಬ್ರಾಹ್ಮಣರು, ಸೇವಕರು, ಮಕ್ಕಳು

## ಸೂತ್ರಧಾರ

ಆದಿಯಲಿ ಜಗದಾದಿದೈವಕಭಿನಮಿಸಿ
    ನುಡಿಗೆ ನಾಡಿಗೆ ಶುಭವನೀಡೆಂದು ಬೇಡಿ,
ಪೂರ್ವದಲಿ ಜನಕಾಗಿಸಲೆದುಡಿದು ಶ್ರಮಿಸಿ
    ಧನ್ಯತೆಯೊಳಾಳ್ದ ಹಿರಿಯರ ಹೆಸರ ಹಾಡಿ,
ನಾಟ್ಯಾದಿಕಲೆಯುಪಾಸಕಕುಲಕೆ ಮಣಿದು
    ನೆರೆದಿರುವ ಆರ್ಯಮಿತ್ರರಿಗೆ ಕೈಮುಗಿದು
ತೋರಲಿರುವೆವು ಒರ್ವಸೋದರನು ಹೆಣೆದ
    ದೃಶ್ಯವಿದನಿಂದು. ನಮ್ಮಾಶಯವ ಬಗೆದು
ಗುಣವಿಹುದೆಕೊಂಡು ದೋಷವನೆಲ್ಲ ಸಹಿಸಿ
    ಬಂಧುಗಳೆ ನಮ್ಮೊಳೀದಿನ ಅನುಗ್ರಹಿಸಿ.

ಕ್ಷೀರಸಾಗರಶಾಯಿ ಶ್ರೀಹರಿಯನಾಮು
    ಮುಖ್ಯತಾರಕಮಂತ್ರವೆಂದು ನಾರದನು
ಪೂರ್ವದಲಿ ಹಾಡಿದನು. ತ್ರಿಭುವನದಧಾಮು
    ಅಹುದೆಂದುಮೊಳಗೆ ಗಾಯನವಿಶಾರದನು
ನಿತ್ಯವಾಗಿರಲೀ ನಿದಾನವೆಂದೆಳಸಿ
    ಮನುದನುಜಕುಲ ಮುಖ್ಯರಾದ ಧ್ರುವರಾಯ
ಪ್ರಹ್ಲಾದ ಚಕ್ರೇಶರಿಗೆ ಇದನು ಕಲಿಸಿ
    ಭಕ್ತಿಮಾರ್ಗವಿದು ಎಂದನು. ಇದು ಅಜೇಯ ಅ-
ನಂತ ಅಕ್ಷರ ಎಂದು ನಂಬಿಹುದು ಲೋಕ.
    ಇದ ಅರಿದು ನಡೆವರಿಗೆ ಇರುವೆಡೆಯೆ ನಾಕ.

ಭರತವರ್ಷದಲಿಂತು ಆಯುಗದಿ ಮೊಳೆದು
ಭಕ್ತಿಲತೆ ಹೊರವಾಗಿ ಹೊಮ್ಮಿ ಕುಡಿ ಇಟ್ಟು,
ದ್ರವಿಡದೇಶದಲಿ ನೆಲಸಿತು, ಉಬ್ಬಿಬೆಳೆದು
ಆಳ್ವಾರುಗಳ ಬಾಳುವೆಯುಲಿ ಹೂಬಿಟ್ಟು.
ನಮಗೆ ಹರಿಯೇ ದಿಕ್ಕು ಎಂದ ಈ ಜನಕೆ
ಹರಿವನೀರೆಲ್ಲ ಹರಿಯೆಂದು ಹಾಡುವುದು;
ಸುಳಿವ ಎಲರೆಲ್ಲ ಹರಿ ಎನ್ನುವುದು; ಮನಕೆ
ಲೋಕವೇ ಹರಿ ಎಂದು ದನಿಯನೀಡುವುದು.
ಇಂತು ಹರಿಸರಸಿಯುಲಿ ಅದ್ದಿರುವ ಇವರ
ಹನ್ನೆರಡು ಹೆಸರ ಹೊಗಳುತಲಿಹುದು ಪ್ರವರ.

ಈ ಮಹಾಮಹಿಮಪಂಕ್ತಿಗೆ ಜಾತಿಕುಲದ
ಭೇದವಿಲ್ಲ. ಇಲ್ಲಿ ಹೆಣ್ಣೊಬ್ಬಳುಂಟು.
ತಂದೆ ಹರಿ ತಾಯಿ ಸಿರಿ ಎಂಬೊಂದು ಬಲದ
ಸಂಬಂಧದಲಿ ಇವರು ಒಂದು ಕುಲ, ನಂಟು.
ಅರಸ ಒಕ್ಕಲಿಗ ಹಾರುವ ಕಳ್ಳ ಇರುವ
ಈ ಪಂಕ್ತಿ ಒರ್ವ ಅಂತ್ಯಜನ ಪಡೆದಿಹುದು.
ಪಾಣಿ ಎಂದವನ ಹೆಸರನು ಉಸಿರೆಸರುವ
ಪಾತಕದ ಬೆಂಗಾಡ ಜೀವ ಸುಡಬಹುದು.
ಅವನು ಮುಕ್ತಿಗೆಸಂದ ದಿನದ ಕತೆ ಇಲ್ಲಿ
ನಿಮ್ಮೆದುರು ಸುಳಿಯುವುದು: ಅಕೊ ಭಕ್ತ, ಅಲ್ಲಿ!

# ತಿರುಪಾಣಿ

## ಸ್ಥಾನ ೧

**ಶ್ರೀರಂಗದಲ್ಲಿ ರಂಗನಾಥನ ದೇವಾಲಯದ ಮುಂಭಾಗ. ಬೀದಿಯಲ್ಲಿ ಸ್ವಲ್ಪ ದೂರದಲ್ಲಿ ಭಕ್ತ ಪಾಣಿ ಹಾಡುತ್ತ ನಿಂತಿದಾನೆ.**

**ಪಾಣಿ**

**ಬಿಲಹರಿ**

ಶ್ರೀರಂಗದಲಿ ನಮ್ಮ ಕಾವೇರಿದೇವಿಯರ
ನಳಿದೋಳ ನಡುವೆ ಸುಖದಲಿ ಪವಡಿಸಿ
ಈರೇಳು ಲೋಕವನು ನಿದ್ರೆಯರಿಯದ ಕನಸ
ಅಲೆಯೊಂದರಿಂದಲೇ ಸೃಜಿಸಿ ಸುಖಿಸಿ
ಕಾಲಚಕ್ರವ ಸುತ್ತಿ ಯುಗಯುಗಗಳನು ಹರಿಸಿ
ಸಮಯ ಬರೆ ಜಗವನುದರದಲಿ ಮರೆಸಿ
ಲೀಲೆಯಲಿ ಸಂಭ್ರಮಿಸಿ ನಗುತಿರುವ ರಂಗೇಶ
ರಮೆಯರಸ ನಿನ್ನಡಿಗೆ ಶರಣು ಶರಣು.

ಇಕ್ಷ್ವಾಕು ನಳ ನಹುಷ ಸಗರ ಕುಕ್ಷಿ ವಿಕುಕ್ಷಿ
ಅಂಬರೀಷ ದಿಲೀಪ ರಘುರಾಯರು
ಲಕ್ಷವರುಷದ ಕಾಲ ಮನವ ನಿನ್ನಲಿ ನೆಟ್ಟು
ನಂಬಿ ಮಾಡಿದ ಪೂಜೆಗೊಪ್ಪಿಕೊಂಡು
ಕೈಮುಗಿದು ಬಂದವರ ಕಾಲ ಹಿಡಿಯುತ ಕುಲದ
ಪುತ್ರನೆನಿಸುತ ಸಾಲಗಳನು ಹರಿಸಿ
ರಾಮಾಭಿಧಾನದಲಿ ಭಕ್ತನಿಗೆ ತನ್ನನೇ
ತೆತ್ತ ಸಿರಿಯರಸ ರಂಗೇಶ ಶರಣು.

ಶರಣು ಸುಂದರವೇಷ ಕಸ್ತೂರಿ ರಂಗೇಶ
ಸುಜನಕುಲ ಸಂತೋಷ ವಿಮಲಹಾಸ
ಶರಣು ಬಂದ ವಿಭೀಷಣಗೆ ಲಂಕೆ ನಿಜದಾಸ
ಮಾರುತಿಗೆ ಬ್ರಹ್ಮಪದವೆಂದ ಶ್ರೀಶಾ
ನಂಬಿ ಬಹ ಭಕ್ತರಾಶೆಯನೆಲ್ಲ ಸಲ್ಲಿಸುತ
ಶ್ರೀರಂಗದಲಿ ನಿಂತ ಶೇಷಶಾಯಿಯಾ
ಹಂಬಲಿಸುತಿಹೆನಯ್ಯ ಬಡಪ್ರಾಣಿ ನಾ ಪಾಣಿ
ಮಾರಮಣ ಸಲಹಯ್ಯ ಶರಣು ಶರಣು.

(ಇಬ್ಬರು ಅರ್ಚಕರು ಪ್ರವೇಶಿಸುವರು)

ಮೊದಲನೆಯುವ ಏಯ್ ದಾರೀ ಬಿಡೋ.

ಪಾಣಿ (ನಮಸ್ಕರಿಸಿ) ಬಿಟ್ಟೆ ದೇವರೆ; ದಯಮಾಡಿ. (ಪಕ್ಕಕ್ಕೆ ಹೋಗುತ್ತಾನೆ)

ಎರಡನೆಯುವ ದಿನಾ ಈ ಹೊಲೆಯನದೊಂದು ಗೋಳು.

ಮೊದಲನೆಯುವ ಗೋಳೇನು, ಕೂಗಿದರೆ ದಾರಿ ಬಿಡುತಾನಲ್ಲ.

ಎರಡನೆಯುವ ದಾರಿ ಬಿಡುತಾನೆ ಸರಿ. ಆದರೆ ಸ್ನಾನಮಾಡಿಕೊಂಡು ಬಂದು ಇವನ್ನ ಕೂಗೋದು ಒಂದಾಯಿತಲ್ಲ.

ಮೊದಲನೆಯುವ ಮಾತಾಡಿಸಿದರೆ ತೊಂದರೆ ಇಲ್ಲ. ಅವನೂ ವೈಷ್ಣವ.

ಎರಡನೆಯುವ ಒಳ್ಳೇ ವೈಷ್ಣವ. ನಡಿ ಸಾಕು ನಿನ್ನ ಮಾತು.

(ಮುಂದಕ್ಕೆ ಹೋಗುವರು)

ಪಾಣಿ (ಮತ್ತೆ ಮುಂದಕ್ಕೆ ಬಂದು ಹಾಡುವನು)

ಹಿಂದುಸ್ತಾನಿ ತೋಡಿ

ಬಾರೋ ರಂಗ ಬಾರೋ ಕೃಷ್ಣ
ಬಾರೋ ಸಿರಿರಮಣಾ ಮೊಗದೋರೋ

ಯಾರೋ ನನ್ನನು ಪೊರೆವವರು ಉ
ದಾರ ಚರಿತಾ ನೀ ಕೈ ಬಿಡಲು
ಕಾರುಣಿಕಾ ನೀನಲ್ಲದೆ ಆ
ವಾರಣರಾಜನ ಪೊರೆದವರಾರೋ

ಘೋರ ಸಂಕಟದಲಿ ಪಾಂಡವರ
ನಾರಿ ಹಲುಬಿ ಕರೆಯೇ
ಸಾರಸಾಕ್ಷಾ........

(ದೂರದಲ್ಲಿ ಇಬ್ಬರು ಬರುವುದನ್ನು ಕಂಡು ದೂರಕ್ಕೆ ಸರಿಯುತ್ತಾ ಹಾಡಿಕೊಂಡೇ ಇರುವನು. ಶಠಕೋಪ ಕಾರೀದಾಸ ಬರುವರು)

ಶಠಕೋಪ ವೈಷ್ಣವನೆಂದಮೇಲೆ ವರ್ಣ ಅಷ್ಟು ಮುಖ್ಯವಲ್ಲ. ಭಾಗವತ ಧರ್ಮಕ್ಕೆ ಮೂಲಪುರುಷನೇ ಅಸುರನಲ್ಲವೇ? ಅವನು ಅಸುರರಲ್ಲಿ ಹುಟ್ಟಿದನಷ್ಟೆ; ಗುಣದಿಂದ ಭಗವದ್ಭಕ್ತರಲ್ಲಿ ಮೊದಲಿಗನಾದನು.

ಕಾರೀದಾಸ ಅಪ್ಪಣೆ.

ಶಠಕೋಪ ನಾನು ದ್ವಿಜ, ನೀನು ದ್ವಿಜನಲ್ಲ. ಆದರೆ ಇದು ಜಾತಿ ವ್ಯವಹಾರಕ್ಕೆ ಊಟಕ್ಕೆ ಕೊಡುತರುವುದಕ್ಕೆ ಆಗಿರುವ ಭೇದ. ಆತ್ಮವೆರಡೂ ವಿಷ್ಣುಭಕ್ತಿಯಿಂದ ಸಮಾನವಾಗಿವೆ.

ಕಾರೀದಾಸ ಅಪ್ಪಣೆ.

ಶಠಕೋಪ ನಮ್ಮ ಧರ್ಮವನ್ನು ಈ ಯುಗದ ಆದಿಯಲ್ಲಿ ಬೆಳಗಿದ ಶಠಕೋಪಗುರು ದ್ವಿಜರಲ್ಲವಲ್ಲ; ಆದರೆ ಆತನ ಭಕ್ತಿ ಲಕ್ಷಾಂತರ ದ್ವಿಜರನ್ನು ಆತನ ಶಿಷ್ಯರನ್ನಾಗಿ ಮಾಡಿತು.

(ದೇವಾಲಯದ ಸ್ಥಾನೀಕನೊಬ್ಬನು ಬರುವನು)

ಸ್ಥಾನೀಕ ಯಾರಯ್ಯ ಅದು ದಾರೀಲಿ, ಹೋಗು ಒಂದು ಕಡೆಗೆ.

(ಎಂದು ಕೂಗುವನು. ಪಾಣಿ ಬೆಚ್ಚಿ ಒಂದು ಕಡೆಗೆ ನಡೆಯುವನು. ಸ್ಥಾನೀಕನು ಪಾಣಿಯನ್ನು ಬಿಟ್ಟು ಒಂದು ಕಡೆಗೆ ಹೋಗಿ ಮರೆಯಾಗುವನು)

ಶಠಕೋಪ (ತನ್ನನ್ನು ಏನು ಹೇಳಿದನೋ ಎಂದು) ಯಾರವರು? ಏನು ಹೇಳಿದರು?

ಕಾರೀದಾಸ ದೇವಸ್ಥಾನದ ಸ್ಥಾನೀಕರು. ಪಾಣಿ ಅಲ್ಲಿ ನಿಂತಿದಾನೆ. ಅವನನ್ನು ದೂರ ಹೋಗು ಎಂದರು.

ಶಠಕೋಪ ಓ, ಸರಿ.

ಕಾರೀದಾಸ ಒಳ್ಳೇ ಭಕ್ತ ಈ ಪಾಣಿ. ಅವರ ಜನವೆಲ್ಲಾ ಮಾರಿಯನ್ನ ಅಣ್ಣನನ್ನ ಪೂಜೆಮಾಡುತ್ತಾರೆ. ವರ್ಷವರ್ಷ ಮೇಕೆ ಕೋಣನನ್ನ

ಸುಮ್ಮನೆ ಬಲಿ ಕೊಡುತ್ತಾರೆ. ಇವ ಅದೆಲ್ಲಾನೂ ಬಿಟ್ಟು ಮೂವತ್ತು ವರ್ಷವಾಯಿತಂತೆ. ಇವನಿಂದ ಇವನ ಜನವೂ ಅನೇಕರು ಇದೇ ದಾರಿಗೆ ಬಂದಿದಾರೆ.

**ಶಠಕೋಪ** ಒಳ್ಳೇ ಭಕ್ತ ಪಾಣಿ.

**ಶಾರೀದಾಸ** ಗುರುಗಳೆ, ಪುಂಡರೀಕಾಕ್ಷನನ್ನ ಸ್ಮರಿಸಿದವನು ಒಳಗೂ ಹೊರಗೂ ಶುದ್ಧ ಎಂತ ಉಪದೇಶವಿದೆಯಲ್ಲ. ಇವನು ಯಾವಾಗಲೂ ದೇವರ ಧ್ಯಾನದಲ್ಲಿಯೇ ಇರುತ್ತಾನೆ. ಆದರೂ ಇವನ ಹತ್ತಿರಕ್ಕೆ ನಾವು ಹೋಗಬಾರದು ಎನ್ನುತ್ತೀವಲ್ಲ.

**ಶಠಕೋಪ** ದೇಹಕ್ಕೆ ಏನು ಮಾಡುವುದು? ದೇಹವೆನ್ನುವುದು ಯಾವ ಪಿಂಡದಿಂದ ಬಂದರೆ ಅದರ ಗುಣ ಅದಕ್ಕೆ ಇರುತ್ತೆ. ಅಂತ್ಯಜ ಪಿಂಡ. ಸ್ನಾನಮಾಡಿದರೂ ಅಂತ್ಯಜಪಿಂಡವೇ, ಧ್ಯಾನಮಾಡಿದರೂ ಅಂತ್ಯಜಪಿಂಡವೇ.

**ಶಾರೀದಾಸ** ದೇಹ ಬಿಟ್ಟರೆ ಇವನು ವೈಕುಂಠಕ್ಕೆ ಹೋಗಬಹುದು, ದೇಹ ಇರುತ್ತ ನಮ್ಮ ಹತ್ತಿರಲೂ ಬರಕೂಡದು.

**ಶಠಕೋಪ** ಹೌದು, ಅದೇ ಶಿಷ್ಟಾಚಾರ.

(ಎಂದು ಮುಂದೆ ಹೋಗುವರು)

**ಪಾಣಿ** (ಅವರಡಿಯ ಗುರುತನ್ನು ಮುಟ್ಟಿ ಕಣ್ಣಿಗೊತ್ತಿಕೊಂಡು, ಹಾಡುವನು)

ಘೋರ ಸಂಕಟದಲೀ ಪಾಂಡವರ
ನಾರಿ ಹಲುಬಿ ಕರೆಯೇ
ಸಾರಸಾಕ್ಷ ನೀನಲ್ಲದೆ
ಯಾರು ಬಂದರೋ ಅವಳನು ಪೊರೆಯೇ
ಕಾಣದ ಕರ್ಮಕೆ ಸಿಲುಕಿ ನೊಂದೆನೋ
ಹೀನನೆನಿಸಿಕೊಂಡೆನೋ
ಪಾಣಿಯ ಉಸಿರನುದ್ಧರಿಸಲು ಬಲ್ಲ
ಜಾಣಾ ಕೃಪೆದೋರೋ ಪೊರೆ ಭಾರೋ

(ಪಾಣಿಯ ಸೋದರಳಿಯ ಬರುವನು)

**ಅಳಿಯ** ಮಾವಯ್ಯ, ಅಮ್ಮ ನಿನ್ನ ಕರಕೊಂಡು ಬಾ ಅಂದಳು.

ಪಾಣಿ ಯಾಕಂತಂದಳು?

ಅಳಿಯ ಗುಡಿಗೆ ಹೋಗಬೇಕಂತೆ.

ಪಾಣಿ ಇವತ್ತು ನಾ ಬರಲಿಲ್ಲ ಅನ್ನಪ್ಪ.

ಅಳಿಯ ಬಾ ಮಾವಯ್ಯ ಹೋಗೋಣಂತೆ.

(ಎಂದು ಕೈಹಿಡಿದು ಎಳೆಯುತ್ತಾನೆ)

ಪಾಣಿ ನನ್ನ ಕಾಡಬೇಡಪ್ಪಾ. ಇವತ್ತು ನಾ ಬರಲಿಲ್ಲ: ಹೋಗಿ ಅಮ್ಮನಿಗೆ ಹೇಳು. ಅದು ಹಂಗಿರಲಿ ಇತ್ತ ಬಾ, ಆ ಜಯ ಗೋವಿಂದ ಹಾಡು ಕೇಳೋವ.

ಅಳಿಯ ಮಧ್ಯಮಾವತಿ

ಜಯ ಗೋವಿಂದ, ಜಯ ಗೋವಿಂದ
ಜಯ ಗೋವಿಂದ ಜಯ ಗೋವಿಂದ

(ಎರಡು ಚರಣ ಹಾಡಿ) ಮಾವಯ್ಯ, ಹಾಡು ಹೇಳುತಿದ್ರೆ ಕುಣಿಯೋಣ ಅನಿಸುತದೆ.

ಪಾಣಿ ಕುಣಿ ಹಂಗಾದರೆ.

ಅಳಿಯ (ಕುಣಿಯುತ್ತ)

ಜಯ ಸಿರಿರಂಗ ಅಸುರಕುಲಭಂಗ
ಜಯ ಮಂಗಳಾಂಗ ಕರುಣಾಪಾಂಗ

ಜಯ ಮುಚುಕುಂದ ಪ್ರಿಯ ಜಯ ನಂದ
ಗೋಪನ ಕಂದ ಯಶೋದಾನಂದ

ಸುಂದೋಪಸುಂದಮೋಹಕ ಜಯ ಭವ
ಬಂಧನಿವಾರಕ ಜಯ ಗೋವಿಂದ

(ಪಾಣಿಯೂ ಅವನ ಜೊತೆಗೆ ಕುಣಿಯುವನು)

ಜಯ ರಾಕ್ಷಸ ಕುಲನಾಶಕ ದೇಶಿಕ
ಶಠಕೋಪ ಹೃದಯ ಕಮಲ ವಿಕಾಸಕ

ದಾಸಕುಲಜ ಪಾಣಿಯನುದ್ಧರಿಸಿ
ಆಶೆಯ ಸಲಿಸುವ ದೇವ ಮುಕುಂದ

ಪಾಣಿ (ಕುಣಿತ ಮುಂಗಿದಮೇಲೆ ಅಳಿಯುನನ್ನು ತಬ್ಬಿಕೊಂಡು ಮುದ್ದಿಸಿ)
ಚೆಂದಾಗಿ ಕುಣೀತೀ ಅಳಿಯುವ್ಯ್ಯಯ.
ಅಳಿಯು ಮಾವಯ್ಯ ನೀ ಕಲಿಸಿದ್ದು ಕೋಲಾಟದ ಹಾಡೂ ಕಲಿತಿವ್ನಿ.
ಪಾಣಿ ಓ ನಿಜವಾಗಿ?
ಅಳಿಯು ನಿಜವಾಗಿ. ಹಾಡೋನೆ?
ಪಾಣಿ ಊಂ, ಹಾಡು, ಕೇಳೋವ.
ಅಳಿಯು

ನಾದನಾಮಕ್ರಿಯ

ರಂಗಪ್ಪ ನೋಡೋ ಬರ್ತಾನೇ ನಮ್ಮ
ರಂಗಪ್ಪ ನೋಡೋ ಬರ್ತಾನೇ

ಲೋಕಾವನೆಲ್ಲ ಮಾಡ್ಯಾನೋ ರಂಗ
ಲೋಕದಲೆಲ್ಲಾ ಆಡ್ಯಾನೋ
ಲೋಕದಲೆಲ್ಲಾ ಆಡುವ ಆಟಾ
ರಂಗಪ್ಪಾ ಚೆನ್ನಾ ನೋಡ್ಯಾನೋ

ಜೀವದ ಕೋಟೀ ಮಾಡ್ಯಾನೋ ರಂಗ
ಜೀವದ ಉಸುರಾಗಿ ಆಡ್ಯಾನೋ,
ಕೋಟ್ಯಾಂತ್ರ ಜೀವದ ಸೂಸ್ತ್ರರ ಆಗಿ
ಕಾಣದೆ ಒಳಗೇ ಓಡ್ಯಾನೋ

ರಂಗಪ್ಪ ಒಳ್ಳ್ಯೇರ ಮಾಡ್ಯಾನೋ ಅವ್ರ
ಮನಸಿಲಿ ನಿಂತೇ ಹಾಡ್ಯಾನೋ
ಹಾಡಿ ಆಡಿ ಮನಸನ ಒಪ್ಪಿಸಿ
ಅವರನ್ನೆ ಭಿಕ್ಷೆ ಬೇಡ್ಯಾನೋ

ರಾಕ್ಷಸರನ ರಂಗ ಮಾಡ್ಯಾನೋ ಭಾಳ
ಪಾಪಕ್ಕೆ ಅವರನ್ನ ದೂಡ್ಯಾನೋ
ಪಾಪಕ್ಕೆ ನಾಲಿಗೆ ಚಪ್ಪರಿಸೋರೆ
ಜನ್ಮ ಜನ್ಮಾಂತರ ಕಾಡ್ಯಾನೋ

ರಂಗಪ್ಪ ಹೆಣ್ಣನ್ನ ಮಾಡ್ಯಾನೋ ಆ
ಹೆಣ್ಣಲಿ ಹೆಣ್ಣಾಗಿ ಕೂಡ್ಯಾನೋ
ಹೆಣ್ಣಾಗಿ ಮನಸರ ಕಣ್ಣುಂದೆ ಅಡ್ಡಾಡಿ
ತಡದಾರೋ ಇಲ್ಲೋ ನೋಡ್ಯಾನೋ

ರಂಗಪ್ಪ ಗಂಡಸರ ಮಾಡ್ಯಾನೋ ಬಾಳ
ಉಳುಮೆಗೆ ಅವರನ್ನ ಹೂಡ್ಯಾನೋ
ಕಷ್ಟ ದುಃಖದ ಉಕ್ಕೆ ಆಸರಿಗೆ
ತಡದಾರೊ ಸೋತಾರೊ ನೋಡ್ಯಾನೋ

ರಂಗಪ್ಪ ನಿನ್ನನ್ನ ಮಾಡ್ಯಾನೋ ನಿಂಗೆ
ನೀನೆಂಬೊ ಆತುಮ ನೀಡ್ಯಾನೋ
ಮಗನನ್ನ ಆಟಕ್ಕೆ ಕೇಳುವ ತಂದ್ಯಂತೆ
ತನಗದ ಕೊಡು ಅಂತ ಬೇಡ್ಯಾನೋ

ರಂಗಪ್ಪ ನನ್ನನ್ನ ಮಾಡ್ಯಾನೋ ನನ್ನ
ಎಲ್ಲಿಂದಾಲೋ ಕರದು ಹಾಡ್ಯಾನೋ
ಎಲ್ಲವನೆ ಅಂತ ಅತ್ತಿತ್ತ ನೋಡಿದ್ರೆ
ಕಾಣದೆ ಮರೆಯಿಂದ ಕಾಡ್ಯಾನೋ

ಎಂದಿಗೆ ನಾ ನಿನ್ನ ನೋಡ್ಯೇನೋ ರಂಗ
ಎಂದಿಗೆ ನಾ ನಿನ್ನ ಕೂಡ್ಯೇನೋ
ಆಡಿದ್ದು ಕಾಡಿದ್ದು ಸಾಕಾಗಿ ಸೋತು
ಬಾ ಎಂದು ಪಾಣೀ ಬೇಡ್ಯೇನೋ

ಪಾಣಿ (ಕೊನೆಯ ಪದವನ್ನು ಮರಳಿ ಹೇಳುತ್ತ)

ಎಂದಿಗೆ ನಾ ನಿನ್ನ ನೋಡ್ಯೇನೋ ರಂಗ
ಎಂದಿಗೆ ನಾ ನಿನ್ನ ಕೂಡ್ಯೇನೋ
ಆಡಿದ್ದು ಕಾಡಿದ್ದು ಸಾಕೋ ರಂಗಪ್ಪ
ಬಾ ಎಂದು ಪಾಣೀ ಬೇಡ್ಯೇನೋ

(ಎಂದು ಗದ್ಗದಸ್ವರದಿಂದ ಮುಗಿಸಿ, ಮನಸ್ಸಿನ ಉದ್ವೇಗವನ್ನು ತಡೆದುಕೊಳ್ಳುವನು)

ಅಳಿಯ ಮಾವಯ್ಯ ಅದ್ಯಾಕ ಅಳತೀಯ ?

ಪಾಣಿ ದೇವರು ಕಾಣಲಿಲ್ಲ ಅಂತಪ್ಪ.

ಅಳಿಯ ಅದ್ಯಾಕ ಇಷ್ಟು ಕರದರೂ ಬರೋಲ್ಲ ದೇವರು ?

ಪಾಣಿ ಏನಾರ ಕೆಲಸವಾಗಿರಬಹುದಲ್ಲಾ.

ಅಳಿಯ ನಾವು ಕೂಗಿದಾಗ ಅಮ್ಮ ಬರೋಲ್ಲಲ್ಲ ಹಂಗೆ?

ಪಾಣಿ ಹಂಗೇ.

ಅಳಿಯ ಅಮ್ಮ ಬರದೇ ಇದ್ರೆ ನಮ್ಮ ಪುಟ್ಟಿ ಸುಮ್ಮಕೆ ಅಳುತಾಳಲ್ಲ.

ಪಾಣಿ ಹೌದು ನೋಡು, ನಾವೂ ಹಂಗೇನೇ ದೇವರು ಬರಲ್ಲ ಅಂತ ಅಳೋದು.

ಅಳಿಯ ನಾವೇ ದೇವಸ್ಥಾನಕ್ಕೆ ಹೋಗುವಾ ಬಾ. ಓ ಮರೆತೇ ಬಿಟ್ಟೆ. ಅಮ್ಮ ಕಾದುಕೊಂಡಿದಾಳೆ.

(ಪಾಣಿಯ ತಂಗಿ ಬರುವಳು)

ತಂಗಿ ಎಲಾ ಏನೋ. ಮಾವಯ್ಯನ ಕರತಾರೋ ಅಂದರೆ ಇಲ್ಲೇ ಚಕ್ಕಂದಕೆ ನಿಂತೀ.

ಪಾಣಿ ನಾನೇ ನಿಲಿಸಿಕೊಂಡೆ ಅಮ್ಮಯ್ಯ. ಅಮ್ಮಯ್ಯ, ನಿನ್ನ ಮಗ ಆ ಕೋಲಾಟದ ಹಾಡು ಹೇಳಿದ. ಏನು ಅಂದಾಗಿ ಹೇಳಿದ ಅಂತೀಯ! ಬಂಗಾರದ ಹಂಗೆ ಹೇಳಿದ.

ತಂಗಿ ನೀ ಏನು ಮೆಚ್ಚಿಕೊಂಡರೆ ಏನು? ಅವನಿಗೆ ಮಗಳ ಕೊಡೋ ಹಂಗಿಲ್ಲ. ಕಾಲಿಗೆ ಬಿದ್ದು ಕೇಳಿಕೊಂಡರೂ ನೀ ಮದುವೆಯಾಗಲ್ಲ ಅಂದುಬಿಟ್ಟೆ.

ಪಾಣಿ ಅಮ್ಮಯ್ಯ, ನಾ ಮದುವೆಯಾಗೊ ಮನುಸನಲ್ಲ. ಸಂಪಾದಿ ಸೋರು ಸಂಸಾರ ನೋಡಿಕೊಂಬೋರು ಮದಿವ್ಯಾಗಬಹುದಲ್ಲ; ನನ್ನ ಬುದ್ಧಿ ಅದಕೆಲ್ಲ ಬರವಲ್ಲದು. ತಿರಿದು ತಿನ್ನುವ ಮನುಸ ಹೆಂಡರನ್ನ ತಂದರೆ ಅವಳು ಉಡೋದೇನ ಉಣೋದೇನ?

ತಂಗಿ ಅತ್ತಿಗೆ ಅಂತ ಒಬ್ಬಳನ್ನ ನೀ ಕರತಂದಿದ್ರೆ ನಾವು ಅವಳನ್ನ ಸಾಕುತಿರಲಿಲ್ಲೇ ಊರೋರು ಎಲ್ಲಾರ ಹಂಗೆ? ನಾ ಕೇಳಿ ಬರಲಿಲ್ಲ. (ಎಂದು ಕಣ್ಣೊರಸಿಕೊಳ್ಳುವಳು)

ಪಾಣಿ ಆಯಿತು ಬಿಡು. ಇನ್ನು ಆ ಮಾತು ಯಾಕೆ? ಮಗ ಬಂದು ಹೇಳಿದ, ನೀವೆಲ್ಲ ಗುಡಿಗೆ ಹೋಗತೀರಿ ಅಂತ. ನಾ ಬರಲ್ಲ ಅಂದೆ. ನೀವೆಲ್ಲ ಹೋಗಿ ಅಮ್ಮಯ್ಯ. ನಾ ಇಲ್ಲೇ ಇರುತೀನಿ.

ತಂಗಿ ಅಣ್ಣಯ್ಯ, ನೀಯೇನು ನಮ್ಮ ಗುಡೀನ ಬಿಟ್ಟೇಬಿಟ್ಟೆ. ಹೀಗೆ ಮಾಡಿದರೆ ಹೆಂಗೆ?

ಪಾಣಿ ಯಾವ ಗುಡೀನೂ ನಮ್ಮದು ಅನಬಾರದವ್ವ. ಎಲ್ಲಾ ಗುಡೀನೂ ದೇವರದು ಅನ್ನಬೇಕು. ಆ ಗುಡೀ ಬಿಟ್ಟರೆ ಏನಾಯಿತು, ಈ ಗುಡೀನ ಹಿಡಿದೆನಲ್ಲೊ.

ತಂಗಿ ಅಣ್ಣಾವರನ ಬಿಟ್ಟದಾಯಿತಲ್ಲ.

ಪಾಣಿ ಅಣ್ಣಾವರನ ಬಿಟ್ಟರೇನು. ಅಪ್ಪನ ಪಾದ ಕಟ್ಟಕೊಂಡೆನಲ್ಲೋ? ಇವನೇನು ಅವನೇನು? ಎಲ್ಲಾ ಒಬ್ಬನೇ.

ತಂಗಿ ಅದು ಹೆಂಗಾದಾತು?

ಪಾಣಿ ಅಮ್ಮಯ್ಯ, ಮನುಸನ ಮನಸಿಗೆ ದೇವರು ಬೆರಳಲ್ಲಿ ಹಿಡಿದ ಮೇಣ. ಹೆಂಗೆ ತಿದ್ದಿದರೆ ಹಂಗಾಗುತದೆ.

ತಂಗಿ ಎರಡು ದೇವರು ಒಂದೇ ಆದರೆ ಗುಡಿ ಯಾಕೆ ಬೇರೆ?

ಪಾಣಿ ನಮ್ಮ ಮನಸಿನ ದೇವರು ಕಾಣೋ ಗುಡೀಗೆ ಹೋಗಲಿ ಅಂತ. ನನ್ನ ಮನಸಿನಾಗೆ ದೇವರು ಅಣ್ಣಾನಾಗಲ್ಲ. ಮಾರಿ ಆಗಲ್ಲ. ರಂಗಪ್ಪ ಆದ. ನಾನಲ್ಲಿ ಬಂದು ಪ್ರಯೋಜನ ಇಲ್ಲ.

ತಂಗಿ ಯಾಕಿಲ್ಲ ಪರಯೋಜನ? ನೀ ಬಂದರೆ ನಮ್ಮ ಜನ ನಿನ್ನ, ದೇವರಿಗೆ ಬದಲು ದೇವರು ಅಂತ ಕಂಡಾರು. ನಿನ್ನ ಬುದ್ಧಿಯೋ ನಿನ್ನ ಗ್ಯಾನಾನೋ ನಿನ್ನ ಭಕ್ತೀನೋ, ಸೀಮೆಗೆಲ್ಲ ಪರಿಸಿದ್ಧಿಯಾಗದೆ. ಎಂತಾ ಮರ್ಯಾದೆ ಮಾಡ್ಯಾರು ನಿಂಗೆ.

ಪಾಣಿ ಮರ್ಯಾದೆ ಮಾಡಲಿ ಅಂತ ಗುಡೀಗೆ ಹೋಗೋದುಂಟೆ ತಂಗಿ? ದೇವರ ಮುಂದೆ ಮರ್ಯಾದೆ ಎಂತಾದು ನನ್ನವ್ವ? ನಮ್ಮಪ್ಪನ ಸನ್ನಿದೀಲಿ ನಿಂತಾಗ ಕೊನೇಲಿ ನಿಲ್ಲೋದೇ ಚಂದ.

ತಂಗಿ ಕೊನೇಲಿ ನಿಂತೀಯೆ ನೀನು. ನಿನ್ನ ಬಿಡೋರು ಯಾರು? ನೋಡು ಹರಿದಾರಿ ದೂರದಾಗೆ ನಿಲ್ಲಿಶಾರೆ ಹೊರಗೆ.

ಪಾಣಿ ಇವರು ನನ್ನ ಏನು ಹೊರಗೆ ನಿಲ್ಲಿಶಾರು ಅವ್ವ? ದೇವರು ನಿಲ್ಲಿಶಾನೆ ಆಗಲಿ, ನರಮನಸ ನರಮನಸನ್ನ ಹೊರಗೇನು ನಿಲ್ಲಿಸೋದು, ಒಳಗೇನು ಕರೆಯೋದು? ನಾವೂ ಹೊರಗೇ, ಅವರೂ ಹೊರಗೇ.

ತಂಗಿ ಏನೋ ಅಣ್ಣ ನಿನ್ನ ಮಾತು! ಅವರು ಒಳಗೆ ಹೋಗಲ್ಲೇ?

ಪಾಣಿ ಇಲ್ಲ ಅಮ್ಮಯ್ಯ. ದೇವರು ಯಾರೂ ಬರದ ಹಂಗೆ ಒಳಕ್ಕೆ ಇದಾನೆ. ನನ್ನೊಳಗೆ ನಿನ್ನೊಳಗೆ ಅವರೊಳಗೆ. ನಾವೆಲ್ಲ ಹೊರಗೇ ಇದೇವಿ. ಅವ ಬಿಟ್ಟರೆ ನಾವು ಒಳಗೆ ಹೋಗಬಹುದು. ಇಲ್ಲದೀರ ಇದ್ದರೆ ಹೊರಗೇ ಇರಬೇಕು. ಇದು ಕಾಣವ್ವ ಗುಡಿ. ಗುಡಿ ಒಳಗಿದ್ದುಕೊಂಡು ದೇವರನ್ನ ಕಾಣದಾ ಇದೀವವ್ವ. ಇದು ಕಷ್ಟ. ಆ ಗುಡಿಯಾಗಿರೋರಾದರೂ ದೇವರಿಂದ ಹೊರಗೇ ತಾನೇ, ಅವ್ವ. ಗಜ ದೂರ ಆದರೇನು ಹರಿದಾರಿ ಆದರೇನು? ಒಳಗೆ ಹೋದೋರು ಯಾರು? ಗುರುಗಳು ಹೇಳಿದಾರವ್ವ:

> ನಾನಾವುದನು ಒಳಗು ಒಳಗೆಂಬೆ ಅದರ
> ಒಳಗಿನೊಳಗಡೆ ಕುಳಿತು ಮರೆದಿಹನು ಚದುರ
> ಮರೆಯಿಂದ ಕರೆಯುವನು ನಾನರಿಯೆ ಬಧಿರ
> ಅರಿಯೆನೇ ಮರುಳು ನಾ ಬೊಮ್ಮದೀಹದಿರ

(ಒಬ್ಬ ಮುದಿ ಹೆಂಗಸು ಬರುವಳು)

ಮುದಿಯಾಕೆ ಅಯ್ಯೋ ನನ್ನಪ್ಪಾ ಇವರೇನು ಇಲ್ಲೇ ಸಂಸಾರ ಹೂಡಿದಾರೇನೋ?

ತಂಗಿ (ಒಂದು ಕಡೆಗೆ ಸರಿದು) ಹೋಗವ್ವಾ.

ಮುದಿಯಾಕೆ ಅಯ್ಯೋ ನಾರಾಯಣಾ, ನನ್ನ ಮಾತನಾಡಿಸಿದಳು (ಎಂದು ಮುಖವನ್ನು ಗಂಟಿಕ್ಕಿಕೊಂಡು ಹೋಗುವಳು.)

ಪಾಣಿ ಅಮ್ಮಯ್ಯ, ನೀ ಜನರನ್ನ ಮಾತಾಡಿಸಬೇಡ. ಅವರು ದೇವಸ್ಥಾನಕ್ಕೆ ಹೋಗೋರು ಮೈಲಿಗೆಗೆ ಹೆದರುತಾರೆ.

ತಂಗಿ ಮಾತು ಅಂತನ್ನೋದು ಅರಿವ್ಯಲ್ಲ ನೀರಲ್ಲ. ನಾ ಮಾತಾಡಿದರೆ ಅವರು ಮೈಲಿಗೆಯಾಗುತಾರೆಯೇ ಅಣ್ಣ?

ಪಾಣಿ ಆಗುತಾರೋ ಇಲ್ಲೋ, ಆದಿವಿ ಅಂತ ತಿಳುಕೋತಾರೆ. ದೇವ ಸ್ಥಾನದಲ್ಲಿ ಮನಸು ಸುಕವಾಗಿರೋಲ್ಲ.

ತಂಗಿ ಈ ಯಮ್ಮ ಮೊಕ ಗಂಟಿಕ್ಕಿದ್ದು ನೋಡಿದರೆ ಇವಳಿಗೆ ಎಲ್ಲೂ ಸುಕ ಇಲ್ಲಂತ ಕಾಣಿಸತದೆ.

ಪಾಣಿ ಪಾಪ, ಇಂತವರ ಬದುಕು ಕಷ್ಟ. ಈ ಯಮ್ಮ ಇಪ್ಪತ್ತು ವರುಸದಿಂದ ಹಿಂಗೇ ಇದಾರೆ. ಬಾಳು ಬೇವಿನ ಹಂಗೆ ಬಲಿತು ಬಿಟ್ಟದೇ ಅವ್ವ. ಬಲಿತಷ್ಟೂ ಕಹಿ.

ತಂಗಿ ನಮಗೇನೋ ಕಹಿ ತಾನೇ.

ಪಾಣಿ ಅವರಿಗೂ ಸುಕ ಇಲ್ಲ ಅಮ್ಮಯ್ಯ.

ತಂಗಿ ಅಂತೂ ತನ್ನ ದುಕ್ಕಾನ ನಮ್ಮ ಮೇಲೆ ಕಾರಿ ಹೋದಳು. ಹಂಗಾದರೆ ನೀ ಬರೋಲ್ಲಲ್ಲ ನಮ್ಮ ಗುಡೀಗೆ.

ಪಾಣಿ ಇಲ್ಲ ಅಮ್ಮಯ್ಯ. ನೀವು ಹೋಗಿ ಬನ್ನಿ.

(ತಂಗಿಯ ಗಂಡ, ಪಾಣಿಯ ಭಾವ ಬರುತ್ತಾನೆ)

ಭಾವ ವೋ. ಏನಲೆ, ನನ್ನ ಹೆಣ್ಣೆ. ಅಣ್ಣನ್ನ ಕರತರತೀನಿ ಅಂದವಳು ಇಲ್ಲೇ ನಿಂತೆ?

ತಂಗಿ ಕರದು ಸಾಕಾತು. ಅವ ಬರಲ್ಲಂತೆ.

ಭಾವ ಯಾಕ ಪಾಣ್ಯಪ್ಪ, ನಮ್ಮ ಗುಡೀ ಬಿಟ್ಟೇ ಬಿಟ್ಟೆ?

ಪಾಣಿ ಅಣ್ಣ, ನನಗಾ ರಕ್ತ ನೋಡಿದರೆ ತಲೆ ತಿರುಗತದೆ.

ಭಾವ ನನಗೂ ಹಂಗೇ ಅಪ್ಪ. ಆದರೂ ಒಂದೊಂದು ಸಲ ಹೋಗ ಬೇಕಲ್ಲಾ. ಅದಕಾಗಿ ಹೋಗೋದು. ಅಂದರೂ ನಾನು ಕೂಡ ರಂಗಪ್ಪನಿಗೆ ಶರಣಾಗಿದೀನಿ.

ಪಾಣಿ ಬಹಳ ಸಂತೋಷ.

ಭಾವ ನಾನೂ ಎರಡು ಪದ ಮಾಡಿವಿನಿ. ಈ ಹೈಕಳಿಗೆ ಹೇಳಿಕೊಟ್ಟಿವಿನಿ.

ತಂಗಿ ನೀನು ಪದಾ ಬೇರೆ ಮಾಡಿದಿಯೇನ ನಾ ಕಾಣದ್ದ?

ಭಾವ ಕಾಣದೀರ ಇದ್ದರೆ ಏನಾತು? ಈಗ ಕಂಡಿಯೇಳು. ಲೇ ಹೈದಾ, ಬಾರಲ ಇಲ್ಲಿ. ಪದಾ ಹೇಳಿ ಕೋಲು ಹಾಕಲ.

ತಂಗಿ ಕೋಲು ಎಲ್ಲಿ ಇಲ್ಲಿ?

ಭಾವ ಇಕೋ ತಂದಿವಿನಿ. ಅಲ್ಲಿ ಗುಡೀ ಮುಂವೆ ಹಾಕಸಾನ ಅಂತಿದ್ದಿ. ನಿಮ್ಮ ಅಣ್ಣ ನೋಡಲಿ ಅಳಿಯುಮ್ಮೈಯನ ಕುಣಿತ ಅಂತ. ಅಲ್ಲಂತೂ ಬರಲಿಲ್ಲ. ಇಲ್ಲೇ ನೋಡಲೇಳು.

(ಭಾವನೂ ಅಳಿಯನೂ ಕೋಲಾಟ ಆಡುವರು)

ನಾದನಾಮಕ್ರಿಯ

ರಂಗಪ್ಪ ಬಂದು ನನ್ನ ಕರ್ಮ
ಹರಿಸಿ ಉದ್ಧರಿಸೋ ನಿನ ಧರ್ಮ
ನಿನ್ನ ಬಿಟ್ಟರೆ ಕಾಯುವವರಿಲ್ಲ
ನೀ ಬಲ್ಲೆಯಲ್ಲ ಈ ಮರ್ಮ

ಬಕ್ತರು ಕರೆದರೆ ಗರುಡೇನ
ಏರಿ ಬಂದು ಹಗೆ ಬುರುಡೇನ
ಒಡೆಯುತೀ ಅಂತ ಹೇಳ್ತ್ಯಾರೋ
ಇವತ್ತು ನಿನ ಕಿವಿ ಕುರುಡೇನ

ಇಲ್ದಿದ್ರೆ ನನ್ನ ಮೇಲೆ ಹುರುಡೇನ
ಕಾಮ್ಧೇನು ನನ್ನ ಪಾಲ್ಗೆ ಬರಡೇನ
ಕೇಳಿದ್ದ ಕೊಡುವಂತ ಕಲ್ಪವೃಕ್ಷ
ನನ್ನ ಪಾಲಿಗೆ ಬರಿ ಕೊರಡೇನ

ಕೂಗುವುದನು ಕೇಳೋ ರಂಗಪ್ಪಾ
ಬರದೀರ ನಿಂತರೆ ಹೆಂಗಪ್ಪಾ
ಅತ್ತರೂ ಪೆತ್ತಾಕಿ ಬರದಿದ್ರೆ
ಮಗುವಿನ ಗತಿ ಬಹು ಭಂಗಪ್ಪಾ

ಮೋಡಾ ನೀರನ್ನ ನುಂಗಲು
ಹಾಲು ಕೂಡುವ ಪೈರಿಗಿಂಗಲು
ಆಯ್ಯೋ ಅಂತ ನೀನನದಿದ್ರೆ
ನಮ್ಮೋರು ಬದುಕೋದು ಹೆಂಗೆಲೊ

(ಇಬ್ಬರು ಸುಮಂಗಲಿಯರು ಒಬ್ಬ ಆಳು ಬರುವರು)

ಆಳು ಎಲಾ. ಏನಿರೋ ಇದು ನಿಮ್ಮ ರಾದ್ಧಾಂತ ದಾರೀಲಿ. ಇದೇನು ಅಣ್ಣಾವರ ಗುಡಿ ಅಂತ ತಿಳಿದಿರಾ. ನಡೀರಿ ಆಚೆಗೆ.

ತಂಗಿ ಸಾಕು ಬಿಡು ನಿನ್ನ ಕೋಲಾಟ. ಆಯಿತಲ್ಲ ಮುಕಕ್ಕೆ ಮಂಗಳಾರತಿ. ನಡಿ ಹೋಗೋವ ಗುಡಿಗೆ.

ಭಾವ ಮಂಗಳಾರತಿ ಏನಾದದ್ದು? ಪದಾ ಕೇಳಿ ಚಂದಾಗಿಲ್ಲ ಅಂದರೇನು. ಏನು ಪಾಣ್ಯಪ್ಪ. ಪದಾ ಚಂದಾಗಯಿತಾ?

ಪಾಣಿ ಭಾವಯ್ಯ, ಪದದ ಚಂದ ಮನಸಿನ ಚಂದ. ನಿನ್ನ ಮನಸು ಮಗುವಿನ ಮನಸು. ನಿನ ಪದ ಮಕ್ಕಳ ಮಾತ ಹಂಗೆ ಅದೆ. ಚಂದಾಗದೆ.

ಭಾವ ಕೇಳಲೇ ಹೆಣ್ಣೆ. ನಿಮ್ಮಣ್ಣ ಹೇಳೋ ಮಾತ. ಇನ್ಯಾರು ಇದಕಿಂತ ಕಂಡೋರು. ಪಾಣ್ಯಪ್ಪ ಚಂದಾಗದೆ ಅಂದ ಅಂತೀನಿ. ನೋಡೋವ ಯಾರು ಕಿಮುಕ್ಕಮುಕ್ಕಂತಾರೇನೊ. ಒಳತಾತು, ಲೇ ಹೈದ, ಮಾವಯ್ಯ ಹೇಳಿಕೊಟ್ಟದ್ದು ಕ್ರಿಷ್ಟರಾದೆ ಆಟ ನೀನೂ ನಿನ ತಮ್ಮನೂ ಆಡಿ ತೋರಿಸಿದಿರೇನೋ ಮಾವನಿಗೆ.

ಅಳಿಯ ಬಟ್ಟೆ ನಿನ್ನೇ ಅಲ್ಲ ಕೊಟ್ಟದ್ದು. ಈವತ್ತು ಗುಡೀಲಿ ಆಡೋದಂದ್ರೆ.

ಭಾವ ಪಾಣ್ಯಪ್ಪಾ, ಏನು ಆಡತಾರಂತೀಯಾ. ನೀನು ನೋಡಬೇಕಲ್ಲ ಅದನ್ನ.

ಪಾಣಿ ಇನ್ಯಾವಾಗಲಾದರೂ ನೋಡಿದರೆ ಸರಿ.

ಭಾವ ಲಾ ಹೈಡ, ಮಧ್ಯಾಹ್ನಕ್ಕೆ ತಮ್ಮನ ಕರಕೊಂಡು ಬಂದು ಇಲ್ಲಿ ಆಡಿ ತೋರಿಸು, ಏನಲೇ.

ಅಳಿಯ ಮಧ್ಯಾಹ್ನಕ್ಕೆ ಬರೋಣೆ ಮಾವಯ್ಯ?

ಪಾಣಿ ಬನ್ನಿ ಅಪ್ಪಾ ಆಡಿ ತೋರಿಸಿ.

ಭಾವ ನಡೀರ ನಡೀರ ಹೊತ್ತಾಯಿತು. ನಾವು ಬರೋಣೆ ಪಾಣ್ಯಪ್ಪ? ಸಂಜೆಗೆ ಬರ್ತೀವಿ.

(ಎಂದು ಹೆಂಡತಿ ಮಗನನ್ನು ಕರೆದುಕೊಂಡು ಹೊರಡುವನು)

**ಪಾಣಿ**

**ಕಮಾಚ್**

ಏತಕೆನ್ನ ದೂರ ನಿಲಿಸಿದೇ
ಆತುರದಲಿ ಬಳಿಗೆ ಬರಲು ಹಾತೊರೆಯುತಲಿಹುದನರಿತೂ

ಬಲ್ಲ ಮಂದಿ ಒಳ್ಳೆಯುಸಿರು ಬಳಿಗೆ ಸಾರಲಿ ಇಂ
ತಲ್ಲದೆಲ್ಲ ದೂರದಲೇ ನಿಲಲಿ ಎಂಬರೇ
ಬಲ್ಲ ಜೀವ ಎಂತಾದರು ಬದುಕಿಕೊಂಬುದೋ ಪ್ರ
ಫುಲ್ಲಕಮಲನಯನ ಹಸುಳೆ ಇಂತು ಬದುಕದೋ

ತಂದೆ ನೀನು ತಾಯಿ ನೀನು ಮಂದಮತಿ ಮಾನವಗೆ
ಕುಂದನೆಲ್ಲ ಮರೆತು ಬಾ ಕಂದ ಎಂಬ ಬಂಧು ನೀನು
ಅಂದು ವೈಕುಂಠದಿಂದ ಭುವಿಗೆ ನಾನು ಬರುವ ವೇಳೆ
ಹಿಂದೆ ನಿಲ್ಲು ಎಂದರೂ ಹಠಮಾಡಿ ಬಂದೆನೇನೋ

ಬದ್ಧ ಜೀವ ನಾನುಹುದೊ ಅಬದ್ಧ ನನ್ನ ಬಾಳ್ವೆಯೆಲ್ಲ
ಶುದ್ಧವಾಗಲಿಲ್ಲ ಇನ್ನೂ ಆಸೆ ಚೇತನ
ಉದ್ಧರಿಸುವ ಸ್ವಾಮಿ ನೀನೆ ಕ್ರುದ್ಧನಾಗಿ ದೂರ ಸರಿದು
ಹೃದ್ದೇಶವ ಶೂನ್ಯ ಮಾಡೆ ಪಾಣಿ ಉಳಿವೆನೇ?

(ಎಂದು ಕೈಮುಗಿದುಕೊಂಡು ನೋಡುತ್ತ ನಿಲ್ಲುವನು)

(ಲೋಕಸಾರಂಗ ಅವನ ಮುಂದೆ ಸೇವಕ ಹಿಂದೆ ಇಬ್ಬರು ಬ್ರಾಹ್ಮಣರು ಬರುವರು)

**ಸೇವಕರು** ಯಾರಯ್ಯ ಅಲ್ಲಿ, ದಾರೀ ಬಿಡು. ಪಾರಪತೇಗಾರರು ದಯ ಮಾಡಿಸುತ್ತಿದಾರೆ.

**ಲೋಕಸಾರಂಗ** ಅಯ್ಯಾ ಇರಲಿ ಬಿಡು. (ಪಾಣಿ ದಾರಿ ಬಿಟ್ಟು ದೂರ ನಿಂತು ನಮಸ್ಕರಿಸುವನು) ಭಾಗವತರು ಧನ್ಯರು.

**ಪಾಣಿ** ಭಾಗವತರ ಅನುಗ್ರಹದಿಂದ ನಾ ಧನ್ಯ.

(ಲೋಕಸಾರಂಗನು ಮುಂದರಿಯುವನು. ಇತರರು ಅವನ ಜೊತೆಗೆ ಹೋಗುವರು)

## ಸ್ಥಾನ ೨

ರಂಗನಾಥ ದೇವಾಲಯದ ಒಳಗಡೆ, ಲೋಕಸಾರಂಗನೂ ಜೊತೆಯ ಇಬ್ಬರು ಬ್ರಾಹ್ಮಣರೂ ಬರುವರು. ಅವರಲ್ಲಿ ಒಬ್ಬನ ಹೆಸರು ಆಳ್ವಾರ್, ಇನ್ನೊಬ್ಬನ ಹೆಸರು ಮಧುರ. ಆಳ್ವಾರ್ ಕಾಂಚೀಪುರದಿಂದ ಬಂದಿರುವವನು.

ಆಳ್ವಾರ್ ನಿಮ್ಮ ದೇವಾಲಯದ ಏರ್ಪಾಡುಗಳನ್ನು ನೋಡಿ ನನಗೆ ಬಹಳ ಆನಂದವಾಯಿತು. ಕಾಂಚೀಪುರದ ದೇವಾಲಯಕ್ಕೆ ಇಂಥ ಏರ್ಪಾಡು ಬೇಕು. ಆದರೆ ತಮ್ಮಂಥವರು ಅಲ್ಲಿ ಇಲ್ಲ.

ಲೋಕ ವಿಶ್ವಾಸದಿಂದ ಹೀಗೆ ಹೇಳುತ್ತಿದೀರಿ. ಆದರೆ ಕೆಲಸ ಇಲ್ಲಿ ಚೆನ್ನಾಗಿರುವುದಾದರೆ ಅದನ್ನು ರಂಗನಾಥನೇ ನಡೆಸಿಕೊಳ್ಳುತ್ತಿದಾನೆ.

ಆಳ್ವಾರ್ ಒಪ್ಪಿದೆ. ಅಲ್ಲಿ ವರದರಾಜನೂ ಹಾಗೆ ನಡೆಸಿಕೊಳ್ಳಲಿ ಎಂದು ನನ್ನ ಅಪೇಕ್ಷೆ.

(ಅರ್ಚಕನು ಬರುವನು)

ಅರ್ಚಕ ಪ್ರಾತಃಕಾಲದ ಪೂಜೆ ಮುಗಿಯಿತು. ಮಂಗಳಾರತಿಗೆ ಸಿದ್ಧವಾಗಿದೆ.

ಲೋಕ ಮಧುರಸಾಮಿ, ಭಾಗವತರಿಗೆ ಸನ್ನಿಧಿಗಳನ್ನು ತೋರಿಸಿಕೊಂಡು ಬಾ. ನಾನು ಮಂಗಳಾರತಿ ನಡೆಯಿಸಿ ಬರುತ್ತೇನೆ.

ಮಧುರ ಆಗಲಿ.

(ಲೋಕಸಾರಂಗನೂ ಅರ್ಚಕನೂ ಹೋಗುವರು)

ಆಳ್ವಾರ್ ನಿಮ್ಮ ಸರ್ವಾಧಿಕಾರಿಗಳು ಬಹು ದಕ್ಷರು, ಬಹು ಜ್ಞಾನಿಗಳು.

ಮಧುರ ಹೌದು.

ಆಳ್ವಾರ್ ನಮ್ಮ ಸರ್ವಾಧಿಕಾರಿಗಳು ಜ್ಞಾನಿಗಳು ಆದರೆ ವಿರಕ್ತರು. ದೇವಸ್ಥಾನದ ಸಣ್ಣ ಸಣ್ಣ ವಿಷಯಗಳನ್ನು ನೋಡಿಕೊಳ್ಳುವುದಕ್ಕೆ ಅವರ ಮನಸ್ಸು ಹೋಗುವುದಿಲ್ಲ. ಆದ್ದರಿಂದ ಕೆಲಸ ಚೆನ್ನಾಗಿಲ್ಲ.

ಮಧುರ ಲೋಕಸಾರಂಗರೂ ವಿರಕ್ತರೆ. ಸಂಸಾರಿಗರಲ್ಲ. ಆದರೆ ತಮ್ಮ ವಿಷಯಕ್ಕೆ ವಿರಕ್ತರಾದರೂ ದೇವರ ವಿಷಯಕ್ಕೆ ಅವರು ಸಕ್ತರು.

ತಾವು ಗ್ರಹಿಸಿರುವಂತೆ ಈ ದೇವಾಲಯದ ಕೆಲಸ ಇಷ್ಟು ಚೆನ್ನಾಗಿ ನಡೆಯುತ್ತಿರುವುದು ಅವರ ಮಹಿಮೆಯಿಂದಲೇ.

(ಒಳಗೆ ವೇದಘೋಷ, ಗಂಟೆಯ ಶಬ್ದ, ಮಂಗಳಾರತಿಯಾಗುತ್ತಿರುವುದನ್ನು ಸೂಚಿಸುತ್ತವೆ.)

ಆಳ್ವಾರ್ ಅಲ್ಲದೆ ನಮ್ಮ ಕಡೆ ಬಂದಿರುವ ಮರ್ಯಾದೆಗಳ ಜಗಳ, ಜಾತಿಗಳ ಜಗಳ, ನಿಮ್ಮಲ್ಲಿ ಬಂದಿಲ್ಲವೆಂದು ಕಾಣುತ್ತದೆ.

ಮಧುರ ಮರ್ಯಾದೆಯ ಜಗಳವೇನು?

ಆಳ್ವಾರ್ ನಮ್ಮಲ್ಲಿ ಕೆಲವರು ನಮ್ಮಾಳ್ವಾರ ಸಂಬಂಧ ಎಂತ, ಮಧುರ ಕವಿಯಾಳ್ವಾರ ಸಂಬಂಧ ಎಂತ, ಮರ್ಯಾದೆಗಳಿಗೆ ಜಗಳ ಮಾಡುತ್ತಾ ಇದಾರೆ.

ಮಧುರ ನಮ್ಮಲ್ಲಿ ಲೋಕಸಾರಂಗರಷ್ಟು ಬಲ್ಲವರಿಲ್ಲ. ಅವರಿಗೆ ಮೊದಲ ಮರ್ಯಾದೆ ಕೊಡಬೇಕು ಎಂತ ಎಲ್ಲರ ಇಷ್ಟ. ಅವರು ಎಲ್ಲರಿಗೂ ಮರ್ಯಾದೆ ಮಾಡಿಸಿ ಆಮೇಲೆ ತಾವು ತೆಗೆದುಕೊಳ್ಳುತ್ತಾರೆ. ನಾನು ದೊಡ್ಡವ, ನನಗೆ ಹೆಚ್ಚು ಮರ್ಯಾದೆ ಬರಬೇಕು, ಎನ್ನುವಷ್ಟು ಇಲ್ಲಿಯ ವೈಷ್ಣವರು ಕೆಟ್ಟಿಲ್ಲ. ಅದು ವೈಷ್ಣವನಿಗೆ ಅನುಚಿತ ವಾದ ಎಂದು ಎಲ್ಲರೂ ಬಲ್ಲರು.

ಆಳ್ವಾರ್ ಜಾತಿಗಳ ವಿಚಾರ?

ಮಧುರ ಅದೂ ಅಷ್ಟೇ. ಜಾತಿ ಜಾತಿಗೆ ಮುಖಂಡರನ್ನು ಆರಿಸಿ ಅವರವರ ಜನರ ವಿಷಯ ಅವರನ್ನು ಕೇಳುತ್ತಿದೇವೆ. ಲೋಕಸಾರಂಗರು ತನಗೆ ಜಾತಿಯ ಬಂಧನವಿಲ್ಲವೆಂದಮೇಲೆ ಉಳಿದ ಜಾತಿಯವರು ಏಕೆ ಹೆಮ್ಮೆ ಪಡುವರು? ಅಲ್ಲದೆ ಅವರಲ್ಲಿಯೂ ಬಹಳ ಜ್ಞಾನಿಗಳು ಇದಾರೆ. ಇಂದು ದಾರಿಯಲ್ಲಿ ನಿಂತಿದ್ದನಲ್ಲ ಒಬ್ಬಾತ, ಆತನು ಅಂತ್ಯಜರಲ್ಲಿ ಹುಟ್ಟಿದ ಭಾಗವತನು. ಅವನ ಯೋಗ್ಯತೆ ಲೋಕಸಾರಂಗರಿಗೆ ಹೊರತು ಪ್ರಾಯಶಃ ಯಾರಿಗೂ ಇಲ್ಲ. ಆದರೆ ಅವನಷ್ಟು ವಿನಯದ ಜನ ಬೇರೆ ಇಲ್ಲ. ಆತನು ನಮ್ಮ ನಿಮ್ಮ ಕಾಲಧೂಳಿಯನ್ನೂ ತಲೆಗೆ ಹಾಕಿಕೊಳ್ಳುತ್ತಾನೆ.

(ಆಳ್ವಾರ್, ಅಲ್ಲಿ ಮೂರ್ತಿಗಳನ್ನು ನೋಡಿ)

ಆಳ್ವಾರ್ ಈ ಮೂರ್ತಿಗಳು......

ಮಧುರ ಸಂಪ್ರದಾಯದ ಮೂಲಪುರುಷರ ಮೂರ್ತಿಗಳು. ಪೂರ್ವದಿಂದ ಈ ದೇವಾಲಯದಲ್ಲಿ ಇರತಕ್ಕವು.

ಆಳ್ವಾರ್ ಗುರುಪರಂಪರೆಗೆ ನಮೋನಮಃ. ಆದಿಯಲ್ಲಿ ಮಂಡಿಸಿರುವ ಮೂರ್ತಿ ನಮ್ಮಾಳ್ವಾರರದೇನೊ?

ಮಧುರ ಅಲ್ಲ. ಅವರು ನಾಲ್ಕನೆಯವರಾಗಿ ಬಿಜಮಾಡಿದಾರೆ. ಆದಿಯಲ್ಲಿ ಪೂದತ್ತಾಳ್ವಾರು, ಪೊಯ್ಗೈಯಾಳ್ವಾರು, ಪೇಯಾಳ್ವಾರು.

ಆಳ್ವಾರ್ ನಮ್ಮಾಳ್ವಾರು ಆದಮೇಲೆ?

ಮಧುರ ಮಧುರಕವಿ.

ಆಳ್ವಾರ್ ಇವರು ತಿರುಮಂಗೈ.

ಮಧುರ ಹೌದು.

ಆಳ್ವಾರ್ ಇಲ್ಲಿ ಏನು ಒಂದು ಪೀಠ ಬರಿದಾಗಿದೆ? ಇದರಮೇಲೆ ಇದ್ದ ಮೂರ್ತಿ ಏನೋ ಆಗಿರಬೇಕೆಂದು ಕಾಣುತ್ತದೆ.

ಮಧುರ ಇಲ್ಲಿ ಯಾವಾಗಲೂ ಮೂರ್ತಿಯಿರಲಿಲ್ಲ. ಇನ್ನೂ ಎಷ್ಟು ಜನ ಆಳ್ವಾರ್ರು ಬರುವರೋ! ಒಂದು ಪೀಠ ಯಾವಾಗಲೂ ಹೆಚ್ಚಾಗಿರಲಿ, ಅಲ್ಲಿಗೆ ಒಬ್ಬ ಆಳ್ವಾರನ್ನು ಬಿಜಮಾಡಿದಮೇಲೆ ಇನ್ನೊಂದು ಪೀಠವನ್ನು ಸಿದ್ಧವಾಗಿ-ಇಡಿ, ಎಂದು ಇಲ್ಲಿಯ ಪೂರ್ವಿಕರ ಅಪ್ಪಣೆ. ಅದರಂತೆ ಈ ಪೀಠವನ್ನು ಹೀಗೆಯೇ ಇರಿಸಿದೆ. ಆಳ್ವಾರೊಬ್ಬರ ಬರವಿಗಾಗಿ ಅದು ಕಾದಿದೆ.

ಆಳ್ವಾರ್ ಬಹು ಒಳ್ಳೆಯ ಭಾವನೆ. ಭಕ್ತರ ಪಂಕ್ತಿಗೆ ಕೊನೆಯುಂಟೆ?

(ಲೋಕಸಾರಂಗನು ಬರುವನು)

ಲೋಕ ಇಲ್ಲೇ ಇದ್ದು ಬಿಟ್ಟಿರಿ ಎಂತ ಕಾಣುತ್ತದೆ.

ಆಳ್ವಾರ್ ಹೌದು ತಮ್ಮ ವಿಚಾರವನ್ನೇ ಮಾತನಾಡುತ್ತ ನಿಂತೆವು. ಮಧುರಸಾಮಿಗಳಿಂದ ತಮ್ಮನ್ನು ಕುರಿತು ಕೆಲವು ಮಾತು ಕೇಳಿ ಆನಂದವಾಯಿತು.

ಲೋಕ ಮಧುರಸಾಮಿ ನಮ್ಮ-ಗುರುಗಳ ಪುತ್ರರು. ಗುರುಗಳು ಇಲ್ಲಿ ಆಳುತ್ತಿದ್ದಾಗ ನನ್ನನ್ನು ಯಾವಾಗಲೂ ಮೆಚ್ಚಿ ಮಾತನಾಡು

ತ್ತಿದ್ದರು. ಅವರು ಪರಂಧಾಮುವನ್ನು ಐದಿದಮೇಲೆ ಅವರು ಮರೆಯಾದರೂ ಅವರ ವಿಶ್ವಾಸ ಮರೆಯಾಗಲಿಲ್ಲವೆಂದು ಅವರ ಕುಮಾರರು ತೋರಿಸುತ್ತಿದಾರೆ.

ಮಧುರ ನಾವು ಪರಸ್ಪರ ಉಪಚಾರದ ಮಾತನಾಡಿದಂತಾಗುತ್ತದೆಂದು ನಾನು ಸುಮ್ಮನಿರಬೇಕಾಗಿದೆ. ಆದರೆ ಅವರು ತೀರಿ ಹೋದರೂ ಅವರ ವಿಶ್ವಾಸ ಕಾಯುತ್ತಿದೆಯೆಂದು ನನ್ನಿಂದ ನಿಮಗೆ ತೋರುವಂತೆ ನಿಮ್ಮಿಂದ ನನಗೆ ತೋರುತ್ತಿದೆ.

ಆಳ್ವಾರ್ ನಿಮ್ಮ ಯಜಮಾನರು ಇಲ್ಲಿ ಈ ಮೊದಲು ಸರ್ವಾಧಿಕಾರದಲ್ಲಿದ್ದರೋ ?

ಮಧುರ ಹೌದು. ಈ ದೇವಸ್ಥಾನದಲ್ಲಿ ಯಾವಾಗಲೂ ಒಬ್ಬರ ಮಾತು ದೇವರ ಮಾತಿನಂತೆ ನಡೆಯತಕ್ಕದೆಂದು ಸಂಪ್ರದಾಯ. ಆ ಒಬ್ಬರು ಸರ್ವಾಧಿಕಾರದಲ್ಲಿರಬೇಕು. ನಮ್ಮ ಯಜಮಾನರಿಗೆ ಅವರ ಗುರುಗಳು ಈ ಕೆಲಸವನ್ನು ವಹಿಸಿ ಪರಂಧಾಮುವನ್ನು ಐದಿದರು. ಅವರು ದೇವರೊಂದಿಗೆ ಮಾತನಾಡುತ್ತಿದ್ದರೆಂದೇ ನಮ್ಮ ಯಜಮಾನರ ನಂಬಿಕೆ.

ಲೋಕ ನಮ್ಮ ಗುರುಗಳೂ ಕೂಡ ದೇವರೊಂದಿಗೆ ಮಾತನಾಡುತ್ತಿದ್ದರು.

ಮಧುರ ಹೌದು. ಆದರೆ ದೇವರು ಮಾತನಾಡಿದ್ದು ಆ ಗುರುಗಳಿಗೆ ಕೇಳಿಸುತ್ತಿದ್ದಂತೆ ನಮ್ಮ ಯಜಮಾನರಿಗೆ ಕೇಳಿಸುತ್ತಿರಲಿಲ್ಲವಂತೆ. ಆ ಶಕ್ತಿ ತನ್ನಲ್ಲಿ ಬೆಳೆಯಲಿಲ್ಲವೆಂದು ಅವರು ಸದಾ ವ್ಯಥೆಪಡುತ್ತಿದ್ದರು. ಸಂಸಾರಿಯಾದದರಿಂದ ಅದು ಬೆಳೆಯಲಿಲ್ಲವೆಂದು ಅವರ ಭಾವನೆ. ಆ ಗುರುಗಳಲ್ಲಿ ಕಾಣುತ್ತಿದ್ದ ಶಕ್ತಿ ನಮ್ಮ ಲೋಕಸಾರಂಗರಲ್ಲಿ ಕಾಣುತ್ತಿದೆಯೆಂದು ಅವರು ಹೇಳಿದರು. ನೀನು ಸಂಸಾರಿಯಾಗದೆ ನಿಂತರೆ ಇದು ಅಭಿವೃದ್ಧಿಯಾಗಬಹುದೇನೋ ಎಂದು ಅವರು ಅಪ್ಪಣೆ ಕೊಡಿಸುತ್ತಿದ್ದರು.

ಹರಿದಾಸ (ಒಂದು ಕಡೆಯಿಂದ ಬರುತ್ತ)

ಎಲ್ಲಿಯೋ ದೂರದಲ್ಲಿ ಇಲ್ಲವಯ್ಯ ನರಕನಾಕ
ಎಲ್ಲಿಯೋ ಎತ್ತಲೋ ಇಲ್ಲವೋ ವಿಷ್ಣುಲೋಕ

ಎಲ್ಲಿಯೋ ಎಂದೊ ಇದ್ದು ಮರೆಯಲಿಲ್ಲ ಭಕ್ತಿಭುಕ್ತಿ
ಇಲ್ಲಿ ಈಗ ಇಹವು ನಿನ್ನ ನಾಕನರಕ ಸಕ್ತಿಮುಕ್ತಿ

(ಎಂದು ಹಾಡಿಕೊಂಡು ಇನ್ನೊಂದು ಕಡೆಗೆ ಹೋಗುವನು)

ಅರ್ಚಕ (ಬಂದು ಲೋಕಸಾರಂಗನಿಗೆ) ಸ್ವಂತ ಸೇವೆಯ ಕೆಲವರು ತಮ್ಮನ್ನು ಅಪೇಕ್ಷಿಸುತ್ತಾರೆ.

ಲೋಕ ತಾವೂ ದಯಮಾಡುತ್ತೀರಾ? ಹೋಗೋಣ.

ಆಳ್ವಾರ್ ಅಗತ್ಯವಾಗಿ (ಎಂದು ಹೊರಡುವನು. ಅರ್ಚಕನೂ ಲೋಕ ಸಾರಂಗನೂ ಮುಂದೆ ಹೋಗುವರು. ಆಳ್ವಾರ್ ಮಧುರಸಾಮಿ ಹಿಂದೆ ನಿಂತು ಇನ್ನೂ ಕೆಲವು ಮಾತನಾಡುವರು.) ಸರ್ವಾಧಿಕಾರಿಗಳು ಬ್ರಹ್ಮಚಾರಿಗಳೊ?

ಮಧುರ ಹೌದು.

ಆಳ್ವಾರ್ ಅವರು ದೇವರೊಂದಿಗೆ ಮಾತನಾಡುತ್ತಾರೆಯೆ?

ಮಧುರ ಅದು ತನಗೆ ಹೆಚ್ಚೆಂದು ಅವರ ಎಣಿಕೆ. ದೇವರು ತನ್ನ ಇಚ್ಛೆಯನ್ನು ತಿಳಿಸುವುದಕ್ಕೆ ಯಾವ ದಾರಿಯನ್ನು ತೆಗೆದುಕೊಳ್ಳುತ್ತಾನೋ ಅದನ್ನು ತೆಗೆದುಕೊಳ್ಳಲಿ, ಮಾತನಾಡಿಸುವುದು ಎನ್ನುವುದು ಅತಿ ಸಲಿಗೆ ಎಂದು ಅವರ ಅಭಿಪ್ರಾಯ. ಅದರಿಂದ ಅವರು ಆ ಗೋಜಿಗೆ ಹೋಗಿಲ್ಲ.

ಆಳ್ವಾರ್ ದೇವರ ಇಚ್ಛೆ ಇವರಿಗೆ ಹೇಗೆ ತಿಳಿಯುತ್ತದೆ?

ಮಧುರ ಸಾಮಾನ್ಯವಾಗಿ ಬರುವ ವಿಷಯವೆಲ್ಲ ಇವರ ಬುದ್ಧಿಗೇ ಸಾಧ್ಯವಾಗಿರುತ್ತದೆ. ಹಾಗೆ ಸಾಧ್ಯವಲ್ಲದ ವಿಷಯ ಬಂದಾಗ ದೇವರು ಇಚ್ಛೆಯನ್ನು ಇವರು ಯೋಗನಿದ್ರೆಯಲ್ಲಿರುವಾಗ ಪ್ರತ್ಯಕ್ಷವಾಗಿ ತಿಳಿಸುತ್ತಾರೆ.

ಆಳ್ವಾರ್ ಹೀಗೆ ಎಷ್ಟು ಸಲ ಆಗಿದೆ?

ಮಧುರ ಮೂರು ನಾಲ್ಕು ಸಲ ಆಗಿದೆ. ಹಾಗೆ ಕಂಡಾಗ ಇವರಿಗೆ ನಾವು ನೀವು ಮಾತನಾಡಿದೆವೆನ್ನುವುದೂ ಅದರ ಅರ್ಥವೂ ಎಷ್ಟು ಸ್ಪಷ್ಟವಾಗಿ ಅನುಭವಕ್ಕೆ ಬರುವುದೋ ದೇವರ ಮಾತು ಎನ್ನುವುದೂ ಅದರ ಅಭಿಪ್ರಾಯವೂ ಅಷ್ಟು ಸ್ಪಷ್ಟವಾಗಿ ಖಚಿತವಾಗಿ

ಅನುಭವಕ್ಕೆ ಬರುತ್ತವೆ. ಇದನ್ನು ತಿಳಿದೇ ನಮ್ಮ ಯಜಮಾನರು ಇವರನ್ನು ಸರ್ವಾಧಿಕಾರಕ್ಕೆ ನಿಲ್ಲಿಸಿ ತಾವು ವಿಶ್ರಾಂತರಾದರು.

ಅರ್ಚಕ (ಬಂದು) ಸ್ವಂತ ಸೇವೆಗಳು ಆರಂಭವಾಗಿವೆ. ತಮ್ಮನ್ನು ಕರೆತರ ಹೇಳಿದರು.

ಆಳ್ವಾರ್ ಈ ಸ್ವಂತ ಸೇವೆ ಎನ್ನುವುದೇನು ?

ಮಧುರ ದೇವಸ್ಥಾನದ ಏರ್ಪಾಡಿನಂತೆ ಸೇವೆ ನಡೆಯುವ ವೇಳೆ ಯಾರಾದರೂ ವೇದವನ್ನೋ ಗೀತವನ್ನೋ ನೃತ್ಯವನ್ನೋ ದೇವರಲ್ಲಿ ನಿವೇದಿಸಬೇಕೆಂದರೆ ಹೊತ್ತಿರುವುದಿಲ್ಲ. ಆದರೆ ಅನೇಕರಿಗೆ ಇಂಥ ಸೇವೆಮಾಡಬೇಕೆಂದು ಆಸೆಯಿರಬಹುದು. ಅಂಥವರು ಪೂಜೆ ಪೂಜೆಗೆ ಮಧ್ಯೆ ಬಿಡುವಿರುವ ಹೊತ್ತಿನಲ್ಲಿ ತಮ್ಮ ಇಷ್ಟದ ಸೇವೆಯನ್ನು ಸಲ್ಲಿಸಬಹುದು ಎಂದು ನಮ್ಮ ಸರ್ವಾಧಿಕಾರಿಗಳು ಏರ್ಪಾಡು ಮಾಡಿದಾರೆ. ದೇವರು ತಂದೆ ತಾಯಿ ಗುರು ಎಂಬ ಯಾವ ಭಾವದಿಂದಲಾದರೂ ಸೇವೆಮಾಡುವುದಕ್ಕೆ ಇದು ಭಕ್ತರಿಗೆ ಅವಕಾಶವನ್ನು ಕೊಡುತ್ತದೆ. ಬಂದು ನೋಡಿದರೆ ಅದರ ರೀತಿ ತಿಳಿಯುತ್ತದೆ.

ಆಳ್ವಾರ್ ಬಹು ಚೆನ್ನಾದ ಏರ್ಪಾಡು. ಇದನ್ನು ನೋಡೋಣವೆಂದು ನನಗೆ ಆಸೆಯಾಗುತ್ತದೆ.

(ಎಲ್ಲರೂ ಹೋಗುವರು)

## ಸ್ಥಾನ ೩

**ದೇವಾಲಯದ ಒಳ ಅಂಗಳ. ಸಾರಂಗ, ಇತರ ಅನೇಕರು, ನಿಂತಿದಾರೆ. ಜನರು ಸಾರಂಗನಿಗೆ ನಮಸ್ಕಾರ ಮಾಡುತ್ತಿದಾರೆ. ಆತನು ಬಗ್ಗಿ ಅವರಿಗೆ ನಮಸ್ಕಾರ ಮಾಡುತ್ತಾ ನಿಂತಿದಾನೆ. ಆಳ್ವಾರ್ ಮಧುರಸ್ವಾಮಿ ಬರುತ್ತಾರೆ.**

**ಲೋಕ** ಇನ್ನು ಸಾಕು. ಸೇವೆಯನ್ನು ಆರಂಭಿಸಿ.

**ಹರಿದಾಸ** ನಾನು ರಂಗನಾಥನಲ್ಲಿ ಈ ಗೀತೆಯನ್ನು ಸಮರ್ಪಿಸುತ್ತೇನೆ. **(ಎಂದು ಹಾಡುತ್ತಾನೆ)**

**ಮೋಹನ**

ನಿಜವನಾರಯಿಸು ಮನುಜಾ;
ನಿಜವನಾರಯಿಸಿ ವಾರಿಜನಾಭನಡಿಗಳಲಿ
ಋಜುಭಾವದಿಂದ ಆತ್ಮವನರ್ಪಿಸು.

ಭಕ್ತಿಯಿಲ್ಲದ ಪೂಜೆ ಮುಕ್ತಿಯನು ತರಬಹುದೆ?
ಕಣ್ಣಿಲ್ಲದಿಹ ಸೂಜಿಯಲಿ ಹೊಲಿಗೆಯಹುದೆ?
ಆ ಪೂಜೆಯಲಿ ಜೀವ ಈ ಸೂಜಿಯಲಿ ದಾರ
ಇದ್ದೆಡೆಯೊಳಿಹವಲ್ಲದಿನ್ನುಂಟೆ ಬೇರೆ?

ಹೆಮ್ಮರಮುರಿಯದ ಬಾಳು ನೆಮ್ಮಿಕೆಯ ಪಡೆಯುವುದೆ?
ಬಾಯಿಡದ ಬುರುಡೆ ಶ್ರೀಚೂರ್ಣಕೆಡೆಯಹುದೆ?
ಆ ಬಾಳು ಈ ಬುರುಡೆ ಎಂದೆಂದಿಗೂ ಟೊಳ್ಳು;
ಎರಡರಾಂತರ್ಯವೂ ಬರಿಯ ಪೊಳ್ಳು.

ಕ್ರಿಯೆಯಾಗದಿಹ ಭಾವ ತಾನಹುದೆ ಹರಿ ಸೇವೆ?
ಲತೆಯೊಳಡಗಿರುವ ನರುಗಂಪು ಹೂವ
ನನೆಯಾಗದೆಯೆ ದೇವನರ್ಚನೆಗೆ ಸಲಬಹುದೆ?
ಭ್ರೂಣವೇ ಪಿತೃಋಣಕೆ ಸಲಿಕೆಯಹುದೆ?

**ಲೋಕ** ಭಕ್ತಿಯಿಲ್ಲದ ಪೂಜೆ ಕಣ್ಣಿಲ್ಲದ ಸೂಜಿ. ಆ ಪೂಜೆಯಲಿ ಜೀವ ಈ ಸೂಜಿಯಲಿ ದಾರ. ಸರಿಯಾಗಿ ಹೇಳಿದಿರಿ. ಆಮೇಲೆ ಯಾರು?

**ಇಬ್ಬರು ಸುಮಂಗಲಿಯರು** ನಾವು ಒಂದುಮಂಡಲ ಒಂದು ಹಾಡು ಹೇಳುವುದು ಎಂತ ಹರಕೆ ಮಾಡಿಕೊಂಡಿದೇವೆ.

**ಲೋಕ** ಹೇಳಿ ತಾಯಿ.

**ಸುಮಂಗಲಿಯರು**

**ಶಂಕರಾಭರಣ**

ಕನವರಿಸದಿರು ರಂಗಧಾಮ ವಾರಿಜನಾಭ,
ಕನವರಿಸದಿರು ಶೇಷಶಾಯಿ ಶ್ರೀಶಾ.

ಯುಗದಾದಿಯಲಿ ಹಾಸಿದಾದಿ ಶೇಷನ ಮೆಯ್ಯ
ಮೆದುವಾದ ಶಯ್ಯೆ ಇದೆ ಮೊದಲಿನಂತೆ;
ಅಗಲಾಗಿ ತೆರೆದು ಸಾವಿರ ಹೆಡೆಯ ಮೇಲೆತ್ತಿ
ಮುದದಿ ಕಾದಿಹನವನು ಬೇಡ ಚಿಂತೆ.

ಸಿರಿದೇವಿ ಕಾಲ ಬಳಿ ಕುಳಿತು ಆ ಮೊದಲಂತೆ
ಮೆಲುಮೆಲನೆ ತನ್ನಯಾ ತಳಿರ ತರದ
ಬೆರಳ ಆ ಕರದಿಂದ ಕಾಲುಗಳ ಹಿಡಿಯುತ್ತ
ಒಲುಮೆಯಲಿ ಓಲೈಸುತಿಹಳು ವರದಾ.

ಬ್ರಹ್ಮರುದ್ರೇಂದ್ರ ಮರುತಾದಿ ದೇವರು ಎಲ್ಲ
ಅಧಿದೈವ ಸುಖದಿ ನಿದ್ರಿಸಲಿ ಎಂದು
ತಮ್ಮ ತಮ್ಮೆಡೆಗಳಲಿ ತಂತಮ್ಮ ಕಾರ್ಯವನು
ವಿಧಿಯರಿತು ನಡೆಸುತಿಹರ್ಬೈಯ ಇಂದೂ.

ನಿದ್ದೆಯಲಿ ಕನವರಿಸಿ ನೀನೊಂದು ನುಡಿ ನುಡಿಯೆ
ಗುಡುಗಿ ಪಡಿನುಡಿವುದದು ಜಗದೆದೆಯಲಿ;
ಹೊದ್ದ ಭೀತಿಯಲಿ ಲೋಕಗಳೆಲ್ಲ ಕಳೆಗುಂದಿ
ನಡುಗುವುವು ಲಯದ ಕೂಪದ ಬದಿಯಲಿ.

ಮಾರಮಣ ನೀನು ಕನವರಿಸಿ ನಿಟ್ಟುಸಿರು ಬಿಡೆ
ಪ್ರಲಯಕಾಲದಲಿ ಮೇಲೆದ್ದ ಝಂಝಾ

ಮಾರುತನ ಮರುರೂಪು ಜಗವ ಮುತ್ತಲ್ ಒಣಗಿ-
ದೆಲೆವೊಲಾಡುವುದು ಅದರಲಿ ಪ್ರಪಂಚಾ.

ಸಚ್ಚಿದಾನಂದ ನೀ ಸುಖ ನಿದ್ದೆಯಲಿ ನಿಲಲು
ನಿನ್ನ ಭಾವನೆಯು ಸೊಡರಲುಗದಿರಲು
ಹೆಚ್ಚಿದಾನಂದದಲಿ ಮೂಲೋಕ ನಲಿಯುವುದು,
ಧನ್ಯತೆಯು ಹಾಡುವುದು ಅದರ ಕೊರಲು.

ಕನವರಿಸದಿರು ನಮ್ಮ ಹೃದಯರಂಗದ ಮಣಿಯೆ
ಕನವರಿಸದಿರು ನಮ್ಮ ಬಾಳ ಧಣಿಯೆ
ಮನದಾಸೆಗಳನೆಲ್ಲ ಕೊಡುವ ರನ್ನದ ಕಣಿಯೆ
ಅಲುಗದಂತಿರು ನಮ್ಮ ಜೀವ ತಣಿಯೆ.

**ಕೋಲಾಟದ ಗುರು** (ನಾಲ್ವರು ಮಕ್ಕಳೊಂದಿಗೆ ಬಂದು) ಇದು ನಾನು ಇವ ರಿಗೆ ಕಲಿಸಿರುವ ಕೋಲಾಟ. ಅಪ್ಪಣೆಯಾದರೆ ಆಡಿಸುತ್ತೇನೆ.

**ಲೋಕ** ಅಗತ್ಯವಾಗಿ ಆಡಿಸಬೇಕು.

**ಮಕ್ಕಳು** (ಕೋಲಾಟ ಆಡುತ್ತಾರೆ)

ಆನಂದ ಭೈರವಿ

ಸಹ್ಯ ಪರ್ವತದ ಶಿಖರದ ಸಾಲು
  ಮುಗಿಲನು ಮುಟ್ಟುವ ತಾಣದಲಿ
ಮೋಡದ ಮೋಹರ ಬ್ರಹ್ಮಗಿರಿಯಲಿ
  ನಿಲುವೆಡೆ ತನ್ನ ಪ್ರಯಾಣದಲಿ,
ಪಡುವಣ ನಾಡಿನ ಆಳ್ದ ಕವೇರನ
  ಕರುಮಾಡದ ಅರಮನೆಯಲ್ಲಿ
ಅಭಿಮಾನದಿ ಕಾವೇರಿ ಉದಿಸುವಳು
  ಜಗಕೆ ಹರುಷ ವರ್ಧನೆಯಲ್ಲಿ.
ಸಪ್ತ ಋಷಿಗಳಾ ಒಡನೆಯೆ ಅವಳನು
  ಪುದುವಾಳೆನ್ನುತ ಹರಸುವರ್

ದ್ವಿಸಪ್ತ ವನದೇವತೆಗಳಂಕದಲಿ
ಇಟ್ಟು ಸಲಹಿ ಪರಿಚರಿಸುವರು.
ಗಿಳಿಕೋಗಿಲೆಗಳ ಮಂಜುಳರಾವದ
ನೆಲೆಮನೆಯಾಗಿಹ ಕಾನನದಿ
ಎಳೆತನವನು ಕಳೆದೆಸೆದು ಕುಮಾರಿ
ಬೆಳೆದು ಕಾಣುವಳು ಮಾನನಿಧಿ.

ನಾದನಾಮಕ್ರಿಯೆ

ಯಾವ ಲೋಕದ ಯಾವ ದೇವಿಯರೊ
ತಾಯಿ ನೀವು ಕಾವೇರೀ ?
ದೇವಿಯಾರು ಇನ್ಯಾವ ಕಾರಣ
ಹಾಯು ತಂದಿರೀ ದಾರೀ ?

ಅರವಿಂದಾಕ್ಷನ ಅರಸಿತಿಯೋ
ಬೊಮ್ಮನ ಪುತ್ಥಳಿ ಸರಸತಿಯೋ
ಮುಕ್ಕಣ್ಣ ಶಿವನ ವರಸತಿಯೋ
ಯಾವ ಲೋಕದ ಯಾವ ದೇವಿಯರೊ
ತಾಯಿ ನಮ್ಮ ಕಾವೇರೀ ?
ಯಾವ ದೇವರ ಕರುಣೆಯೊ ನೀವು
ಹಾಯು ತಂದಿರೀ ದಾರಿ ?

ಅರಿಯಿರಿ ಕಂದಾ ಹರಿ ಕರವಿಡಿದ
ಅರಸಿತಿ ಸಿರಿದೇವಿ
ಸರಸದಿ ಪತಿಸಾಗರದಲಿ ಮರೆದಿರೆ
ಅರಸುತ ಹರಿದೇವು.

ಕವೇರ ರಾಜನ ಈ ಸುತೆ ಹರಿಯ
ಒಲವಿನ ಸತಿ ಮಾದೇವಿ ಇದರಿಯಾ ?
ದೇವಾಧಿದೇವ ವಂದಿತ ಚರಣೆ
ಲೋಕಮಾತೆ ಹರಿ ಹೃದಯಾಭರಣೆ.

ಆನಂದಭೈರವಿ

ಕೊಡಗಿನ ಹಸುರಿನ
ಚೆಲುವಿನ ಬಸುರಿನ
ಒಲವಿನ ಸುತೆ ಸಿರಿದೇವಿ
ಒಡೆಯನು ಅವಿತೆಡೆ
ಎಡಕಿರೆ ಪಡುಗಡೆ
ಬಲಕೆಯೇಕೆ ಹರಿದೀರಿ ?

ಬ್ರಹ್ಮನ ಗಿರಿಯಲಿ
ನಾ ಕಣ್ತೆರೆಯಲು
ಪಡುವಣ ಮುನ್ನೀರು
ಕಳಕಳ ಮಿಂಚಿತು
ಕರೆಯುತ ಮುಂಚಿತು
ಒಡೆಯನಿಹುದ ನಾರಿ.

ಬಲಗಡೆ ನೋಡಲು
ಕೊಡಗಿನ ನಾಡಲು
ಹಸುರಿದ್ದುದು ಹೊರತು
ಹರಿದಾರಿಯ ನೆಲ
ನೂರೂ ನಿರ್ಜಲ
ಏಕೆ ಅದರ ಕೊರತೆ.

ಅರಸನ ಹಿಡಿಯುವ
ಸುಖವನು ಪಡೆಯುವ
ಕೆಲಸವಿಹುದು, ಅಂತೇ
ಮಕ್ಕಳ ಕಷ್ಟವ
ಕಳೆವೆನು ಇಷ್ಟವ
ಕೊಡುವೆನೆಂಬ ಹೊಂತು.

ಅದರಿಂದಿತ್ತ
ಬಂದಿರಿ, ಹೆತ್ತ
ಕರುಳಿನ ಚಟದಿಂದ.
ತಾಯಿಗೆ ಮಕ್ಕಳ
ಸುಖವೇ ಹೆಕ್ಕಳ;
ಪೊರೆವಳು ಹಟದಿಂದ.

ಯಾವುದೊ ಕಾರ್ಯಕೆ
ಹೊರಟಳೆ ಪೂರ್ವಕೆ
ಎಂದು ನಾಥನಂದು
ತ್ರಿಜಗದ್ವಂದ್ಯನು
ತಾನೇ ಬಂದನು
ಜೊತೆಗೆ ನಡೆವೆನೆಂದು.

ನೀನರಸೆಂದ ಪಂಥದ ಸರಸ
ಏನೋ ಆಯಿತು, ಅರಸಿದನರಸ;
ಮಕ್ಕಳಿಗಾಗಿ ದುಡಿವಳು ಮಡದಿ
ಎನ್ನುತ ಜೊತೆಯುಲಿ ನಡೆದನು ಬಿಡದೆ;
ತೋಳ ತೆಕ್ಕೆಯುಲಿ ಸೆರೆಯನು ಬೇಡಿ
ಮೂರೆಡೆ ಪವ್ವಡಿಸಿದನೊಡನಾಡಿ;
ತೊರೆದನು ಹರಿ ವೈಕುಂಠವನಂದು
ರಂಗಧಾಮ ಮೂರೆಡೆಯುಲಿ ನಿಂದು.

### ನಾದನಾಮಕ್ರಿಯೆ

ಕಾವೇರಿದೇವಿ ವೈಕುಂಠದರಸಿತಿ
ಸಿರಿದೇವಿ ಲಕುಮಿ ರಮಾದೇವಿ;
ಗೆಳತಿಯರಿವಳಿಗೆ ಜಾಣೆ ಸರಸತಿ
ತ್ರಿಪುರಸುಂದರಿ ಉಮಾದೇವಿ;

ಲೋಕದಿ ನಮ್ಮಯ ಮಕ್ಕಳು ಕಷ್ಟವ
ಉಣುತಿಹರಿವರನು ಕಾದೇವು,
ಹಸಿವು ಆಸರನು ಆರಿಸಿ ಇಷ್ಟವ
ಸಲಿಸಿ ಹೊರೆಯುವರೆ ಹೋದೇವು
ಎನ್ನುತ ಸನ್ನುತ ವೈಕುಂಠದುನ್ನತ
ಪೀಠವನುಳಿದು ಜಗನ್ಮಾತೆ
ನೆಲದಲಿ ಹರಿದಳು ಕರುಣೆಯ ಮೆರೆದಳು
ಕ್ಷೀರಾಂಭೋನಿಧಿ ಸಂಜಾತೆ.
ಜಯವೆನ್ನಿ ದೇವಿಗೆ ದಿವಿಜಸಂಭಾವ್ಯೆಗೆ
ಜಯವೆನ್ನಿ ಕರುಣಾಪ್ರವಾಹಿನಿಗೆ;
ಜಯವೆಂಬ ಹಾಡನ್ನು ಹಾಡಿರಿ ನಾಡನ್ನು
ಪೊರೆಯುವ ಕಾವೇರಿ ಸ್ವಾಮಿನಿಗೆ.

ಮಧ್ಯಮಾವತಿ

ಜಯ ಜಯ ಲೋಕದಮಾತೆಗೆ ಜಯ ಜಯ
ಜಯ ತ್ರಿಭುವನ ವಿಖ್ಯಾತೆಗೆ ಜಯ ಜಯ

ಜಯ ಜಯ ರಂಗನರಾಣಿಗೆ ಜಯ ಜಯ
ಜಯ ಜಯ ಮಂಜುಳವಾಣಿಗೆ ಜಯ ಜಯ

ಜಯ ಜಯ ಕವೇರಕನ್ನೆಗೆ ಜಯ ಜಯ
ಸಕಲಸುಗುಣ ಸಂಪನ್ನೆಗೆ ಜಯ ಜಯ

ಜಯ ಜಯ ಜಯ ಜಯ ಜಯ ಜಯ ಜಯ ಜಯ
ಜಯ ಜಯ ಜಯ ಜಯ ಜಯ ಜಯ ಜಯ ಜಯ.

**(ಲೋಕಸಾರಂಗನು ಕಂಬವನ್ನು ಹಿಡಿದು ನಿಂತಿರುವ ಹಾಗೆಯೇ ಯೋಗ ನಿದ್ರೆಯಲ್ಲಿ ಮುಳುಗುವನು)**

**ಮಧುರ** (**ಆಟದವರಿಗೆ**) ಯಜಮಾನರು ಯೋಗದಲ್ಲಿದಾರೆ. ಇನ್ನು ನೀವು ನಡೆಯಿರಿ. (**ಎಂದು ಅವರನ್ನು ಕಳುಹಿಸಿಕೊಟ್ಟು ಆಳ್ವಾರಿಗೆ**) ಯಾವು

ದಾದರೂ ಮನಸ್ಸಿಗೆ ಒಪ್ಪಿದ ಮಾತುಕತೆ ಕೇಳಿದಾಗ ಇವರು ಈ ರೀತಿ ಸಮಾಧಿಯಲ್ಲಿ ಮುಳುಗುತ್ತಾರೆ. ಒಂದು ಗಳಿಗೆ ಎರಡು ಗಳಿಗೆ ಬಿಟ್ಟು ಎಚ್ಚರಗೊಳ್ಳುತ್ತಾರೆ.

(ಎಂದು ಲೋಕಸಾರಂಗನನ್ನು ಅಲ್ಲಿಯೇ ಕಂಬದ ಬಳಿ ಮಲಗಿಸಿ ಬಳಿಯಲ್ಲಿ ಕುಳಿತುಕೊಳ್ಳುತ್ತಾನೆ)

**ಆಳ್ವಾರ್** ಇವರು ಏಳುವವರೆಗೆ ತಾವು ಇಲ್ಲಿಯೇ ಕುಳಿತಿರುತ್ತೀರೆಂತ ಕಾಣುತ್ತದೆ.

**ಮಧುರ** ಹೌದು, ತಾವು ಕಾಯಬೇಕಾದದಿಲ್ಲ. ಇನ್ನೊಂದು ಗಳಿಗೆಗೆ ಮಧ್ಯಾಹ್ನದ ಸೇವೆ ಆರಂಭವಾಗುತ್ತದೆ. ಅದುವರೆಗೆ ಎಲ್ಲಿಯಾದರೂ ಹೋಗಿದ್ದು ಬರಬಹುದು.

**ಆಳ್ವಾರ್** ನದಿಗೆ ಹೋಗಿ ಆಹ್ನಿಕಗಳನ್ನು ಮುಗಿಸಿಕೊಂಡು ಬರುತ್ತೇನೆ.

**ಮಧುರ** ಆಗಬಹುದು. (ಆಳ್ವಾರ್ ಹೊರಡುತ್ತಾನೆ.)

# ಸ್ಥಾನ ೪

**ಬೀದಿ. ಪಾಣಿ ಹಾಡುತ್ತಿರುತ್ತಾನೆ.**

**ಪಾಣಿ**

**ಕಾನಡಾ**

ಏನಾವರೂ ಸರಿ ತೋರೆಯುದಿರೆನ್ನ
ದೀನರಕ್ಷಕಾ ಸೀತೆಯ ರನ್ನ ;
ಕಾಣೆನೊ ಬೇರೆ ಪೊರೆವರ ನಾನು
ದಾನವಾರಿ ಶ್ರೀರಾಮಚಂದ್ರ.

ಕುಲದಲಿ ಹೀನ ಗುಣದಲಿ ಹೀನ
ಮಲಿನ ಮಾನಸನಾಗಿಹೆನು ;
ಮಲರಗಣ್ಣ ನೀ ಎನ್ನ ಪರಿಕಿಸಿ
ಛಲ ಮಾಡಲು ಬದುಕುವೆನೇನೋ ?

ಕೇಳಿದ ಶಾಸ್ತ್ರವ ನಡೆಯಿಸಲಾರೇ
ಬಾಳುವೆ ಹಸನಾಗದೊ ಎಂತೂ ;
ಶ್ರೀಲತಾಂಗಿಯರಸಾ ಪತಿತನ
ಪಾಲಿಸು ಉದ್ಧರಿಸೋ ಜತನ.

ಏನು ಮಾಡಲೊ ಇನ್ನು ಬರಿಯ ಅಭಿ
ಮಾನದಿಂದ ಹೇ ರಂಗನಾಥಾ ?
ನೀನುದಾರಿಯಲ್ಲದೆ ಇರೆ ಪಾಣಿ
ಏನಾಗುವನೋ ಬಲ್ಲವರುಂಟೆ ?

(ಮಧ್ಯೆ ಆಳ್ವಾರ್ ಅಲ್ಲಿ ಬಂದು ಇವನ ಹಾಡನ್ನು ಕೇಳುತ್ತಿದಾನೆ. ಕಾರೀ ದಾಸನೂ ಆ ವೇಳೆಗೆ ಅಲ್ಲಿ ಬಂದು ತಾನೂ ಹಾಡನ್ನು ಕೇಳುತ್ತ ನಿಲ್ಲುವನು.)

**ಆಳ್ವಾರ್** ಇವರು ಬಹು ಚೆನ್ನಾಗಿ ಹಾಡುತ್ತಾರೆ.

**ಕಾರೀ** ಹೌದು ದೇವರು. ಸ್ವಾಮಿ ಪರಸ್ಥಳದವರು ?

ಆಳ್ವಾರ್ ಹೌದು. ನಾವು ಕಾಂಚೀಪುರ.

ಕಾರೀ ಸ್ವಾಮಿ. ಇಲ್ಲಿಯುವರಿಗೆಲ್ಲ ಇವರ ವಿಷಯ ಗೊತ್ತು. ಮೂವತ್ತು ವರುಷ ಒಂದೇ ಸಮನಾಗಿ ಇಲ್ಲಿ ದೇವರಿಗೆ ಸೇವೆ ಅರ್ಪಿಸಿದಾರೆ. ಈ ಕೃತಿಯೆಲ್ಲ ಇವರೇ ಮಾಡಿದವು. ನಿಂತ ಹಾಗೆಯೇ ಕವನ ಮಾಡುತ್ತಾರೆ.

ಆಳ್ವಾರ್ ಆಹಾ! ಏನಾಶ್ಚರ್ಯ!

ಕಾರೀ ಅವರಲ್ಲಿ ಆಶ್ಚರ್ಯವಲ್ಲ ಸ್ವಾಮಿ. ಮನಸ್ಸಿನ ಭಕ್ತಿ ಬಾಯಲ್ಲಿ ಮಾತಾಗುತ್ತದೆ. ಅವರೇನು ಅಲ್ಲೋದಿಲ್ಲ ನೂಲೋದಿಲ್ಲ.

ಆಳ್ವಾರ್ ಹಾಗಾದರೆ ಇವರು ಮಾಡಿದ ಹಾಡೆಲ್ಲ ನಷ್ಟವಾಗಿ ಹೋಗುತ್ತವಲ್ಲ.

ಕಾರೀ ದೇವರ ಪಾದಕ್ಕಿಟ್ಟ ಹೂವಿನ ಹಾಗೆ. ಒಪ್ಪಿಸಿದ್ದೇ ಪುಣ್ಯ. ನಷ್ಟ ಹ್ಯಾಗೆ?

ಆಳ್ವಾರ್ ಅಣ್ಣಾ ಒಳ್ಳೇ ಮಾತು ಹೇಳಿದಿರಿ.

ಕಾರೀ ಇವರ ಹಾಡು ಒಂದು ಕೆಲವನ್ನು ಇವರ ಜನ ಕಲಿತು ಹಾಡಿದಾರೆ. ನಮ್ಮವರೂ ಒಂದೆರಡು ಹಾಡುವುದು ಉಂಟು. ಮಧುರಸಾಮಿಯುವರು ಇಲ್ಲಿ ಇದ್ದು ಒಂದು ಸಲ ಕೇಳಿದರೆ ಮತ್ತೆ ಬಾಯಲ್ಲಿ ಹೇಳುವರು.

ಆಳ್ವಾರ್ ಇನ್ನೂ ಹೆಚ್ಚು ಜನ ಕಲಿಯಬಾರದೆ?

ಕಾರೀ ಇವರು ಅಂತ್ಯಜರು. ಇವರು ಮಾಡಿದ್ದನ್ನು ಜಾತೀ ಜನ ಕಲಿಯೋದೇ ಎಂತ ಮುಕ್ಕಾಲು ಪಾಲು ಜನ ಹಿಂತೆಗೆಯುತ್ತಾರೆ.

ಆಳ್ವಾರ್ ಇವರು ಅಂತ್ಯಜರಲ್ಲವೆ? ಹೌದು, ಮಧುರಸಾಮಿ ಹಾಗೆಂದು ಹೇಳಿದರು.

ಕಾರೀ ಹೌದು. ಆದರೂ ಇವರು ಮಾಡಿದ ಹಾಡನ್ನು ದೇವಸ್ಥಾನದಲ್ಲಿ ಹಾಡಿದ್ದು ನಾನು ಕೇಳಿದೇನೆ. ಇವರ ಹೆಸರು ಪಾಣಿ ಎಂತ. ಇವರು ಒಂದೊಂದು ಸಲ ಅಂಕಿತ ಹಾಕುತ್ತಾರೆ. ಒಂದೊಂದು ಸಲ ಹಾಕೋದಿಲ್ಲ. ಹಾಕಿದ ಹಾಡಿನಲ್ಲಾದರೆ ಜನ ಅದನ್ನ ಪ್ರಾಣಿ

ಅಂತ ಹೇಳಿ ಹಾಡುತ್ತಾರೆ. ಅನೇಕ ಜನರಿಗೆ ಅದು ಇವರದು ಎಂತ ತಿಳಿಯೋದಿಲ್ಲ.

ಪಾಣಿ

ಈರೇಳು ಲೋಕಗಳ ಅಂತರ್ಯಾದಿರವೇ
ನೀನಾಗಿ ನಿಂದಿರುವೆ ಹೇ ಪರಾತ್ಪರವೇ

ಎಲ್ಲ ಚೇತನಗಳೊಳಗನು ಬೆಳಗುವರಿವೇ
ನಿನ್ನ ನಿತ್ಯದ ರೂಪು ಹೇ ಪರಾತ್ಪರವೇ

(ಆಳ್ವಾರ್ ಮುಂದೆ ಹೊರಡುವನು. ಕಾರಿ ಅಲ್ಲಿಯೇ ಇರುವನು)

ಸೃಷ್ಟಿಯಲಿ ವ್ಯವೆತ್ತ ಈ ಚರಾಚರವೇ
ನಿನ್ನ ನಿಜದ ಕುಟುಂಬ ಹೇ ಪರಾತ್ಪರವೇ

ಎಲ್ಲವನು ನೀನು ಕನಿಕರದಿಂದ ಪೊರೆವೇ
ಇದು ನಿನಗೆ ಬಹು ಸುಲಭ ಹೇ ಪರಾತ್ಪರವೇ

ಕಿರಿದರಲಿ ಕಿರಿದೆಂಬ ಬಾಳಿನೊಂದಿರುವೇ
ನಿನಗೆ ಕಿರಿದಲ್ಲದಿದೆ ಹೇ ಪರಾತ್ಪರವೇ

ಮೇರೆಯನು ಕಾಣದೀ ಭೂಮಿಸಾಗರವೇ
ನಿನಗೆ ಒಂದಡಿಯಾಯ್ತು ಹೇ ಪರಾತ್ಪರವೇ

ಮನವ ನಿಲುಕದ ಕೊನೆಯ ಆಗಸದ ಹರವೇ
ಇನ್ನೊಂದು ಅಡಿ ನಿನಗೆ ಹೇ ಪರಾತ್ಪರವೇ

ಕಾಂಬಕಾಣದ ವಿಶ್ವತತಿಯನು ವಿವರವೇ
ಇಲ್ಲದೊಲು ತುಂಬಿರುವೆ ಹೇ ಪರಾತ್ಪರವೇ

ನಿನ್ನ ಮಹಿಮೆಯ ತೆರನ ಹೊಗಳುವರೆ ತರವೇ
ನನ್ನಂಥ ಮಾನವಗೆ ಹೇ ಪರಾತ್ಪರವೇ

ಎನ್ನ ಮನದಲಿ ನಿನ್ನ ಮನೆಯ ಮಾಡಿರುವೇ
ನಿನ್ನದೀ ಬಾಳಿಂದು ಹೇ ಪರಾತ್ಪರವೇ

ನನ್ನ ಚೇತನದ ವರ್ತನದೆಲ್ಲ ಹರಿವೇ
ನಿನ್ನ ಕುರಿತೋಡುತಿದೆ ಹೇ ಪರಾತ್ಪರವೇ

ಒಮ್ಮೆ ಮೊಗದೋರಿ ಮತ್ತೆ ಅದೇಕೆ ಮರೆವೇ
ಬಾಳಲಾರೆನೊ ಇಂತು ಹೇ ಪರಾತ್ಪರವೇ

(ಅರ್ಚಕನೊಬ್ಬನು ದೇವಸ್ಥಾನದಿಂದ ಕೊಡದೊಂದಿಗೆ ಬರುತ್ತಾ)

ಅರ್ಚಕ   ಯಾರೋ ಅಲ್ಲಿ........

ಪಾಣಿ   ಸ್ವಾಮಿ ತಪ್ಪಾಯಿತು (ಎಂದು ದಾರಿಬಿಡುತ್ತಾ ಮತ್ತೆ)

ತಿಳಿವ ಮರೆಸಿಹ ಪರೆಯನೆಂದಿಂಗೆ ತೆರೆವೇ
ಎಂದಿಂಗೆ ಎಂದಿಂಗೆ ಹೇ ಪರಾತ್ಪರವೇ

ಬಾಳೆನ್ನದೆಂದು ಹೆಸರಕ್ಕರವ ಬರೆವೇ
ಬರೆದು ಅಳಿಸುತಲಿರುವೆ ಹೇ ಪರಾತ್ಪರವೇ

ಬರೆದು ಅಳಿಸದ ತೆರದೊಳೆಂದಿಂಗೆ ನೆರೆವೇ
ಮರಳ ಮನವನು ನೆನೆಸಿ ಹೇ ಪರಾತ್ಪರವೇ

ಭಕ್ತ ಹೃತ್ ಕಮಲವನಚಾರಿ ಭಂಭರವೇ
ಭಕ್ತನೆಂದೆನ್ನ ಪೊರೆ ಹೇ ಪರಾತ್ಪರವೇ

ಅಗಲಿಯೂ ನೋಯದಿರೆ ನಾನೇನು ತರುವೇ
ಅರಿವಿತ್ತವನೆ ಸಲುಹು ಹೇ ಪರಾತ್ಪರವೇ

ಎನ್ನೆಲ್ಲ ಜನ್ಮಗಳ ತಾಯ್ತಂದೆ ಗುರುವೇ
ಇನ್ನೆಲ್ಲಿ ಜೇಡಲ್ಕೆ ಹೇ ಪರಾತ್ಪರವೇ

ನಾ ದೋಷಿ ಪಾಪಿಯೆಂದೇನು ಬೇಸರವೇ
ಕ್ಷಮೆಯಬುಧಿ ಬತ್ತಿತೇ ಹೇ ಪರಾತ್ಪರವೇ

ಕಾಲ ಬರಲೆಲ್ಲವನು ನೀ ಮರೆಗೆ ಕರೆವೇ
ಕರುಣಾಳು ಕೊನೆಯ ನೆಲೆ ಹೇ ಪರಾತ್ಪರವೇ

ಎನ್ನ ಎಂದಿಂತು ನೀ ಪತಿಕರಿಸಿ ಪೊರೆವೇ
ಬಾಳ ಹೊನಲಿನ ಶರಧಿ ಹೇ ಪರಾತ್ಪರವೇ
ಹೇ ಪರಾತ್ಪರವೇ ಹೇ ಪರಾತ್ಪರವೇ....

(ಎಂದು ಧ್ಯಾನದಲ್ಲಿ ನಿಲ್ಲುವನು. ಅರ್ಚಕನು ನದಿಯ ಕಡೆಯಿಂದ ಕೊಡದಲ್ಲಿ ನೀರು ತುಂಬಿಕೊಂಡು ಬರುವನು)

ಅರ್ಚಕ ಯಾರೋ ದಾರಿಯಲ್ಲಿ? ನಾರಾಯಣ, ಇವರ ಸಂಗಡ ಒಳ್ಳೇ ವ್ಯಾಪಾರ ಆಯಿತಲ್ಲಪ್ಪಾ ದಾರಿಗಾಗಿ. ಏ ಯಾರೋ ಅಲ್ಲಿ?.... (ಪಾಣಿ ಇದ್ದಲ್ಲಿಯೇ ಇರುವನು) ಅಯ್ಯೋ ಒಳ್ಳೇ ಗ್ರಹಚಾರವಾಯಿತಲ್ಲ. (ಎಂದು ಒಂದು ಕಲ್ಲನ್ನು ತೆಗೆದುಕೊಂಡು ಪಾಣಿಯ ಕಡೆಗೆ ಎಸೆಯುವನು. ಅದು ಅವನ ತಲೆಗೆ ತಗುಲಿ ಗಾಯಮಾಡುವುದು. ಪಾಣಿಗೆ ನೆನವಿಲ್ಲ. ಅವನು ಹಾಗೆಯೇ ಕೆಳಗೆ ಬೀಳುವನು. ಅರ್ಚಕನು ದೇವಾಲಯದ ಕಡೆಗೆ ನಡೆಯುವನು.)

ಕಾರೀ ಎಲ ಎಲ ಅಪಾಯವಾಯಿತಲ್ಲ. ಯಾರನ್ನಾದರೂ ಕರೆಯುವ (ಎಂದು ಹೋಗುವನು.)

## ಸ್ಥಾನ ೫

**ಲೋಕಸಾರಂಗನು ಸಮಾಧಿಯಲ್ಲಿ ಮಲಗಿರುವ ಸ್ಥಳ; ಮಧುರ ಕುಳಿತಿದಾನೆ; ಆಳ್ವಾರ್ ಬರುತ್ತಾನೆ.**

**ಆಳ್ವಾರ್** ಇನ್ನೂ ಯಜಮಾನರು....

**ಮಧುರ** ಮೆಲ್ಲನೆ ಮಾತನಾಡಿ (ಎಂದು ಸನ್ನೆಮಾಡುತ್ತಾನೆ)

**ಆಳ್ವಾರ್** ಇನ್ನೂ ಸಮಾಧಿಯಲ್ಲಿಯೇ ಇದಾರೆ.

**ಮಧುರ** ಹೌದು.

**ಆಳ್ವಾರ್** ಒಳಗೆ ಕೆಲಸ?

**ಮಧುರ** ಅದು ಎಂದಿನಂತೆ ನಡೆಯುತ್ತಿರುತ್ತದೆ. ಅವರು ಸಮಾಧಿಯಲ್ಲಿರುವಾಗಲೂ ಆಗುವುದು ಹೋಗುವುದೆಲ್ಲ ಅವರಿಗೆ ತಿಳಿಯುತ್ತಲೆ ಇರುತ್ತದೆ. ತಾವು ಒಳಗೆ ಹೋಗಿ ದೇವರ ಸೇವೆ ಮಾಡಿಕೊಂಡು ಬರಬಹುದು.

(ಆಳ್ವಾರ್ ಒಳಗೆ ಹೋಗುವನು)

**ಮಧುರ** (ಮೆಲ್ಲಗೆ ಪದ್ಯಗಳನ್ನು ಹೇಳುವನು)

ಬಾಂದಳವೆ ಹಣತಿ ನಕ್ಷತ್ರವೇ ಜ್ಯೋತಿ
ನಾನೆ ಎಡೆ ನಿನಗೆ ಒಡೆಯಾ ನನ್ನ ಗುರುವೇ;
ಇವ ಮೂರ ನೀಡಿ ಪೂಜಿಸುವೆನೋ ನಾ ನಿನ್ನ
ರಕ್ಷಕ ಪರಂಜ್ಯೋತಿ ಹೇ ಪರಾತ್ಪರವೇ.

ಆತ್ಮವೇ ಹಣತಿ ಅರಿವೆಂಬುದೇ ಜ್ಯೋತಿ
ಒಳಗಣಾನಂದ ನಿನಗೆಡೆ ಒಡೆಯ ಗುರುವೇ;
ಇವನು ಪಾದದೊಳಿರಿಸಿ ಪೂಜಿಸುವೆನೋ ನಿನ್ನ
ಸಚ್ಚಿದಾನಂದ ಅಚ್ಯುತ ಪರಾತ್ಪರವೇ.

(ಲೋಕಸಾರಂಗನು ಸ್ವಪ್ನದಲ್ಲಿ ಒರಲುವಂತೆ ಒರಲಿ ಬೆಚ್ಚಿ ಬೀಳುವನು)

**ಮಧುರ** (ಅವನನ್ನು ಹಿಡಿದು ಮಗುವನ್ನು ತಟ್ಟುವಂತೆ ತಟ್ಟುತ್ತ) ಇದೇನು ಇದು ಎಂದೂ ಇಲ್ಲದ್ದು! (ಎಂದು ಕ್ಷಣ ಬಿಟ್ಟು)

ಜಗವನುಂಡ ಹಿರಿಬಾಯಾ ಸೋಲರಿಯದ ಕೀರ್ತಿಯರಸಾ
ನಿಲು ಸೊಡರ ಹೊಗರ ಚೆಲುವಮೂರುತಿ ದಾಸನುಸಿರ ಒಳಉಸಿರಾ
ಜಗದ ತಿಲಕವಾಗಿ ನಿಂದ ತಿರುವೇಂಗಡದೆನ್ನೊಡೆಯಾ
ಜೀತದ ಬಳಿಯಾತನೆನಗೆ ತೋರು ಅಡಿಯ ಸಾರ್ವಪರಿಯಾ

ಲೋಕ ಅಬ್ಬ (ಎಂದು ನಿದ್ದೆಯಿಂದ ಏಳುವನು.)

ಮಧುರ ಏನಾಯಿತು?

ಲೋಕ (ಕುಳಿತು) ದೇವರಿಗೆ ಆಗ್ರಹವುಂಟಾಗಿದೆ. ನಿನ್ನ ಸೇವೆ ನನಗೆ ಬೇಡ ಎಂದರು.

ಮಧುರ ಏಕಂತೆ?

ಲೋಕ ತನ್ನ ಭಕ್ತನು ಬಿಸಿಲಲ್ಲಿ ನಿಂತಿದಾನಂತೆ. ನಮ್ಮವರು ಯಾರೋ ಅವನನ್ನು ಕಲ್ಲಿನಿಂದ ಹೊಡೆದರಂತೆ. ಹೋಗಿ ಅವನನ್ನು ಕರೆದು ಕೊಂಡು ಬಂದರೆ ಸರಿ, ಇಲ್ಲದಿದ್ದರೆ ನಾನಿಲ್ಲಿರುವುದಿಲ್ಲ, ನನಗೆ ನಿಮ್ಮ ಸೇವೆ ಬೇಡ ಎಂದರು.

ಮಧುರ ಈಗ ಏನು ಮಾಡುತೀರಿ?

ಲೋಕ ನಿನ್ನ ಭಕ್ತನನ್ನು ನಿನ್ನಲ್ಲಿಗೆ ಕರೆದುತರುತ್ತೇನೆ, ಇದಕ್ಕೆ ಆಗ್ರಹ ವೇಕೆ, ತಪ್ಪನ್ನು ಮನ್ನಿಸಬೇಕು ಎಂದು ಎಚ್ಚತ್ತೆ. ಜನರನ್ನು ಕರೆ, ಭಕ್ತನನ್ನು ಮರ್ಯಾದೆಯಿಂದ ಕರೆತರೋಣ.

ಮಧುರ ಭಕ್ತನು ಯಾರೆಂದು ನೋಡ ಹೇಳಲಿ?

ಲೋಕ ನೋಡುವುದು ಏನು? ಭಕ್ತನು ಬಿಸಿಲಲ್ಲಿದಾನೆ. ನಮ್ಮವರು ಅವನನ್ನು ಕಲ್ಲಿನಿಂದ ಹೊಡೆದಿದಾರೆ, ಅವನನ್ನು ಕರೆದುಕೊಂಡು ಬರಬೇಕು.

(ಆ ವೇಳೆಗೆ ಅರ್ಚಕರಿಬ್ಬರೂ ಆಳ್ವಾರೂ ಬರುವರು)

ಅರ್ಚಕ ಯಜಮಾನರು ಸ್ವಲ್ಪ ಗರ್ಭಗುಡಿಯ ಬಳಿ ಬರಬೇಕು. ನಾವು ಒಳಹೊಗುವುದಕ್ಕಾಗುವುದಿಲ್ಲ.

ಮಧುರ ಏಕೆ ಏನಾಗಿದೆ?

ಅರ್ಚಕ ಆದಿಶೇಷನಿಗೆ ಉಸುರು ಬಂದಂತೆ ಕಾಣುತ್ತಿದೆ. ಗುಡಿಯಲ್ಲಿ ಬಿಸಿ ಬಿಸಿ ಗಾಳಿ. ಒಳಗೆ ಅಡಿಯಿಡಲಾಗಲಿಲ್ಲ.

ಇನ್ನೊಬ್ಬ ಹಾಗೂ ನೋಡೋಣವೆಂದು ಒಳಗೆ ಹೋದೆ. ಯಾರೋ ದೂಡಿದಂತಾಯಿತು. ತಲೆ ತಿರುಗಿ ಹೊರಕ್ಕೆ ಬಿದ್ದೆ.

ಆಳ್ವಾರ್ ಗರ್ಭಗುಡಿಯ ಹತ್ತಿರ ಹೋಗಲೂ ಆಗುವುದಿಲ್ಲ. ಇದು ನಿಜ.

ಲೋಕ ಇನ್ನು ಸಂದೇಹವೇ, ಸಾಮಿ, ಎಲ್ಲರನ್ನೂ ಕರೆದುಕೊ ನಡೆ.

ಮಧುರ ದೇವರ ಭಕ್ತನೊಬ್ಬನನ್ನು ನಮ್ಮವರು ಯಾರೋ ಕಲ್ಲಿನಿಂದ ಹೊಡೆದರಂತೆ. ಅವನು ಬಿಸಿಲಲ್ಲಿ ಬಿದ್ದಿದಾನಂತೆ. ಅವನನ್ನು ಕರೆದುಕೊಂಡು ಬನ್ನಿರೆಂದು ದೇವರ ಅಪ್ಪಣೆಯಾಗಿದೆ. ಎಲ್ಲ ನಡೆಯಿರಿ.

ಅರ್ಚಕರು ಅಪ್ಪಣೆ.

ಮಧುರ ಯಾರು ಕಲ್ಲಿನಿಂದ ಹೊಡೆದವರು?

ಅರ್ಚಕರು ನಾವೇಕೆ ಕಲ್ಲಿನಿಂದ ಹೊಡೆದೇವು?

ಇನ್ನೊಬ್ಬ ನಾವು ದೇವಸ್ಥಾನದಿಂದ ಹೊರಗೆ ಹೋಗಿರಲಿಲ್ಲ. ತಿರುವೇಂಗಡ ಹೋಗಿದ್ದ, ಅವನೇನಾದರೂ ಹೊಡೆದಿರಬಹುದು. ಅವನದು ಯಾವಾಗಲೂ ಸ್ವಲ್ಪ ದುಡುಕು.

ಮಧುರ ಏಳಿ ನಡೆಯಿರಿ. ಕಲಶ ಕನ್ನಡಿ ತೆಗೆಯಿಸಿಕೊಳ್ಳಿ. ವಾದ್ಯಗಾರರು ಜೊತೆಗೆ ಬರಲಿ.

(ಎಲ್ಲ ಹೊರಡುವರು)

ಲೋಕ (ರಂಗನಾಥನ ಕಡೆಗೆ ಅಡ್ಡಬಿದ್ದು) ನಿನ್ನ ಅಪ್ಪಣೆಯಂತೆ ನಡೆಯುತ್ತೇವೆ. ನೀನು ಆಗ್ರಹ ಮಾಡಬೇಡ, ದೇವಾ ಕಾಪಾಡು.

## ಸ್ಥಾನ ೬

**ಬೀದಿ. ತಿರುಪಾಣಿ ಎಚ್ಚತ್ತು ನಿಂತುಕೊಂಡಿದಾನೆ. ತಲೆಯಿಂದ ಸ್ವಲ್ಪ ರಕ್ತ ಸೋರುತ್ತಿದೆ.**

ನಿನ್ನ ಕೈಂಕರ್ಯದಲಿ ತೊಡಗಿಹರ ದಾರಿಯಲಿ
ನಿಂದು ಸೇವೆಗೆ ಅಡ್ಡಿಯಾದೆನಿದು ತಪ್ಪು

ನಿನ್ನ ಕಿಂಕರನ ಮನ ರೋಸುವಂದದಿ ಮಾಡಿ
ಭಾಗವತಹೃದಯವನು ಕಲಕಿದದು ತಪ್ಪು

ಎಲ್ಲೆಡೆಯೊಳಿಹೆನೆನ್ನ ಒಂದೆಡೆಯೊಳರಸದಿರು
ಎಂದು ನೀನರಿಯಿಸಿರೆ ಒಪ್ಪೆನದು ತಪ್ಪು

ಎನಿತು ಜನ್ಮಗಳ ಸೇವೆಯನು ಎಸಗಿದ ಮೇಲೆ
ಬರುವ ಭಕ್ತಿಯ ಇಂದೆ ಬಯಸಿದೆನು ತಪ್ಪು

ತಡೆಯೊ ತಮ್ಮಾ ಎಂದು ಹಿರಿಯರಿಂ ನುಡಿಸಿದರು
ನನ್ನನೀಗಳೆ ಒಪ್ಪು ಎಂದೆನದು ತಪ್ಪು

ಅಭಿಮಾನಿ ಕಾರುಣ್ಯಮೂರ್ತಿ ಪೊರೆವರೆ ನೀನು
ಹಾತೊರೆಯುತಿರುವೆ, ಇದ ಮರೆದೆನಿದು ತಪ್ಪು

ಎಲ್ಲಿರಲಿ ಎಂತಿರಲಿ ನಿನ್ನ ಕರುಣೆಯ ಹಸ್ತ
ತುಡುಕಿ ಪೊರೆವುದು, ಇದನು ಮರೆದೆನಿದು ತಪ್ಪು

ಬಾಳ್ವೆಯೆಲ್ಲವು ತಪ್ಪು ಮನ್ನಿಸೋ ರಂಗಾ
ಅಳಿಸಿ ನಗಿಸುವ ತಾಯಿ ಹೇ ಚೆಲುವ ಸಿಂಗಾ.

**(ದೇವಸ್ಥಾನದಿಂದ ಲೋಕಸಾರಂಗನೂ ಜೊತೆಯ ಜನರೂ ಬರುವರು)**

**ಲೋಕ** ಬೀದಿಯಲ್ಲಿ ಪಾಣಿ ಹೊರತು ಯಾರೂ ಇಲ್ಲ. ಬಿಸಿಲಲ್ಲಿ ನಿಂತಿರುವ ಭಕ್ತನೆಂದರೆ ಈತನನ್ನೇ ಕುರಿತಿರಬೇಕು.

ಮಧುರ ಈತನ ತಲೆಯಿಂದ ರಕ್ತ ಸೋರುತ್ತಿದೆ. ನಮ್ಮವರು ಯಾರೋ ಈತನನ್ನು ಹೊಡೆದಿರಬೇಕು.

ಆಳ್ವಾರ್ ಈತನು ಅಂತ್ಯಜನೆಂದು ಹೇಳಿದಿರಲ್ಲವೆ?

ಮಧುರ ಹೌದು.

ಆಳ್ವಾರ್ ಈತನೇ ಆ ಭಕ್ತನಾದರೆ......

ಲೋಕ ಕರೆದು ತರುತ್ತೇನೆಂದು ನಾನು ಮಾತು ಕೊಟ್ಟಿದೇನೆ. ಕರೆದು ಕೊಂಡು ಹೋಗುವುದೇ ನಿಜ.

ಮಧುರ ಇವರನ್ನು ನಮ್ಮವರು ಹೊಡೆದರೇ ವಿಚಾರಿಸೋಣವೆ?

ಅರ್ಚಕ ಹೌದು, ತಿರುವೇಂಗಡ ಬಂದರು. ಅವರು ನದಿಯಿಂದ ಬರುತ್ತಿರುವಾಗ ಈತ ದಾರಿಗೆ ಅಡ್ಡವಿದ್ದರಂತೆ. ತಿರುವೇಂಗಡ ಕೋಪದಿಂದ ಕಲ್ಲೆಸೆದರಂತೆ. ಪಾಣಿಗೆ ಹಣೆಯ ಮೇಲೆ ಗಾಯವಾಗಿದೆ.

ಲೋಕ (ಜೊತೆಯವರಕಡೆಗೆ ತಿರುಗಿ ಕೈಮುಗಿದು) ಗೋಷ್ಠಿಯ ಮಹನೀಯರು ನನ್ನ ವಿಜ್ಞಾಪನೆಯನ್ನು ಲಾಲಿಸಬೇಕು. ನನಗೆ ದೇವೇಶನು ಮಾಡಿದ ಅಪ್ಪಣೆ ಇದು. ತನ್ನ ಭಕ್ತ ಬಿಸಿಲಲ್ಲಿ ನಿಂತಿದಾನೆ, ನನ್ನವರಿಂದ ಗಾಯ ಪಟ್ಟಿದಾನೆ, ಅವನನ್ನು ದೇವಾಲಯಕ್ಕೆ ಕರೆದುತರಬೇಕು ಎಂದು. ಪಾಣಿಯವರನ್ನು ನಾನು ಬಲ್ಲೆ. ರಂಗನಾಥನು ಅಪ್ಪಣೆ ಮಾಡಿದ್ದು ಈತನನ್ನು ಕುರಿತೇ. ಈ ವಿಚಾರದಲ್ಲಿ ನನಗೆ ಸಂದೇಹವಿಲ್ಲ. ಈತನನ್ನು ಆಲಯಕ್ಕೆ ಕರೆದುಕೊಂಡು ಹೋಗಿ ದೇವರ ಇಷ್ಟವನ್ನು ಸಲಿಸಬೇಕೆಂದು ನನ್ನ ಅಪೇಕ್ಷೆ. ಇದಕ್ಕೆ ಮಹನೀಯರು ಅಪ್ಪಣೆ ಕೊಡಬೇಕು.

(ಯಾರೂ ಮಾತನಾಡುವುದಿಲ್ಲ)

ಲೋಕ ಏಕೆ ಯಾರೂ ಅಪ್ಪಣೆ ಮಾಡುವುದಿಲ್ಲ?

ಮಧುರ ನಿಮಗೆ ಅಪ್ಪಣೆ ಮಾಡುವೆವೆಂದು ಇಲ್ಲಿ ಯಾರು ಹೇಳುವರು? ನೀವು ಬಲ್ಲವರು. ಇನ್ನೆಲ್ಲರೂ ನಿಮ್ಮ ಅಪ್ಪಣೆಯಂತೆ ನಡೆಯುವವರು.

ಲೋಕ ಇದು ಸರಿಯೇ?

ಎಲ್ಲರೂ ಸರಿ. ನ್ಯಾಯದ ಮಾತು. ನಿಮ್ಮಂತೆ ನಾವು.

**ಲೋಕ** ಜಯ ರಂಗನಾಥ, ರಂಗೇಶ, ರಂಗಮಣಿ,
ಜಯ ಭಕ್ತವತ್ಸಲಾ, ಜಯ ಪತಿತಪಾವನಾ

(ಎಂದು ದೇವಾಲಯದ ಕಡೆಗೆ ಕೈಮುಗಿದು, ಪಾಣಿಯನ್ನು ಕುರಿತು)

ಭಾಗವತರೇ ರಂಗನಾಥನು ತಮ್ಮನ್ನು ಆಲಯಕ್ಕೆ ಕರತರಬೇಕೆಂದು ಅಪ್ಪಣೆ ಮಾಡಿದಾನೆ. ಬಿಜಮಾಡಬೇಕು.

**ಪಾಣಿ** (ಚಕಿತನಾಗಿ) ಇನ್ನು ಯಾರಾದರೂ ಹೇಳಿದ್ದರೆ ಇದು ಅಪಹಾಸ್ಯವೆನ್ನುತಿದ್ದೆ. ತಾವು ಹೇಳುತಿದೀರಿ; ನಿಜವಿರಬೇಕು. ಆದರೆ ಪ್ರತಿಷ್ಠೆಯಾದಂದಿನಿಂದ ಇದುವರೆಗೆ ಅಂತ್ಯಜರು ಪ್ರವೇಶಿಸದ ಆಲಯದೊಳಕ್ಕೆ ನಾನು ಈ ದೇಹವನ್ನು ಹೇಗೆ ತರಲಿ?

**ಲೋಕ** ನೀವು ತರುವುದು ಬೇಡ. ನಾನು ತೆಗೆದುಕೊಂಡು ಹೋಗುತ್ತೇನೆ. ಹನುಮಂತನ ಭುಜವನ್ನೇರಿದ ಲಕ್ಷ್ಮಣನಂತೆ ಈ ಪಾಮರನ ಭುಜವನ್ನೇರಿ ದೈವಸಾನ್ನಿಧ್ಯಕ್ಕೆ ಬಿಜಮಾಡಿಸಬೇಕು.

**ಪಾಣಿ** ಮಹಾಪರಾಧವಾದೀತು; ಮನ್ನಿಸಿ; ಈ ಆತ್ಮಕ್ಕೆ ವೈಕುಂಠ ದೊರೆತರೆ ಸಾಕು, ದೇಹಕ್ಕೆ ಬೇಡ.

**ಲೋಕ** ಭಗವಂತನ ಅಪ್ಪಣೆಯಾಯಿತು, ತಮ್ಮನ್ನು ಕರೆದುಕೊಂಡು ಬರಬೇಕೆಂದು. ಕರೆದುತರುವೆನೆಂದು ನಾನು ಮಾತುಕೊಟ್ಟೆ. ಅನುಗ್ರಹಿಸಬೇಕು. ಭಾಗವತರೆಲ್ಲ ಬಿಸಿಲಲ್ಲಿ ಕಾದಿದಾರೆ.

**ಪಾಣಿ** ಈ ಅಪ್ಪಣೆಯ ಮಾತನ್ನು ನಾನು ಹೇಗೆ ಒಪ್ಪಲಿ?

**ಲೋಕ** ದಯಮಾಡಿ ನಮ್ಮನ್ನು ಉದ್ಧರಿಸಬೇಕು (ಎಂದು ಪಾಣಿಯನ್ನು ಹಿಡಿಯಲು ಹೋಗುವನು.)

**ಪಾಣಿ** (ಕೈಮುಗಿಯುತ್ತ ಹಿಂದಹಿಂದಕ್ಕೆ ಹೋಗುತ್ತ) ಹೀಗೆ ಮಾಡಬಾರದು. ಅಪಚಾರವಾಗುತ್ತದೆ.

**ಲೋಕ** (ಹೋಗಿ ಅವನನ್ನು ಹಿಡಿದುಕೊಂಡು ಬೆನ್ನಮೇಲೆ ಕೂರಿಸಿಕೊಂಡು) ಕೇಳಿಲ್ಲವೇ ನೀವು?

ಹಿರಿತನದ ಹೆಮ್ಮೆ ಅವನಲಿ ಒಳ್ಳಿತಲ್ಲಾ
ಕಿರಿತನದ ಹೀನಾಯ ನಿನಗೆ ಸಲ್ಲಾ;

ಹರಿಯ ನೆನೆಯುವ ಮನವೆ ವೈಕುಂಠವೆನಲಾಗಿ
ಸರಿಯಾದರಲ್ಲವೇ ಭಕ್ತರೆಲ್ಲಾ

ಜಯ ಜಯ ಜಗನ್ನಾಥ ಜಯ ಪತಿತಪಾವನಾ
ಜಯ ಭಕ್ತವತ್ಸಲಾ ಜಯ ರಂಗಧಾಮಾ

**(ಎಲ್ಲರೂ ಚಪ್ಪಾಳೆ ತಟ್ಟುವರು ; ಜಯಘೋಷ ಮಾಡುವರು. ಲೋಕಸಾರಂಗನು ಪಾಣಿಯೊಡನೆ ದೇವಾಲಯಕ್ಕೆ ನಡೆಯುವನು. ಎಲ್ಲ ಹಿಂದೆ ನಡೆಯುವರು.)**

## ಸ್ಥಾನ ೭

ಆಲಯದಲ್ಲಿ ದೇವರ ಮುಂದೆ ಲೋಕಸಾರಂಗ, ಪಕ್ಕದಲ್ಲಿ ಪಾಣಿ. ಸುತ್ತ ಭಕ್ತರು.
ಅರ್ಚಕನು ದೇವರಿಗೆ ಆರತಿ ಮಾಡುತ್ತಿದಾನೆ. ಅದಾದ ಮೇಲೆ

**ಪಾಣಿ**

ಅಮಲ, ಆದಿ, ಹಿರಿಯ, ತನ್ನ ಜನಕೆ ನನ್ನ ನಾಳಗೆಯ್ದ
ವಿಮಲನಡಿಯ, ದೇವರೊಡೆಯ ನನ್ನ ರಂಗಧಾಮನಡಿಯ,
ಕಮಲ ಎನ್ನ ಕಣ್ಣ ಹೊಕ್ಕು ಇಂದು, ಎದೆಯ ತಣಿಸುತಿಹುವು;
ಅಮಮ ನನ್ನ ಕುರಿತು ಇವನ ಕರುಣೆಯೆನಿತು ಕಂಡೆನೇ.

ಅರಿಯದಾಳದಬುಧಿಯನೇ ಅಗಳುಮಾಡಿ ಮೆರೆದ ಲಂಕೆ
ಕೊರಗುವಂತೆ ಕೂರಲಗನು ಎಚ್ಚರಾಯ ಕಾಕುತ್ಸ್ಥನ,
ಪರಮ ಮಧುರವಾಗಿ ಹಾಡೆ ಗಿಳಿಗಳುಲಿಯೆ ನವಿಲು ಕುಣಿವ
ಸಿರಿಯ ರಂಗಧಾಮದರಸು ದೇವನೆದೆಯ ಕಂಡೆನೇ.

ಹಿಂದಿನಿಂದ ಬೆಳೆದು ಬಂದು ಬಾಳಕಾಲ ಸುತ್ತಿಕೊಂಡ
ಮುಂದೆ ನಡೆಯೆ ಬಿಡದೆ ಹಿಡಿದ ಕರ್ಮಲತೆಯ ಬೇರ ಕೊಯ್ದು
ಒಂದಿನಿಸೂ ತಪವ ಕಾಣದೆನ್ನ ಮನವ ಮನೆಮಾಡಿದ
ಮಂದಹಸಿತ ಸುಂದರಮುಖ ರಂಗನ ನಾ ಕಂಡೆನೇ.

ಇತ್ತ ಚಕ್ರ ಇತ್ತ ಶಂಖ ತೊಳಗೆ ಶೇಷಶಾಯಿಯಾಗಿ
ಸುತ್ತ ಹರಿವ ಕಾವೇರಿಯ ನೀರೊಳೊಲೆವ ಕಮಲದಿಂದ
ಚಿತ್ತವನೇ ಕಳುವ ಚೆಲುವಮಾಟದ ರಂಗದಲಿ ನೆಲಸಿ
ತೆತ್ತಿಗರನು ಪೊರೆಯುತಿಹನ ಮುದ್ದು ಬಾಯ ಕಂಡೆನೇ.

ತುಳಸಿಯ ನರುಗಂಪಮಾಲೆ ಮೂರ ಹೊತ್ತ ಮಂಗಳಾಂಗ
ವಿಳಸಿತ ಕುಂಕುಮತಿಲಕಾಲಂಕೃತ ಕಸ್ತೂರಿ ರಂಗ
ಕಲಕಲ ನಿನದದಿ ಹರಿಯುವ ಕರುಣಾಕರಿ ಕಾವೇರಿಯ
ನಿಲಯವ ಬೆಳಗಿದ ರಂಗನ ಸಿರಿಮುಡಿಯನು ಕಂಡೆನೇ.

ತ್ರಿಭುವನವನು ಸೃಜಿಸಿ ಸಲಹಿ ಮರೆಯಿಪ ದೊರೆ, ರಂಗದಲ್ಲಿ
ವಿಭವದಿಂದ ಪವಡಿಸಿ ಭಕ್ತರನು ಪೊರೆವ ವ್ರತದಾತನ
ಶುಭವೀಯುವ ಬಗೆಯ ನಗೆಯ ಮಾಯೆಯಿಂದ ಮಿಳಿರ್ವ ಕಣ್ಣಾ
ಅಭಯದೃಷ್ಟಿ ಎನ್ನೊಳಗನು ಹರುಷದಿಂದ ತುಂಬಿತೇ.

ಕಂಡವೇ ನನ್ನ ಕಣ್ಣು ಆಲದೆಲೆಯ ಮೇಲೆ ಮಲಗಿ
ಅಣ್ಡಾಣ್ಡದ ಬಹಿರಂಡ ಬ್ರಹ್ಮಾಂಡವ ಹೆತ್ತು ಹೊತ್ತು
ಉಣ್ಡ ನನ್ನ ದೇವನನ್ನು, ನರುಗಂಪಿನ ತೋಪುಗಳ ಪ್ರ-
ಚಂಡ ಶೈಲ ವೇಂಕಟದಲಿ ನೆಲಸಿದವನ ಕಂಡವೇ.

ಕಾರ್ಮುಗಿಲ ಬಣ್ಣದ, ಗೋಪಾಲನಾಗಿ
ಬೆಣ್ಣೆಯುಂಡ ಬಾಯ, ಎನ್ನೊಳಗ ಕವರಿದವನ
ಜಗದೊಡೆಯ ಚೆಲುವ ರಂಗನ, ಎನ್ನ ಅಮುದನ,
ಕಂಡ ಕಣ್ಗಳು ಬೇರೆ ಏನನೂ ಕಾಣವೇ.

(ಎಂದು ಧಾವಿಸಿ ಮೂರ್ತಿಯ ಬಳಿಗೆ ಓಡುವನು. ಜ್ಯೋತಿಯೊಂದು ಜ್ಯೋತಿಯೊಂದಿಗೆ ಬೆರೆತಂತೆ ಕಾಣುವುದು. ಪಾಣಿ ಬೇರೆಯಾಗಿ ಕಾಣುವುದಿಲ್ಲ.)

ಲೋಕ ಭಾಗವತರೆಲ್ಲಿ?

ಅರ್ಚಕ ಮೂರ್ತಿಯಲ್ಲಿ ಲೀನವಾಗಿದಾರೆ.

ಲೋಕ ತೆರೆಯನ್ನು ಎಳೆ. ಅವರ ಅನುಭವಕ್ಕೆ ನಮ್ಮಿಂದ ಅಡ್ಡಿಯಾಗದಿರಲಿ. ಮಧುರಸ್ವಾಮಿ ನಾವು ಇಂದು ಎಣಿಸಕೂಡದ ಅದ್ಭುತವನ್ನು ನೋಡಿದ್ದಾಯಿತು. ಭಾಗವತಧರ್ಮ ಇಂದು ಪೂರ್ಣವಾಯಿತು.

ಮಧುರ ನಿಮ್ಮ ತಪಃಪ್ರಭಾವದಿಂದ ಆಯಿತು.

ಲೋಕ ಪಾಣಿಯವರು ದೇವರಲ್ಲಿ ಅಳಿದರು. ಆದಿಯ ಆಳ್ವಾರುಗಳಂತೆ ನಮ್ಮಾಳ್ವಾರಂತೆ ಇವರೂ ಬ್ರಹ್ಮ ಸರಸ್ಸಿನ ಪರಮಹಂಸರು. ಇವರನ್ನು ಇನ್ನು ಆಳ್ವಾರೆಂದು ವ್ಯವಹರಿಸಬೇಕು.

ಮಧುರ ಅದಕ್ಕೇನಡ್ಡಿ? ಆಳ್ವಾರ್ ಸ್ವಾಮಿಗಳೇ?

ಆಳ್ವಾರ್ ಆಹಾ ಅಗತ್ಯವಾಗಿ. ಈ ಅದ್ಭುತ ನಡೆಯುವ ವೇಳೆ ನಾನು ಇಲ್ಲಿ ಇದ್ದು ನಿಮ್ಮೆಲ್ಲರ ಅನುಗ್ರಹದಿಂದ ರಂಗನಾಥನ ಭಕ್ತ

ವಾತ್ಸಲ್ಯವನ್ನು ಸ್ವತಃ ಅನುಭವಿಸಿದ್ದು ಒಂದು ದೊಡ್ಡ ಪುಣ್ಯವೆಂದು ಭಾವಿಸುತ್ತೇನೆ.

ಲೋಕ ಈ ವಿಚಾರ ಎಲ್ಲಾ ಗೋಷ್ಠಿಗಳಿಗೂ ತಿಳಿಯುವುದಕ್ಕೆ ಏರ್ಪಾಡು ಮಾಡಬೇಕು. ಮಧುರಸಾಮಿ, ಈ ದಿನವನ್ನು ಈ ಸನ್ನಿಧಿಯಲ್ಲಿ ವೈಕುಂಠದ ಬಾಗಿಲು ತೆಗೆದ ದಿನವೆಂದು ಆಚರಿಸಬೇಕು. ಇಂದೇ ಮೊದಲ ಹಬ್ಬವಾಗಲಿ. ಊರಲ್ಲಿ ಹೆಣ್ಣುಮಕ್ಕಳಿಗೆ ಹೇಳಿ ಕಳು ಹಿಸು. ಆಲಯದಲ್ಲೆಲ್ಲ ರಂಗವಲ್ಲಿಯನ್ನು ಹಚ್ಚಲಿ. ಸಂಜೆಯವರೆಗೆ ಶತವಾರ ಸಹಸ್ರ ನಾಮಾರ್ಚನೆ ನಡೆಯಲಿ. ಸಂಜೆಯಲ್ಲಿ ದೇವರ ಉತ್ಸವ ನಡೆಯಲಿ. ಜೊತೆಯಲ್ಲಿ ಆಳ್ವಾರುಗಳು ಬಿಜಮಾಡುವಂತೆ ಏರ್ಪಾಡು ಮಾಡು. ತಿರುಪಾಣಿಯಾಳ್ವಾರದು ಸದ್ಯಕ್ಕೆ ಮೃತ್ತಿಕೆ ಯಿಂದ ಒಂದು ಮೂರ್ತಿಯನ್ನು ಮಾಡುತ್ತೇನೆ. ಆ ಮೂರ್ತಿಯೂ ಆಳ್ವಾರುಗಳ ಗೋಷ್ಠಿಯಲ್ಲಿ ಬಿಜಮಾಡಿಸಲಿ. ಎಲ್ಲಿ, ಅಣ್ಣ, ತಿರುಪಾಣಿಯವರ ಭಕ್ತಿಯಿಂದ ದೇವರು ನಮಗೆ ಪ್ರತ್ಯಕ್ಷನಾದ ದಿನವಿದು. ಏಳಿ, ಎಲ್ಲರೂ ಅವರವರ ಕೆಲಸ ನೋಡಿ. ದೊಡ್ಡ ಹಬ್ಬ ಮಾಡಬೇಕು.

ಮಧುರ ಅಪ್ಪಣೆ.

ಲೋಕ ಈಗ ರಂಗನಾಥನು ಉಪನಿಷತ್ತನ್ನು ಅವಧರಿಸಲಿ. ಆಳ್ವಾರವರೆ, ಆರಂಭಿಸೋಣವಾಗುತ್ತದೆಯೆ ?

ಆಳ್ವಾರ್ ಧನ್ಯ. ಅಗತ್ಯವಾಗಿ (ಎಂದು ಉಪನಿಷತ್ತನ್ನು ಮೊದಲು ಮಾಡು ವನು. ಎಲ್ಲರೂ ಜೊತೆಗೆ ಹೇಳುವರು.)

ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ
ವಿಶ್ವಂ ನಾರಾಯಣಂ ದೇವಂ ಅಕ್ಷರಂ ಪರಮಂ ಪ್ರಭುಂ
ವಿಶ್ವತಃ ಪರಮಂ ನಿತ್ಯಂ ವಿಶ್ವಂ ನಾರಾಯಣಂ ಹರಿಂ
ವಿಶ್ವ ಏವೇದಗ್ಂ ಪುರುಷಃ ತದ್ವಿಶ್ವಮುಪಜೀವತಿ
ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಗ್ಂ ಶಿವಮಚ್ಯುತಂ
ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ

ನಾರಾಯಣ ಪರಂಬ್ರಹ್ಮ ತತ್ವಂ ನಾರಾಯಣಃ ಪರಃ
ನಾರಾಯಣ ಪರೋಜ್ಯೋತಿಃ ಆತ್ಮಾ ನಾರಾಯಣಃ ಪರಃ
ಯಚ್ಚಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ
ಅಂತರ್ಬಹಿಶ್ಚತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ
ಅನಂತಮವ್ಯಯಂ ಕವಿಂ ಸಮುದ್ರೇಽಂತಂ ವಿಶ್ವಶಂಭುವಂ
ಪದ್ಮಕೋಶ ಪ್ರತೀಕಾಶಂ ಹೃದಯಂ ಚಾಪ್ಯಧೋಮುಖಂ
ಅಧೋನಿಷ್ಟ್ಯಾವಿತಸ್ತ್ಯಾಂತು ನಾಭ್ಯಾಮುಪರಿ ತಿಷ್ಠತಿ
ಹೃದಯಂ ತದ್ವಿಜಾನೀಯಾತ್ ವಿಶ್ವಸ್ಯಾಯತನಂಮಹತ್
ಸಂತತಗ್ಂ ಸಿರಾಭಿಸ್ತು ಲಂಬತ್ಯಾಕೋಶಸನ್ನಿಭಂ
ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿಂತ್ಸರ್ವಂ ಪ್ರತಿಷ್ಠಿತಂ
ತಸ್ಯ ಮಧ್ಯೇ ಮಹಾನಗ್ನಿಃ ವಿಶ್ವಾರ್ಚಿಃ ವಿಶ್ವತೋಮುಖಃ
ಸೋಗ್ರಭುಗ್ವಿಭಜತ್ ತಿಷ್ಠನ್ನಾಹಾರಮಜರಃ ಕವಿಃ
ಸಂತಾಪಯತಿ ಸ್ವಂದೇಹಂ ಆಪಾದತಲಮಸ್ತಕಂ
ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಃ
ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ
ನೀವಾರ ಶೂಕವತ್ತನ್ವೀ ಪೀತಾಭಾಸ್ಯಾತ್ತನೂಪಮಾ
ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ
ಸಬ್ರಹ್ಮಾಸಶಿವಃ ಸೇಂದ್ರಃ ಸೋಕ್ಷರಃ ಪರಮಸ್ವರಾಟ್

## ಸ್ಥಾನ ೮

**ಪಾಣಿ ನಿಲ್ಲುತ್ತಿದ್ದ ಸ್ಥಾನದಲ್ಲಿ ತಂಗಿ, ಭಾವ, ಅಳಿಯ, ಅವನ ತಮ್ಮ.**

ತಂಗಿ ಏನೇನೋ ಹೇಳುತ್ತಾರೇ? ಅಣ್ಣಯ್ಯ ಬೇರೆ ಇಲ್ಲಿಲ್ಲ. ಅಯ್ಯೋ ನಮ್ಮಣ್ಣಾ ಏನಾದನೋ? ಬೆಳಿಗ್ಯೆ ಇಲ್ಲಿ ಇದ್ದನು. ಇಗ ಇಲ್ಲ ಅಂದರೆ?

ಭಾವ ಏನಾದನು ಅಣ್ಣ? ಕಾರಿಯಪ್ಪ ಹೇಳಿಕಳುಹಿಸಿರಲಿಲ್ಲೆ? ದೇವ ಸ್ಥಾನಕ್ಕೆ ಕರಕೊಂಡು ಹೋದರು ಅಂತ.

ತಂಗಿ ಕರಕೊಂಡು ಹೋದರು ಸರಿ. ಬೇಕಾಯಿತು ಕರಕೊಂಡು ಹೋದರು. ತಿರುಗಿ ಬರಲ್ಲ ಅಂದರೆ?

ಭಾವ ದೇವರೊಳಗೆ ಅಡಗಿ ಹೋದ ಅಂದರಲ್ಲ. ಇನ್ನದಕ್ಕಿಂತ ಏನು ಬೇಕು?

ತಂಗಿ ಏನು ಬೇಕು! ಆಡು ಬೆಳೆದು ತೋಳನ ಪಾಲಾತು, ಅಣ್ಣ ಬೆಳೆದು ಅತ್ತಿಗೆ ಪಾಲಾದ ಅಂದ ಹಂಗೆ. ನಮ್ಮಣ್ಣ ಅತ್ತಿಗೆ ಪಾಲಾಗಲ್ಲ, ಈ ಹಾರೋರ ಪಾಲಾದ. ನಮ್ಮಪ್ಪ ಅಮ್ಮ ಹತ್ತು ಮಕ್ಕಳ ಹೆತ್ತರು. ಇದ್ದ ಇಬ್ಬರಲ್ಲಿ ಅಣ್ಣಯ್ಯ ಮುಗಿದನೇ!

ಭಾವ ಆಯಿತು ಬಿಡು. ಪಾಣ್ಯಪ್ಪ ಪುಣ್ಯ ಮಾಡಿದ್ದ.

ತಂಗಿ ಅಯ್ಯೋ ನಿನ್ನ ಪುಣ್ಯಾ, ಪುಣ್ಯಾ, ಪುಣ್ಯಾ. (ಎಂದು ಅಳುತ್ತ **ಕುಳಿತುಕೊಳ್ಳುವಳು. ಲೋಕಸಾರಂಗನೂ ಕಾರೀದಾಸನೂ ಹೊಳೆಯ ಕಡೆಯಿಂದ ಬರುವರು.)**

ಕಾರೀ ಸ್ವಾಮಿಯವರು ಆಹ್ನಿಕಕ್ಕೆ ಹೊಳೆಗೆ ದಯಮಾಡಿಸಿದ್ದಿರೇನೊ?

ಲೋಕ ಹೌದು.

ಕಾರೀ ಈ ದಿನವೇ ಪಾಣಿಯನ್ನು ಆಳ್ವಾರ್ ಪಟ್ಟಕ್ಕೆ ಏರಿಸಿ ಉತ್ಸವ ನಡೆಸೋಣಾಗುತ್ತೆಂದರು.

ಲೋಕ ಹೌದು. ಊರಲ್ಲಿ ಎಲ್ಲರನ್ನೂ ಬರಹೇಳಿ. ಈ ಉತ್ಸವವನ್ನು ಬಹಳ ವಿಜೃಂಭಣೆಯಿಂದ ನಡೆಯಿಸಬೇಕು.

ಭಾವ (ಕಾರೀದಾಸನಿಗೆ) ಸ್ವಾಮಿ, ಕಾರಿಯಪ್ಪನೋರೆ. ಅಡ್ಡ ಬಿದ್ದೆ.

ಕಾರೀ ದೊಡ್ಡವರಿದಾರಪ್ಪ. ಅವರಿಗೆ ಮೊಕ್ಕು.

ಭಾವ (ಲೋಕಸಾರಂಗನಿಗೆ) ಬುದ್ಧೀ, ಅಡ್ಡಬಿದ್ದೆ.

ಲೋಕ ದೇವರು ನಿಮಗೆ ಒಳ್ಳೆಯದನ್ನು ಮಾಡಲಿ. ಯಾರಿವರು?

ಕಾರೀ ತಾವು ಕಾಣಿರಿ. ಇವರು ತಿರುಪಾಣಿಯ ತಂಗಿ, ಭಾವ, ತಂಗಿಯ ಮಕ್ಕಳು. ಬಹಳ ಒಳ್ಳೆಯ ಜನ.

ಲೋಕ ಸಂತೋಷ.

ಭಾವ ಮಾಸ್ವಾಮಿ, ಅಣ್ಣ ಹೋದ ಅಂತ ಈ ನನ್ನ ಹೆಂಡತಿ ಸುಮ್ಮಕೆ ಅಳತಾಳೆ. ಇದಕ್ಕೇನಾರ ಒಸಿ ಧೈರ್ಯ ಹೇಳ್ರಿ.

ಕಾರೀ ಅಪ್ಪಾ ಧೈರ್ಯ ಹೇಳುವದೇನನ್ನು? ಯಾರಿಗೆ ದೊರಕಬೇಕು ಈ ಹೋಗುಪಾಡು? ಆಳ್ವಾರ್‌ಗಳ ಜೊತೆಗೆ ಆಳ್ವಾರ್ ಆದರೇ ತಿರುಪಾಣಿಯವರು! ಇನ್ನು ಮೇಲೆ ಅವರು ಬರೀ ಪಾಣಿಯಲ್ಲ; ತಿರುಪಾಣಿಯಾಳ್ವಾರು. ಸ್ವಾಮಿಗಳ ಭುಜದ ಮೇಲೆ ಕೂತು ದೇವರ ಹತ್ತಿರ ಹೋದರೇ. ದೇವರ ಜೊತೆಗೆ ಆಳ್ವಾರ್‌ಗಳ ಜೊತೆಗೆ ಸಂಜೆ ಉತ್ಸವದಲ್ಲಿ ಬರುತ್ತಾರೆಯೇ....

ಅಳಿಯ ಅಪ್ಪಾಜಿ, ಮಾವಯ್ಯಾ ಸಂಜೆ ಉತ್ಸವಕ್ಕೆ ಬರೋದಾದರೆ ಈ ಕೋಲಾಟ ಆಗ ಆಡಿ ತೋರಿಸಬಹುದಲ್ಲೆ?

ಭಾವ ಹೌದು ಮಗ. ಎಲೆ ಕೋಲ ಹಾಕಣ್ಣ ಸ್ವಾಮಿಗಳು ನೋಡಲಿ. ಇಲ್ಲಿ ಸ್ವಾಮಿಗಳು, ಅಲ್ಲಿ ದೇವರು. ಆ ದೇವರಾಗೆ ನಮ್ಮ ಪಾಣ್ಯಪ್ಪ. ಹಾಕಲಾ ಕೋಲು: "ಸಖಿ ಬಾರನೇಕೆ ರಂಗಾ." ಹಾಕು. ನಿಮ್ಮವ್ವ ಸ್ವಲ್ಪ ನಗಲಿ.

(ಹುಡುಗರು ಕೋಲು ಹಾಕುವರು)

ಬಾರನೇಕೆ ರಂಗ ಸಖೀ
ಬಾರನೇಕೆ ರಂಗ

ಬಾರನೇಕೆ ನನ್ನ ಮೋಹನಾಂಗ
ಬಾರನೇಕೆ ರಂಗ?

ಬರುತಿಹನೇ, ರಾಧಾ, ಕೃಷ್ಣ
ಬರುತಿಹನೇ ಬಿಡು ಮನದ ವಿಷಾದಾ
ಬರುತಿಹನೇ, ರಾಧಾ.

ಬಾರದಿರಲು ನಲ್ಲಾ ನಾ
ಸೊರಗುವೆನೆಂಬುದನವನೇ ಬಲ್ಲಾ ;
ಅರಿತೂ ಬರಲಿಲ್ಲಾ ಎನ್ನನು
ಕೃಷ್ಣನೇಕೆ ಒಲ್ಲಾ ?

ಬರುತಿಹನೇ ರಾಧಾ, ಕೃಷ್ಣ
ಬರುತಿರುವನು ಕೇಳೇ, ಯಶೋದಾ
ನಂದನ, ನಿನ್ನೊಳಗಿಲ್ಲ ವಿರೋಧಾ,
ಬಂದನು ನೋಡೇ, ಮಾಣು ವಿಷಾದಾ.

ಸಖಿ ನೀನೇ ಬಲ್ಲೆ, ಅವನಿಲ್ಲದೆ
ತೃಣ ಸುಖ ನಾನೊಲ್ಲೇ ;
ಜಾಜಿಮಲ್ಲಿಗೆ ಮೊಲ್ಲೆ ಅವನಿಲ್ಲದೆ
ಎನಗಿವು ಹೂವಲ್ಲೇ ;
ಬೆಳುದಿಂಗಳಿನಲ್ಲೇ ಈ ಮೆಯ್
ಸುಡುತಲಿರುವುದಲ್ಲೇ ;
ಸಖಿ ಇದನವನೂ ಅರಿತಿಹನಲ್ಲೇ
ಕೃಷ್ಣನ ಮನಸ್ಸಿನ್ನೆಷ್ಟು ಕಲ್ಲೇ.

ಪ್ರಿಯೆಯ ಮನದ ನೋವಾ ಹರಿ
ನೋಡಿ ನೊಂದ ದೇವಾ ;
ಬೆಳುದಿಂಗಳು ಹೂವಾ ಪೊರೆವಂತೆ
ಕರುಣೆಯಾ ಸ್ವಭಾವಾ ;
ಪ್ರಿಯೆಯಾತ್ಮದ ಕಾವಾ ತಂಪಿಸೆ
ಉಳಿಸುತವಳ ಜೀವಾ,

ಸಖಿಯ ವೇಷವನು ತೊರೆಯುತ ದೇವಾ
ಪ್ರಿಯೆಗೆಸಗಿದನು ಪ್ರೇಮ ಸೇವಾ.

ರಂಗ ನಿನ್ನ ಆ ಪ್ರೇಮದ ರಾಣಿ
ರಾಧೆಯ ಪಾಡನು ಹಾಡಿದೆ ಪಾಣಿ;
ಅವಳಂದಿನಗತಿ ಇಂದೆನ್ನಾಣೆ
ಎನಗೆ ಒದಗಿತೋ ಭೇದವ ಕಾಣೆ.

ಬಾರೊ ಬೇಗ ರಂಗಾ ಬಾ
ಬೇಗ ಮಂಗಳಾಂಗ
ಬಂದು ಬೇಗದಲಿ ಹೇ ವಿಹಂಗ ತು-
ರಂಗ ಪರಿಹರಿಸು ಈ ಭವಭಂಗ.

ಲೋಕ ರಂಗನಾಥನು ತನ್ನ ಭಕ್ತನ ಮೊರೆಯನ್ನು ಕೇಳಿದನು. ಕೃಷ್ಣನು ರಾಧೆಯನ್ನು ಕರೆದು ಅಪ್ಪಿಕೊಂಡನು. ಅಣ್ಣಾ, ಸಂಜೆ ಉತ್ಸವದ ವೇಳೆ ಬಂದು ನಿಮ್ಮ ಮಾವನ ಮುಂದೆ ಈ ಆಟವನ್ನು ಆಡಿ. ಜನರು ನೋಡಲಿ, ಕೇಳಲಿ. ತಿರುಪಾಣಿಯವರ ಮಹಿಮೆ ಅವರಿಗೆ ಇನ್ನಷ್ಟು ತಿಳಿಯಲಿ.

ಭಾವ ಅಪ್ಪಣೆ. ಬಾ ಹೈದ, ಮಂಗಳ ಹಾಡೊ.

ಅಳಿಯ (ಕುಣಿಯುತ್ತ ಹಾಡುವನು.)

ಜಯ ಗೋವಿಂದ ಜಯ ಗೋವಿಂದ
ಜಯ ಸಿರಿ ರಂಗ ಅಸುರಕುಲಭಂಗ
ಜಯ ಮಂಗಳಾಂಗ ಕರುಣಾಪಾಂಗ

(ಹೀಗೆ ಆ ಹಾಡನ್ನು ಕೊನೆಯತನಕ ಹಾಡಿ ಕುಣಿಯುವರು)

703—46. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

## ಮೊದಲನೆಯ ಮುದ್ರಣದ ಮುನ್ನುಡಿ

ಕಾಕನಕೋಟೆ ಮೈಸೂರು ಡಿಸ್ಟ್ರಿಕ್ಟಿನ ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ಒಂದು ಸ್ಥಳ. ಈ ಪ್ರಾಂತ ಮಲೆನಾಡು. ಇದರ ಸುತ್ತಿನ ಕಾಡನ್ನು ಕಾಕನಕೋಟೆ ಕಾಡು ಎಂದು ಕರೆಯುತ್ತಾರೆ. ಕಾಡು ಕುರುಬರೆಂಬ ಜನಕ್ಕೆ ಇದೂ ನೆರೆಯ ಕಾಡುಗಳೂ ವಾಸಸ್ಥಾನಗಳು. ನಾನು ಈ ಪ್ರಾಂತದಲ್ಲಿ ಹತ್ತು ವರುಷದ ಹಿಂದೆ ಸುತ್ತಿದಾಗ ಕಾಕ ಯಾರು ಕೋಟೆ ಎಲ್ಲಿ ಹೆಗ್ಗಡೆ ದೇವಣ್ಣ ಯಾರು ಎಂದು ಮುಂತಾಗಿ ತೋರಿದ ಪ್ರಶ್ನೆಗಳಿಗೆ ಉತ್ತರವಾಗಿ ಒಂದು ಕತೆ ಬರೆಯಬೇಕೆಂದು ಯೋಚಿಸಿದೆನು. ಆರು ವರುಷದ ಹಿಂದೆ ಇತ್ತ ಹೋಗಿದ್ದಾಗ ಕಾಡು ಕುರುಬರ ಮೂಲಪುರುಷನೊಬ್ಬನ ಮಾತನ್ನು ಕೇಳಿ ಕರಿಹೈದ ಎಂಬ ಒಂದು ಕಾವ್ಯವನ್ನು ಬರೆಯಬೇಕೆಂದು ತೋರಿತು. ಆಮೇಲೆ ಈ ಜನರ ರೀತಿ ನೀತಿಯನ್ನು ಕುರಿತು ಒಂದು ಲೇಖನ ಬರೆಯುವ ಯೋಚನೆಮಾಡಿದೆನು. ಇದೆಲ್ಲ ಕಲೆತು ಕಳೆದ ಫಾಲ್ಗುಣದಲ್ಲಿ ಪ್ರಸ್ತುತ ನಾಟಕವಾಗಿ ಪರಿಣಮಿಸಿತು. ಅದನ್ನು ಪರಿಷ್ಕರಿಸಿ ಈಗ ಪ್ರಕಟಿಸುವುದಾಗಿದೆ.

ನಾಟಕಕಾರನು ಪ್ರಸಿದ್ಧವಾದ ಇತಿವೃತ್ತವನ್ನು ವಸ್ತುವಾಗಿ ತೆಗೆದುಕೊಳ್ಳಬೇಕೆಂದು ನಮ್ಮ ಪೂರ್ವಿಕರ ಸೂತ್ರವೊಂದಿದೆ. ಇದರ ಕತೆ ಹಾಗೆ ಪ್ರಸಿದ್ಧ ಇತಿವೃತ್ತವಲ್ಲದ್ದರಿಂದ ಎರಡು ಮಾತಿನಲ್ಲಿ ಇದರ ಕಲ್ಪನೆ ಏನೆಂದು ತಿಳಿಸಬಹುದು. ಈಗ ಕಾಡುಕುರುಬರೆಂದು ನಮಗೆ ಕಾಣುವ ಜನ ಹಿಂದೆ ಇನ್ನೂ ಹೆಚ್ಚು ಸಂಖ್ಯೆಯದಾಗಿತ್ತೆಂದೂ ಇವರದೊಂದು ಸಂಸ್ಕೃತಿಯಿತ್ತೆಂದೂ ಶ್ರೀಮನ್ಮಹಾರಾಜ ಶ್ರೀ ರಣಧೀರ ಕಂಠೀರವ ನರಸರಾಜರ ಆಳ್ವಿಕೆಯಲ್ಲಿ ಈ ಜನರಿಗೂ ಹೆಗ್ಗಡದೇವನ ಕೋಟೆಯ ಹೆಗ್ಗಡೆಗೂ ಇವರು ಕೊಡಬೇಕಾದ ಕಪ್ಪದ ವಿಷಯದಲ್ಲಿ ವಿವಾದ ಬಂದಿತೆಂದೂ ಈ ಜನರ ಮುಖಂಡನಾದ ಕಾಚನೆಂಬವನು ಮೈಸೂರಿನಲ್ಲಿದ್ದಿದ್ದು ರಾಜರನ್ನು ಬಲ್ಲವನಾಗಿದ್ದ ಕಾರಣದಿಂದ ಅವರ ಸಹಾಯವನ್ನು ಬೇಡಿ ತನ್ನ ಜನವನ್ನು ಆ ಕಷ್ಟದಿಂದ ಪಾರುಮಾಡಿಸಿದ

ನೆಂದೂ ಇಲ್ಲಿ ಕಥಾವಸ್ತು. ಇದನ್ನು ಇತಿಹಾಸದ ಆಧಾರದಿಂದ ಬರೆದಿಲ್ಲ. ಇಲ್ಲಿ ಇತಿಹಾಸದ ವ್ಯಕ್ತಿ ರಣಧೀರ ರಾಜರಲ್ಲದೆ ಮತ್ತೊಬ್ಬರಿಲ್ಲ. ಹೀಗೆಂದಮಾತ್ರಕ್ಕೆ ಇದನ್ನು ಒಪ್ಪಿಕೊಂಡ ಒಂದು ತಪ್ಪೆಂದಾಗಲಿ ಕೊಚ್ಚಿದ ಜಂಭವೆಂದಾಗಲಿ ಯಾರೂ ಎಣಿಸಬಾರದೆಂದು ನಾನು ಪ್ರಾರ್ಥಿಸುತ್ತೇನೆ.

ನಮ್ಮಲ್ಲಿ ಕತೆ ಕಾವ್ಯ ನಾಟಕ ಹೆಚ್ಚಾದುವೆಂದು ಬಲ್ಲ ಹಿರಿಯರು ಕೆಲವರ ಅಭಿಪ್ರಾಯ. ಇನ್ನು ಕೆಲವರ ಮಾತಿನಲ್ಲಿ ನನ್ನ ಪುಸ್ತಕಗಳ ಸಂಖ್ಯೆ ಹೆಚ್ಚಾಯಿತೆಂಬ ಅಭಿಪ್ರಾಯದ ಧ್ವನಿ ಕಂಡಿದೆ. ಎಲ್ಲ ಹಿರಿಯರೂ ಹೀಗೆ ಅಭಿಪ್ರಾಯಪಡಲಾರರೆಂದು ನಮ್ಮಂತವರು ನಿರೀಕ್ಷಿಸಬಹುದು. ಅದು ಹೇಗಾದರೂ ಇರಲಿ. ಒಂದೊಂದು ಪುಸ್ತಕವನ್ನು ಒಂದೊಂದು ತಪ್ಪು ಎಂದ ಕಾಲಕ್ಕೂ ನನ್ನ ಪುಸ್ತಕಗಳ ವಿಷಯವಾಗಿ ಮುಖ್ಯವಾದ ಒಂದು ಸಮಾಧಾನವನ್ನು ಹೇಳಬಹುದು. ಈ ನನ್ನ ತಪ್ಪು ಎಲ್ಲ ಸಣ್ಣವು; ಇವುಗಳಲ್ಲಿ ನೂರು ಪುಟದಷ್ಟು ಇರುವವು ಅಪೂರ್ವ. ಈ ಕಾರಣದಿಂದಲೂ ಇಂತ ಪುಸ್ತಕಗಳು ಹೆಚ್ಚಾದುವೆಂಬವರು ಕೆಲವರಿರುವರಂತೆ ಇನ್ನೂ ಸಾಲವು ಎಂಬವರು ಕೆಲವರು ಇರಬಹುದೆಂಬ ಕಾರಣದಿಂದಲೂ ನಾನು ಶಂಕೆಯುಳಿದು ಈ ನಾಟಕವನ್ನು ಅಚ್ಚುಹಾಕಿಸುತ್ತಿದೇನೆ.

ಎಲ್ಲ ನಾಟಕದಂತೆ ಈ ನಾಟಕವಾದರೂ ರಂಗದಲ್ಲಿ ಕಾಣುವವರೆಗೆ ಪೂರ್ಣವಾಗಲಾರದು. ಆದರೆ ಈಗಣ ನಮ್ಮ ಸ್ಥಿತಿಯಲ್ಲಿ ಇಂಥ ಕೃತಿಯನ್ನು ಆಡಿ ತೋರಿಸುವ ಬಗೆಯ ಸೌಕರ್ಯಗಳು ಕಡಮೆ. ಪರಿಸ್ಥಿತಿ ಎಂದಿಗೂ ಹೀಗೆಯೇ ಇರಲಾರದು ಎಂಬ ಆಸೆ ನಮ್ಮೆಲ್ಲರ ಮನಸ್ಸಿನಲ್ಲೂ ಇದ್ದೇ ಇದೆ. ರಂಗದಲ್ಲಿ ನೋಡುವುದಕ್ಕಾಗದಿದ್ದರೂ ಇದನ್ನು ಓದಿ ನಮ್ಮ ಜನಕ್ಕೆ ಸ್ವಲ್ಪವಾದರೂ ಸುಖಕಾಣಲೆಂದು ನಾನು ಬಹು ಆತುರದಿಂದ ಅಪೇಕ್ಷಿಸುತ್ತೇನೆ.

ಈಶ್ವರ ಸಂ॥ ಪುಷ್ಯ
ಬಹುಳ ದ್ವಾದಶೀ ಶುಕ್ರವಾರ

**ಶ್ರೀನಿವಾಸ**

# ಪಾತ್ರ, ಸ್ಥಳ, ಕಾಲ, ಇವುಗಳ ವಿವರ

| | |
|---|---|
| ಕಾಚ . . . . | ಕಾಡುಕುರುಬರ ಮುಖಂಡ. ಹುಡುಗನಾಗಿ ಮೈಸೂರಿಗೆ ಹೋಗಿದ್ದು ಪ್ರಾಯದಲ್ಲಿ ಕೆಲವು ವರುಷ ಹಿಂದಕ್ಕೆ ಬಂದಿದ್ದು ಮರಳಿ ಮೈಸೂರಿಗೆ ಹೋಗಿ ಮಧ್ಯವಯಸ್ಸಿನಲ್ಲಿ ಮತ್ತೆ ತನ್ನ ಜನವನ್ನು ಬಂದು ಸೇರಿ ಅವರ ಬುದ್ಧಿವಂತ, ದೇವರಗುಡ್ಡ ಆಗಿದಾನೆ. |
| ಮಾಚನಾಯಕ . . . . | ಹೆಗ್ಗಡದೇವನಕೋಟೆಯ ಹೆಗ್ಗಡೆಯ ದಲಾಯಿತ. |
| ಕರಣೀಕ . . . . | ಹೆಗ್ಗಡೆಯ ಮಂತ್ರಿ. |
| ಗೌಡ . . . . | ಕಾಡುಕುರುಬರ ಬೂಡು(ಹಳ್ಳಿ)ಗಳ ಹಿರಿಯ. |
| ತಮ್ಮಗೌಡ . . . . | ಗೌಡನಿಗೆ ಎರಡನೆಯವನಾದ ಕಾಡುಕುರುಬರ ಹಿರಿಯ. |
| ಹೆಗ್ಗಡೆ . . . . | ಹೆಗ್ಗಡೆದೇವನಕೋಟೆಯನ್ನು ಕಟ್ಟಿದ ಹೆಗ್ಗಡೆಯಿಂದ ಮೂರನೆಯ ತಲೆಯ ಹೆಗ್ಗಡೆ. |
| ಚಿಕ್ಕಯ್ಯ . . . . | ಹೆಗ್ಗಡೆಯ ಮಗ. |
| ನಾಕ . . . . | ಕುರುಬರ ಪುಂಡ (ತರುಣ) |
| ಮೊಲ್ಲೆ . . . . | ಕಾಚನ ಮಗಳು. |
| ಮೋನಿ . . . . | ಕಾಚನ ತಂಗಿಯ ಮಗಳು. ನಾಕನ ಹೆಂಡತಿ. |
| ಮೋನ . . . . | ಮೋನಿಯ ಅಣ್ಣ. |
| ಮಾವ . . . . | ಕಾಚನಿಗೆ ಮೊದಲು ಈ ಜನಕ್ಕೆ ಬುದ್ಧಿವಂತ ದೇವರಗುಡ್ಡ ಆಗಿದ್ದವನು. ಇವನು ಬಿಟ್ಟಿದ್ದ ಹೆಣ್ಣನ್ನು ಕಾಚನು ಹರೆಯದಲ್ಲಿ ಬಂದಿದ್ದಾಗ ಕೂಡಿದ್ದನು. ಆ ಸಂಬಂಧದ ಮಗುವೇ ಮೊಲ್ಲೆ. |
| ರಣಧೀರ . . . . | ಮೈಸೂರ ಮಹಾರಾಜ ರಣಧೀರ ಕಂಠೀರವ ನರಸರಾಜ ಒಡೆಯರು. |
| ಶಿಂಗಾಜೆಟ್ಟಿ . . . . | ಅರಸನ ಮೈಗಾವಲ ಜೆಟ್ಟಿ. |

ಕುರುಬ ಹುಡುಗಿಯರು; ಹುಡುಗರು; ಮುದುಕರು;
ತಮಟೆಯ ಮುದುಕ ಒಬ್ಬ.

**ಸ್ಥಳ.**—ಕಾಕನಕೋಟೆಯಲ್ಲಿ ಹೆಗ್ಗಡೆ ಬಂದು ಇಳಿದಿರುವ ಪಾಳ್ಯ ಒಂದು; ಅದರಿಂದ ಸ್ವಲ್ಪ ದೂರದಲ್ಲಿರುವ ಕುರುಬರ ಬೂಡು (ಹಳ್ಳಿ) ಒಂದು.

**ಕಾಲ.**—ಮಹಾರಾಜ ರಣಧೀರ ಕಂಠೀರವ ನರಸರಾಜರು ಆಳುತ್ತಿದ್ದ ಕಾಲ.

**ಕಥಾವಸ್ತು** ಮೊದಲಿಂದ ಕೊನೆಯವರೆಗೆ ಸುಮಾರು ಹದಿನೈದು ದಿನದಲ್ಲಿ ನಡೆಯತಕ್ಕದ್ದು.

# ಕಾಕನಕೋಟೆ

## ೧

[ಕಾಕನಕೋಟೆಯ ಕಾಡಿನಲ್ಲಿ. ಹೆಗ್ಗಡೆ ದೇವಣ್ಣನ ಪಾಳೆಯದ ಮುಂದೆ.]

ರಾಜ (ಹಾಡುತ್ತಿದಾನೆ)

ಬೆಟ್ಟದಾ ತುದಿಯಲ್ಲಿ ಕಾಡುಗಳ ಎದೆಯಲ್ಲಿ
ಕಪಿನೀಯ ನದಿಯೊಲ್ಲಿ ಉಗುತಿರುವುದಲ್ಲಿ;
ಎಲ್ಲಿ ನೋಡ ನೋಡ ಕರ್ರ ಕಾರುವ ಮೋಡ
ಪಡೆಗೂಡುವುದು ಗಾಡ ಒಟ್ಟೊಟ್ಟ ಅಲ್ಲಿ;
ಎಲ್ಲಿ ಕೊಂಬಿನ ಸಲಗ ಹೆಣ್ಣಾನೆ ಮರಿ ಬಳಗ
ಬೆಳುತಿಂಗಳಿನ ತಳಗ ನಡೆಯುವುದು ಅಲ್ಲಿ;
ಯಾವಲ್ಲಿ ಸಾರಂಗ ಕೆಚ್ಚು ಕೋಡಿನ ಸಿಂಗ
ನೋಡುತ ನಿಂತ್ಹಂಗ ನಿಲ್ಲುವುದು ಅಲ್ಲಿ;
ಎಲ್ಲಿ ಎರಳೆಯ ಹಿಂಡು ಹುಲಿಯ ಕಣ್ಣನು ಕಂಡು
ಹೆದರಿ ಹಾರುವ ದಂಡು ಚೆಲ್ಲುವುದು ಅಲ್ಲಿ;
ಗಿಳಿ ಗೊರವ ಕೋಗೀಲೆ ಹಾರು ಹಕ್ಕಿಯ ಮಾಲೆ
ಹಾಡುತಿಪ ದನಿಮೇಲೆ ದನಿಯೇರಿ ಎಲ್ಲಿ;
ಎಲ್ಲಿ ಏಕಾಏಕಿ ಗಂಡು ನವಿಲಿಯ ಕೇಕಿ
ಬೋರಗಲ್ಲಿಗೆ ತಾಕಿ ಗೆಲ್ಲುವುದು ಅಲ್ಲಿ;
ಹೆಜ್ಜೇನು ಯಾವಲ್ಲಿ ಇದ್ದಲ್ಲೆ ಹೂವಲ್ಲಿ
ಕದ್ದೊಂದು ಮೇವಲ್ಲಿ ತಣಿದಿರುವುದಲ್ಲಿ;
ದಿನದಿನಾ ಸಂಪಂಗಿ ಇರುವಂತಿ ಮಲ್ಲಂಗಿ
ಮೊಲ್ಲೆ ಅದರ ತಂಗಿ ಅರಳುವುದು ಎಲ್ಲಿ;
ಯಾವಲ್ಲಿ ಜಾಲಾರಿ ಎದೆಯ ಕಂಪನು ಕಾರಿ
ತನ್ನ ತಾಣವ ಸಾರಿ ಬಾ ಎಂಬುದಲ್ಲಿ;

ಯಾವಲ್ಲಿ ಹೆಬ್ಬಲಸು ಕೈಗೆ ಕಾಲಿಗೆ ಗೊಲಸು
ಅಂತ ಹಣ್ಣನು ಹುಲುಸು ಹೊತ್ತಿರುವುದಲ್ಲಿ;
ಎಲ್ಲಿ ಕರಿ ಸಿರಿಗಂಧ ಮರ ಬೆಳೆದು ತಾ ಮುಂದ
ಮಾದೇಶ್ವರಗೆ ಚೆಂದ ಮೆಚ್ಚುವುದು ಅಲ್ಲಿ

ಮಾಚಣ್ಣ (ಬಂದು) ಎಲಾ ಯಾರೋ ನೀನು?

ಕಾಚ ಬುದ್ಧಿ ನಾ ಕಾಚ.

ಮಾಚಣ್ಣ ಏನೋ ಕಾಚ ಅಂದರೆ.

ಕಾಚ ನಮ್ಮಲ್ಲಿ ಆದೊಂದು ಹೆಸರು ಬುದ್ಧಿ, ಮಾಚ, ರಾಚ, ಅನ್ನೋಹಂಗೆ.

ಮಾಚಣ್ಣ ಎಲಾ ಎಷ್ಟೋ ಮಾತು? ನನ್ನ ಮಾಚ ಅಂತೀಯ?

ಕಾಚ ಬುದ್ಧಿ ದಣೀ ಹೆಸರು ಮಾಚ ಒಡೇರು ಅಂತಲಾ?

ಮಾಚಣ್ಣ ಒಡೇರು ಅಂತ ಯಾರು ಹೇಳಿದರೊ? ನಾ ಹೆಗ್ಗಡೆಗಳ ದಳಾಯಿತ ಮಾಚನಾಯಕ ಅಂತ ಕಾಣೆಯಾ?

ಕಾಚ ನಾಯಕರೆ ನಾ ಒಂದು ಕಾಡು ಕೋಳಿ; ಊರ ಹುಂಜನ ನಾ ಏನು ಬಲ್ಲಿ?

ಮಾಚಣ್ಣ ಅಲ್ಲವೊ ಅಲ್ಲಿ ಹೆಗ್ಗಡೆಗಳು ಗೌಡರು ಮಾತನಾಡುತ ಇದ್ದರೆ ಇಲ್ಲಿ ನೀನು ಪದಾ ಹಾಡುತಾ ಇದೀಯಲ್ಲೊ!

ಕಾಚ ಇಲ್ಲಿ ನಾ ಹಾಡಿದರೆ ಅಲ್ಲಿ ಅವರಿಗೆ ಕೇಳಿಶ್ಯಾತ ನಾಯಕರೆ.

ಮಾಚಣ್ಣ ಯಾಕೊ ಮಗನೆ ನೀ ಬಹಳ ಮೆಲ್ಲಗೆ ಹಾಡುತಿದ್ದೀ ಅಂತ ತಿಳಿದ್ಯಾ? ನಾ ಅಲ್ಲಿ ಬಾಗಲತಾವ ನಿಂತಿದ್ದರೆ ಏನೋ ರಂಪ ಕೇಳಿಸಿತು. ಏನು ಇದು ಎಂತ ಬಂದರೆ ಇಲ್ಲಿ ನೀ ಹಾಡುತಿದೀಯಾ.

ಕಾಚ ರಂಪ ಕೇಳಿಸಿದ್ದು ನಾ ಹಾಡಿದ್ದಲ್ಲವಾದೀತು, ನಾಯಕರೆ.

ಮಾಚಣ್ಣ ಇನ್ನೇನು?

ಕಾಚ ಗೌಡುಗಳೊ ಹೆಗ್ಗಡೆಗಳೊ ಕೋಪದಲ್ಲಿ ಮಾತಾಡಿದ್ದಿರ ಬೇಕು.

ಮಾಚಣ್ಣ — ಎಲಾ ನೀನು ಏನು ಪೂರಾ ಬುದ್ಧಿವಂತನ ಹಂಗಿದ್ದೀಯಾ!

ಕಾಚ — ಹೌದು ನಾಯಕರೆ, ನನ್ನ ಹಂಗೇ ಕರೀತಾರೆ.

ಮಾಚಣ್ಣ — ಏನು ಬುದ್ಧಿವಂತಾ ಅಂತ?

ಕಾಚ — ಹೌದು ನಾಯಕರೆ ನಮ್ಮ ಹಾಡೀಗೆ ನಾನೇ ಬುದ್ಧಿವಂತ. ನಿಮ್ಮ ಊರಾಗೂ ಒಬ್ಬ ಬುದ್ಧಿವಂತ ಇರಬೇಕಲ್ಲ.

ಮಾಚಣ್ಣ — ಇದಾನೆ; ಅಂದರೆ ಅವನು ನಿನಗೆ ಸಮ ಆಗೋದಿಲ್ಲ.

ಕಾಚ — ಯಾಕ ನಾಯಕರೆ ಅವನಿಗೆ ಹಾಡೋಕೆ ಬರೋಲ್ಲೆ?

ಮಾಚಣ್ಣ — ಎಲಯ್ಯ ಸುಮ್ಮನಾಗು. ಕರಣೀಕರು ಬಂದರು.

(ಕರಣೀಕ, ಗೌಡರು, ಬರುವರು)

ಕರಣೀಕ — ಏನಯ್ಯ, ಗೌಡರೆ, ಹೆಗ್ಗಡೆಗಳು ಮಾಡಿದ ಅಪ್ಪಣೆ ತಿಳಿಯಿತೊ?

ಗೌಡ — ತಿಳೀತು, ಒಡೆಯ.

ಕರಣೀಕ — ತಪ್ಪೀರಿ ಜೋಕೆ. ಎಂಟು ಊರಿನ ಕಡೆಯಿಂದ ಬರುವ ಅರಮನೆ ಕಾಣಿಕೆ ನೇರವಾಗಿ ಹೆಗ್ಗಡೆಗಳ ಕೋಟೆಗೆ ಬರಬೇಕು. ಅದನ್ನು ತರುವುದು ನಿಮ್ಮ ಹೊಣೆ. ಕಾಣಿಕೆ ಸೇರದೆ ಇದ್ದರೆ ದೊರೆಗಳು ಕಿಡಿ ಕಿಡಿ ಆಗುತಾರೆ. ಅವರೇನು ಕೊಂಚದವರಲ್ಲ. ರಣಧೀರರು ಎಂತ ಹೆಸರಾಗಿದಾರೆ ತಿಳೀತೊ?

ಗೌಡ — ಹೆಗ್ಗಡೆಗಳ ಮಾತು ದೊರೆಗಳ ಮಾತು ಹೇಳುತಿದೀರ ಸರ್ಯೆ. ನಮ್ಮ ಮಾತೂ ಹೇಳಬೇಕೊ ಅಲ್ಲೊ ಕರಣೀಕರು.

ಕರಣೀಕ — ಅದೆಲ್ಲಾ ಆಗೋಲ್ಲ. ಇದೇ ಕೊನೇ ಮಾತು.

ಕಾಚ — ಅದ್ಯಾಕ ನನ್ನೊಡೆಯ ಹಂಗಂತೀರ? ಜೀವ ಇರಬೇಕಾದರೆ ಇದನ್ಯಾಕ ಕೊನೇ ಮಾತು ಅಂತೀರ?

ಕರಣೀಕ — ಯಾರಯ್ಯ, ಇವನು?

ಗೌಡ — ಮಾಸೋಮಿ, ಅವನು ನಮ್ಮೂರ ಬುದ್ಧಿವಂತ.

ಕರಣೀಕ — ಲೋ ಬುದ್ಧಿವಂತ, ನಿನ್ನ ಮಾತು ನಿಮ್ಮೂರಾಗೆ ಆಡು. ಇಲ್ಲಿ ನಮ್ಮ ಮಾತಿಗೆ ಬರಬೇಡ.

ಕಾಚ — ಕೊನೇ ಮಾತಾಗ ಬ್ಯಾಡ ಅಂದಿ ಬುದ್ದಿ. ಕೊನೇ ಮಾತಾಗೋದೆ ನಿಮಗೆ ಚಂದ ಅಂದರೆ ಹಂಗೆ ಆಗಲೇಳಿರ. ಅಮ್ಮಾವರ ತಾತಿಬಲ ಎಷ್ಟೊ ಅಷ್ಟೆ ಆಯಿತು.

ಕರಣೀಕ — ಯಾರೋ ಇವ ಬಂದಿರೋನು ಅಪಶಕುನದ ಹಕ್ಕಿ? ಎಲಯ್ಯ ಮಾಚಣ್ಣ ಇವನ್ನ ಅತ್ತ ಒಯ್ಯಬಾರದೇ?

ಮಾಚಣ್ಣ — ಲೋ ಬುದ್ದಿವಂತಣ್ಣ, ನಡೀ ಅತ್ತಲಾಗಿ (ಎಂದು ಅವನನ್ನು ಬೇರೆ ಕಡೆಗೆ ದೂಡಲು ನೋಡುವನು).

ಕಾಚ — (ಅವನಿಂದ ತಪ್ಪಿಸಿಕೊಂಡು) ನನ್ನ ಮುಟ್ಟಬ್ಯಾಡಿರ, ಊರ ಕುರುಬರು ಮುಟ್ಟಿದರೆ ನಾವು ಕಾಡಿನೋರು ಮಿಾಯಬೇಕಾಗುತದೆ. ಸಾಯೋದು ಬೇಡ ಅಂದರೆ ಕೋಪಮಾಡುತಾರೆ ಕರಣೀಕರು. ಅವರಿಷ್ಟ ಇದ್ದಂಗೆ ಆಗಲಿ ಬಿಡಿರ (ಎಂದು ಬಾಯಿಗೆ ಕೈ ಅಡ್ಡ ಇಟ್ಟುಕೊಂಡು ತಾನು ಮಾತಾಡುವುದಿಲ್ಲವೆಂದು ತೋರಿಸುವನು).

ಕರಣೀಕ — ಏನಯ್ಯ, ಗೌಡರೆ?

ಗೌಡ — ನನ್ನೊಡೆಯ.

ಕರಣೀಕ — ನಾವು ಹೇಳಿದಹಂಗೆ ಮಾಡಿಬಿಡಬೇಕು.

ಗೌಡ — ನಾವು ಮಾಡಿದರೂ ಮಾಡ್ಯೇವು ಬುದ್ದಿ, ಆ ಕಾಕನಿಗೆ ಯಾರು ಸಮ್ಮತಿಪಡಿಸೋರು?

ಕರಣೀಕ — ಕಾಕ ಗೀಕ ನಮಗೆ ತಿಳಿಯದು. ನಿಮ್ಮ ಕಡೆಯಿಂದ ನಮಗೆ ಬರೋ ಕಾಣಿಕೆ ಸರಿಯಾಗಿ ಸಂದಾಯವಾಗಬೇಕು. ಇದು ನಿಮ್ಮ ಭಾರ.

ತಮ್ಮಗೌಡ — ಬಾರ ದಿಟ ನನ್ನೊಡೆಯ.

ಗೌಡ — ನೀವು ಬಂದು ನಮ್ಮೂರಾಗೆ ಸಂದಾಯಮಾಡಿಕೊಳ್ಳಿರ, ಕೊಟ್ಟುಬಿಡುತೀವಿ.

ಕರಣೀಕ — ಅದೇನು ಮಾತು? ನೀವೇ ತಂದರೆ ಆಗದು ಯಾಕೆ?

ಗೌಡ — ನೀವು ಬಂದರೆ ನಮ್ಮಮೇಲೆ ತಪ್ಪಿಲ್ಲ. ಬಂದರು ಕೊಟ್ಟವಿ ಅಂತೀವಿ. ನಾವೇ ತಂದರೆ ಕಾಕ ನಮ್ಮಮೇಲೆ ತಪ್ಪು ಹಾಕುತಾನೆ. ಅವರಿಗೆ ಕೊಟ್ಟದ್ದು ನಿಮ್ಮ ಇಷ್ಟ, ನೀವೇ ಕೊಟ್ಟರಿ, ನನಗೂ ಕೊಡಿ, ಅಂತಾನೆ. ಎರಡುಸಲ ಹೆಂಗೆ ಕೊಡೋಕಾಗತದೆ?

ಕರಣೀಕ — ಅವನಿಗೆ ಕೊಡಬೇಡಿ.

ತಮ್ಮಗೌಡ — ನನ್ನೊಡೆಯ ನಿಮಗಾದರೆ ನಾವು ಕೊಡೋದು ನೀವು ತಗೋಳೋದು ಉಂಟು. ಕಾಕನಿಗೆ ನಾವು ಕೊಡಬೇಕಾದ್ದೆ ಇಲ್ಲ. ಅವನೇ ತಕೋತಾನೆ.

(ಹೆಗ್ಗಡೆ ಬರುತ್ತಾನೆ; ಅವನ ಜೊತೆಗೆ ಮಗ ಚಿಕ್ಕಯ್ಯ)

ಕರಣೀಕ — ಹೆಗ್ಗಡೆಗಳು ಬಂದರು.

ಹೆಗ್ಗಡೆ — ಏನು ಕರಣೀಕರೆ ಇನ್ನೂ ಮಾತನಾಡತಲೇ ಇದೀರಿ.

ಕರಣೀಕ — ಈ ಮಾತು ಮುಗಿಯುವ ಹಾಗೆ ಕಾಣಲಿಲ್ಲ ಒಡೆಯರೆ. ಕಾಕನ್ನ ಒಪ್ಪಿಸೋಕೆ ಆಗೋಲ್ಲ, ನೀವೇ ಬಂದು ಕಂದಾಯ ತಕ್ಕೊಂಡು ಹೋಗಿ, ಅಂತಾರೆ ಇವರು. ಇವರೇ ತಂದು ಕೊಟ್ಟರೆ ಅವನಿಗೆ ತಿರಗಾ ಕೊಡಬೇಕಾಗತದೆ ಅಂತಾರೆ. ದ್ಯಾವಣ್ಣ ಹೆಗ್ಗಡೆಗಳು ಕೋಟೆ ಕಟ್ಟಿ ಅರವತ್ತು ವರುಷ ಆಯಿತು; ಈಗ ಹೊಸದಾಗಿ ಇಲ್ಲಿಗೇ ಬಂದು ಕಾಣಿಕೆ ತಕ್ಕೊಳ್ಳಿ ಅಂತಾರೆ.

ಹೆಗ್ಗಡೆ — ಬಂದೇ ತಕ್ಕೊಂಡರೆ?

ಕಾಚ — ಅದ ನೋಡೋಣ ಅಂತಾನೆ ಕಾಕ.

ಕರಣೀಕ — ಎಲಾ ಇವನ್ಯಾರೊ?

ಕಾಚ — ಬುದ್ದಿ ನಾ ಕಾಚ.

ಕರಣೀಕ — ಎಲಾ ಮುಚ್ಚು ಬಾಯಿ. ಹೆಗ್ಗಡೆಗಳು ಮಾತಾಡುವಾಗ ಮಧ್ಯೆ ಬಾಯಿಹಾಕಬೇಡ.

ಕಾಚ — ಮಾತು ಅಂತನ್ನೋದು ತಣಿಗೆ ಹಿಟ್ಟಾಯಿತು ಗೌಡರೆ. ದೊಡ್ಡನಾಯಿ ತಿನ್ನತಿರಬೇಕಾದರೆ ಚಿಕ್ಕದು ನೋಡತಾ ಇರಬೇಕು.

ಹೆಗ್ಗಡೆ — ಇವನ್ಯಾರು ?

ಗೌಡ — ಅವ ನಮ್ಮ ಬುದ್ದಿವಂತ ನನ್ನೊಡೆಯ.

ಹೆಗ್ಗಡೆ — ಅವನು ಹೇಳಿದ್ದು ಏನು ?

ಕರಣೀಕ — ಸರಿ ಅವ ಕೆಟ್ಟ.

ಕಾಚ — ನನ್ನೊಡೆಯ ನಾನ್ಯಾಕೆ ಕೆಟ್ಟ. ಕಾಕನಕೋಟೆಗೆ ಬಂದು ಕಂದಾಯ ತೆಗೆಯೋರು ಕೆಟ್ಟ.

ಹೆಗ್ಗಡೆ — ಯಾಕೊ ಬುದ್ದಿವಂತ, ತೆಗೆದರೇನಾಗತದೆ ?

ಕಾಚ — ನಿಮ್ಮವರು ಕಂದಾಯ ತೆಗೆದರೆ ಕಾಕ ಅವರ ಉಸುರು ತೆಗೀತಾನೆ.

ಕರಣೀಕ — ಏನು ಗೌಡರೆ ಇವನ್ನೇ ಮಾತಾಡೋಕೆ ಬಿಟ್ಟಿದೀರಾ ?

ಗೌಡ — ನನ್ನೊಡೆಯ, ಅವ ನಮ್ಮ ಬುದ್ದಿವಂತ, ಅವನು ಹೇಳೋದು ಕೇಳಿರ.

ಕರಣೀಕ — ಯಾತರದಯ್ಯ ಕೇಳೋದು ? ಹೆಗ್ಗಡೆಗಳ ಅಪ್ಪಣೆಗೆ ಕಾಕ ಅಂತ ಯಾರನ್ನೋ ಅಡ್ಡಹಾಕುತಿದೀರಿ. ಕಾಕ ಅನ್ನೋನು ಇದ್ದರೆ ಕರತನ್ನಿ. ನಾಲ್ಕುದಿನ ಹೆಗ್ಗಡೆಗಳ ಕೋಟೇಲಿಟ್ಟು ಬುದ್ಧಿ ಕಲಿಸುತೀವಿ.

ಕಾಚ — ಒಡೆಯ ಇದ್ಯಾತರ ಮಾತು ? ಕಾಕನ್ನ ಕರತರೋದೇನಂತೆ. ನೀವು ಆಶೆಪಟ್ಟರಿ ಅಂತ ತಿಳಿದರೆ ಅವನೇ ಬರತಾನೆ. ಆಂದರೆ ಬರೋಕೆ ಮೊದಲೇ ಕನಸಿನಾಗ ಕಂಡು ಬೆಚ್ಚೀರ ಅಷ್ಟೆ.

ಕರಣೀಕ — ಯಾಕೊ ಬೆಚ್ಚೋದು ? ಏನು ಅಂತ ಭಯ ?

ಕಾಚ — ಹಂಗಾದರೆ ಅಕೋ ಕಾಕ (ಎಂದು ಕರಣೀಕನ ಹಿಂದುಗಡೆಗೆ ಬೆರಳು ತೋರಿಸುವನು. ಕರಣೀಕನು ಬೆಚ್ಚಿ ಇತ್ತ ಸರಿಯುವನು. ಹೆಗ್ಗಡೆಯೂ ಅವನ ಮಗನೂ ಕೂಡ ಸ್ವಲ್ಪ ಬೆಚ್ಚುವರು. ಅಲ್ಲಿ

ಯಾರೂ ಇರುವುದಿಲ್ಲ). ಏನು ನನ್ನೊಡೆಯ ಭಯ ಇಲ್ಲ ಅಂತೀರ. ಬೆರಳು ತೋರಿದರೆ ಬೆದರುತೀರೆ! ಇದಕೇನು ಹೇಳೋದು?

ಹೆಗ್ಗಡೆ ಅಯ್ಯ, ಗೌಡರೆ, ಇದೇನು ಮಕ್ಕಳಾಟ ಆಯಿತು? ನಿಮ್ಮ ಬುದ್ಧಿವಂತನ ಮಾತು ಸಾಕು. ಆ ಕಾಕನ್ನ ಕರತನ್ನಿ, ಅವನ ಸಂಗಡಲೇ ಮಾತನಾಡೋಣ.

ಗೌಡ ಏನು ಕಾಚ?

ಕಾಚ ಆಗಲಿ ಗೌಡರೆ, ಕಾಕ ಊರಾಗೆ ಇದಾನೋ ಇಲ್ಲೋ, ಎಂದು ಬರುತಾನೋ ನೋಡಿ ಹೇಳೋಣಂತೆ.

ಗೌಡ ಆಗಲಿ ಒಡೆಯ ನೋಡಿ ಹೇಳುತೀವಿ.

ಕಾಚ ಇವರು ಇಲ್ಲೇ ನಾಲ್ಕು ದಿನ ಇರಬೇಕಾದೀತು.

ಗೌಡ ಒಡೆಯರು ಇಲ್ಲೇ ನಾಲ್ಕು ದಿನ ಇರಬೇಕಾದೀತು.

ಹೆಗ್ಗಡೆ ನಾಲ್ಕುದಿನ ಇರೋಕಾಗುತದೋ ಇಲ್ಲೋ. ನಾಳೆ ನಾಡಿದ್ದು ಇರತೀವಿ. ಅಷ್ಟರಲ್ಲಿ ಈ ಮಾತು ಮುಗಿಸಿ ರಾಜಪಾಲು ಸಲ್ಲಿಸಿ.

ಗೌಡ ನೋಡತೀವಿ ಒಡೆಯರೆ.

ಹೆಗ್ಗಡೆ ಹಾಗಾದರೆ ನಾಳೆ ನಾಡಿದ್ದರಲ್ಲಿ ಇಲ್ಲಿಗೆ ಹೇಳಿಕಳುಹಿಸಿ.

ಗೌಡ ಆಯಿತು ನನ್ನೊಡೆಯ.

(ಎಂದು ಇವರು ಇತ್ತ ಅವರು ಅತ್ತ ಹೊರಡುವರು. ತನ್ನನ್ನು ಅವಮಾನಪಡಿಸಿದನಲ್ಲಾ ಎಂದು ಕೋಪದಿಂದ ಕರಣೀಕನು ಕಾಚನ ಕಡೆಗೆ ದುರುಗುಟ್ಟಿಕೊಂಡು ನೋಡುತ್ತಾ ಮರೆಯಾಗುವನು. ಕಾಚನು ಏನೂ ಅರಿಯದವನಂತೆ ಆಕಾಶವನ್ನು ನೋಡುತ್ತ ತನ್ನ ದಾರಿ ಹಿಡಿಯುವನು.)

[ಕಾಕನಕೋಟೆಯ ಕಾಡಿನಲ್ಲಿ. ಕುರುಬರ ಒಂದು ಹಾಡಿ. ತರುಣರ ಚಾವಡಿಯ ಮುಂದೆ. ದೊಡ್ಡವರು ಕೆಲವರು ಕುಳಿತಿದ್ದಾರೆ; ಕಾಚ ಅಲ್ಲಿದ್ದಾನೆ. ಹೆಣ್ಣುಮಕ್ಕಳು ನಾಲ್ವರು ಕೋಲಾಟ ಆಡುತ್ತಾರೆ.]

ಹೆಣ್ಣುಮಕ್ಕಳು (ಹಾಡುತ್ತಾರೆ)

ಕರಿಹೈದ ಹುಟ್ಟಿದಾ ತಿಂಗಳು ದಿನದವ್ಯಾಲೆ
ಅವರವ್ವ ಒಂದು ದಿನ ಕಾಡೀಗೆ ಹೊಂಟಾಳೆ;
ಗುಡಲಲ್ಲಿ ಕಂದನ್ನ ಒಬ್ಬನ್ನ ಬಿಟ್ಟಾಳೆ,
ಹಸುಳೇನ ಮಾದೇಶ್ವರನ ಕೈಲಿ ಇಟ್ಟಾಳೆ;
ಹಾಡೀಯ ದೇವರೇ ಬೂಡೀನ ಬಗವಂತ
ನಿನ್ನ ಈ ಕಂದನ್ನ ನೀನೆ ನೋಡಿಕೊ ಅಂತ,
ಗೆಣಸನ್ನ ತಿರಿಯಾಕೆ ಕಾಡೀಗೆ ನಡದಾಳೆ;
ಎಳಗೂಸು ಒಬ್ಬೊಂಟಿಯಾಗದೇ ಆ ವ್ಯಾಳೆ;
ಮಾದೇಶ್ವರನ ಮಗ ಹಸುಗೂಸು ಕರಿಹೈದ
ಗುಡಲಲ್ಲಿ ಒಂಟಿಯಾಗಿದ್ದ ಚೆಲುವ ಮೈದ.
　ಕರಿಹೈದನೆಂಬೋರು ಮಾದೇಶ್ವರಗೆ ಶರಣು
　ಮಾದೇಶ್ವರಗೆ ಶರಣು, ಮಾದೇಶ್ವರಗೆ ಶರಣು.

ಗುಡಲಲ್ಲಿ ಕರಿಹೈದ ಮಲಗಿರಲು ಒಬ್ಬೊಂಟ
ಕಾಡಿನಲಿ ಹುಲಿರಾಯ ಸುತ್ತಿ ಸುಳಿಯಲು ಹೊಂಟ.
ಕಾಡಿನಾ ದಣಿಯವನು ಹತ್ತು ಹೆಜ್ಜೆಯ ಗಂಡು,
ಅವನೆದುರು ಯಾರದೂ ಇಲ್ಲ ಇಷ್ಟೊ ಪುಂಡು.
ಹಾಡೀಗೆ ಬಂದು ಹುಲಿರಾಯ ಬೂಡನು ಹೊಕ್ಕ,
ಮನೆ ಕಾಯುತಿರುವಂತ ಮಗನ ನೋಡಿದ ನಕ್ಕ;
ಕೂಸು ಮಲಗಿದ ಬದಿಗೆ ಬಂದು ಮೂತಿಯ ಮೂಸಿ
ಉಳಿದೆಲ್ಲ ಊಟ ಏನ ಎಳೆಯ ಹಸುಳೆಯೆ ವಾಸಿ,
ಈವತ್ತು ಇಲ್ಲಿ ದೊರಕಿತ್ತು ಒಳ್ಳೇ ಆಯ,

ಅಂತ ಬಾಯನ್ನ ಚಪ್ಪರಿಸಿದನು ಹುಲಿರಾಯ.
 ಕರಿಹೈದನೆಂಬೋರು ಮಾದೇಶ್ವರಗೆ ಶರಣು
 ಮಾದೇಶ್ವರಗೆ ಶರಣು, ಮಾದೇಶ್ವರಗೆ ಶರಣು.

ಹುಲಿರಾಯ ಮೊಗವಿಡಲು ಕರಿಹೈದ ಹಸುಗೂಸೆ,
ಪುಟ್ಟ ಎಡದಾ ಕೈಲಿ ಹಿಡಿದಾ ಅವನ ಮಿಸೆ;
ನನ್ನ ಮಿಸೆಯ ಮುಟ್ಟತಾನೆ ಏನಿದು ಕೆಚ್ಚು,
ಅನ್ನುತ ಹುಲಿರಾಯ ಮುನಿದ ಹುಚ್ಚುಹುಚ್ಚು ;
ಮುನಿಯುತ ಹುಲಿರಾಯ ಕೆರಳಿ ಬಾಯನು ಬಿಟ್ಟ ;
ಕರಿಹೈದ ಬಾಯೊಳಗೆ ಬಲದ ಕೈಯನು ಇಟ್ಟ ;
ಮಿಸೇನ ಬಿಡಿಸಿಕೊಳ್ಳೋಣೆ ಅದು ಬಾರದು
ಪುಟ್ಟಾನ್ನ ಕೈಯ ಕಡಿವನೆ ಬಾಯಿ ಬಾರದು ;
ಯಾವ ದೇವರ ಮೆಚ್ಚು ಮಗನೊ ಈ ಕೂಸಂತ
ಹುಲಿರಾಯ ಏನೇನು ತೋಚದಲ್ಲೇ ನಿಂತ.
 ಕರಿಹೈದನೆಂಬೋರು ಮಾದೇಶ್ವರಗೆ ಶರಣು
 ಮಾದೇಶ್ವರಗೆ ಶರಣು, ಮಾದೇಶ್ವರಗೆ ಶರಣು.

ಎಡಗೈಗೆ ಮಿಸೇನು ಬಲದಕೈಗೆ ಬಾಯ
ತೆತ್ತವನು ಬೆಚ್ಚಂತೆ ನಿಂತಿರಲು ಹುಲಿರಾಯ,
ಕರಿಹೈದನವ್ವಯ್ಯ ಗೆಣಸನ್ನ ತಿರಿದೋಳೆ
ಹೊತ್ತು ಹೋಯಿತು ಅಂತ ಬೂಡೀಗೆ ಬರುತಾಳೆ;
ಬೂಡೀನ ಒಳಕಡೆಗೆ ಒಂದು ಹೆಜ್ಜೆಯನಿಕ್ಕಿ
ಹತ್ತೆಜ್ಜೆ ಹುಲಿರಾಯನನ್ನ ಕಂಡಳು ಸೊಕ್ಕಿ ;
ಮಾದೇಶ್ವರಾ ನಿನ್ನ ಮಗನ ಕಾಯಿಕೊ ಅಂತ
ಹುಯಿಲಿಟ್ಟಳೋ ಅಪ್ಪ ಬಗವಂತ ಬಗವಂತ;
ಹುಯಿಲು ಕೇಳಿದ ಕೂಸು ಮಿಸೆ ಬಾಯನ ಬಿಟ್ಟ
ಹುಲಿರಾಯ ನಿಲ್ಲದೆ ನಡೆದ ಕಾಡಿಗೆ ನೆಟ್ಟ.

ಕರಿಹೈದನೆಂಬೋರು ಮಾದೇಶ್ವರಗೆ ಶರಣು
ಮಾದೇಶ್ವರಗೆ ಶರಣು, ಮಾದೇಶ್ವರಗೆ ಶರಣು.
ಕರಿಹೈದನವ್ವನಾ ಹೆಸರೆಂದು ನಿಲ್ಲಲಿ,
ಅವನ ಬಳಿಯೆಂದೆಂದು ಒಳ್ಳಿದನು ಮೆಲ್ಲಲಿ;
ಅವನ ಹೆತ್ತಾ ಕಾಡು ಎಂದೆಂದು ಚಿಗುರಲಿ,
ಅವನ ಬಳಿ ಎಂದೆಂದು ಮಿಕ್ಕಿರಲಿ ಹೊಗರಲಿ;
ಅವನ ಹಾಡಿಗಳಿರಲಿ ಎಂದೆಂದು ಸೊಗದಲಿ,
ಅವನ ಬಳಿಗೆಂದೆಂದು ನಗೆಯಿರಲಿ ಮೊಗದಲಿ;
ಅವನ ಹೊಗಳುವ ಹಾಡು ಎಂದೆಂದು ಹಾಡಲಿ,
ಅವನ ಬಳಿ ಎಂದೆಂದು ಹಬ್ಬವನು ಮಾಡಲಿ;
ಕರಿಹೈದನಪ್ಪಾಜಿ ಮಾದೇಶ್ವರಗೆ ಶರಣು.
ಮಾದೇಶ್ವರಗೆ ಶರಣು ಮಾದೇಶ್ವರಗೆ ಶರಣು.
ಕರಿಹೈದನೆಂಬೋರು ಮಾದೇಶ್ವರಗೆ ಶರಣು
ಮಾದೇಶ್ವರಗೆ ಶರಣು, ಮಾದೇಶ್ವರಗೆ ಶರಣು.

ಗೌಡ — ಬಂದು ಕಾಕನಿಗೆ ಮೊಕ್ಕಿ ನಡೀರ ಇನ್ನು. ನಮಗೆ ಬೇರೆ ಕೆಲಸ ಅದೆ.

ಹುಡುಗರು — ನಾವಾಡೋದು ಬ್ಯಾಡಾ ಈ ಹೊತ್ತು?

ಗೌಡ — ಏನು, ಕಾಚ?

ಕಾಚ — ಈವೊತ್ತು ಬೇಡೇಳು, ಹಂಗಾರೆ.

(ಎಲ್ಲರೂ ಬಂದು ನಮಸ್ಕಾರ ಮಾಡುತ್ತಾರೆ).

ಓಹೊ ಮೋನಿ ಬಂದಾಳೆ.

ಏನವ್ವಾ, ಯಾವಾಗ ಬಂದೆ? ನಾಕ ಎಲ್ಲಿ?

(ಹುಡುಗರ ಮಧ್ಯದಿಂದ ಒಬ್ಬನು ಮುಂದಕ್ಕೆ ಬರುತ್ತಾನೆ. ಅವನು ನಾಕ)

ನಾಕ — ಇಕೊ ಇಲ್ಲಿದೀನಿ ಮಾವಯ್ಯ.

ಕಾಚ — ಗುಡಲು ಮಾಡಿದಾರೊ ಹೈಕಳು?

ಗೌಡ ಸರ್‍ಯೆ ಇವರಿಬ್ಬರೂ ಆಡುತಿದ್ದ ಆಟದಾಗ ಮೂರು ತಿಂಗಳ ಹಿಂದೇನೆ ಕಾಡಿಗೆ ಹೊಂಡತಾರೆ ಅಂತಿದ್ವಿ. ಅದೇನೊ ಈಸು ದಿನ ತಡೀತು. ಓಡೋಕೆ ಮೊದಲೇ ಇವರೇ ತಟ್ಟೆ ತಡಿಕೆ ಸೇರಿಸಿದರು.

ನಾಕ ಇನ್ನು ಈ ಹೈಕಳು ಮಾಡದೀರ ಹೋದರೆ ಏನು ಗತಿ ಅಂತ ನಾನೂ ಮೋನಿ ತರಗು ತಡಿಕೆ ಸೇರಿಸಿಟ್ಟು ಹೋದಿವಿ. ಬರೋ ಹೊತ್ತಿಗೆ ಒಂದು ಗುಡಲು ಆಗಿತ್ತು. ಇಲ್ಲದೀರಾ ಇದ್ದರೆ ಇವರೆಲ್ಲ ಮಾಡಿರೋರೇನು? ಮೊಲ್ಲೆ ಮನಸು ಮಾಡಿ ಮೋನೀಗೆ ಅಂತ ಅಟ್ಟೆಕೂಳು ಕಳುವಿಸಿದ್ದಳು. ಸ್ವಲ್ಪ ಉಂಡು ಬದುಕಿಕೊಂಡಿವಿ.

ಮೊಲ್ಲೆ ಮತ್ತಿನ್ನು ಪುಂಡ ಮಿಂಡಿ ಗಂಡ ಹೆಂಡಿರಾಗಿ ಬಂದರೆ ಈಟು ಅಟ್ಟೆ ಕೂಳಿಲ್ಲದೆ ಹೋದಾತ?

ಮೋನಿ ನಾಳೆ ನನ್ನಣ್ಣಾ ಮೊಲ್ಲೆ ಕಾಡಿಗೆ ಓಡಿಹೋಗಿ ತಿರಿಗಿ ಬಂದಾಗ ನಾನು ಕೊಡೋಲ್ಲೆ ಅಟ್ಟೆ ಕೂಳು?

ನಾಕ ಕಾಕನ ಮಗಳಿಗೆ ಅಟ್ಟೆ ಕೂಳು ನೀ ಕೊಡ ಒಲ್ಲಿ ಯಾಕೆ? ಊರೇ ಕೊಡುತೀನಿ ಅಂತದೆ. ಏನೋ ಮೋನ, ಎಂದು ಹೋಗುತೀರಾ ಕಾಡಿಗೆ?

ಮೋನ ಅದೇನೋ ನಾ ಕಾಣೆ. ಮೊಲ್ಲೆ ಹೇಳಬೇಕು, ಏನು ಮೊಲ್ಲೆ?

ಮೊಲ್ಲೆ (ತಲೆಯನ್ನು ಕೊಡವಿ) ಹೋಗೋರೆಲ್ಲಾ ಹೇಳಿ ಹೇಳಿ ಹೋಗು ತಾರೇನೊ? ನೀ ಏನ ಮಾಡೀಯ?

ಗೌಡ ಹೇಳಿ ಮಾಡೋರುಂಟೇನೊ ಮೋನ? ಹೇಳದಹಂಗೆ ಮಾಡಬೇಕು. ನಾವೆಲ್ಲ ಹಂಗೇ ಮಾಡಿದ್ದು. (ಎಲ್ಲರೂ ನಗುತ್ತಾರೆ) ಇನ್ನು ನಡೀರಾ ಹಂಗಾದಮ್ಯಾಲೆ. ನಮಗೆ ಕೆಲಸ ಅದೆ. (ಎಲ್ಲ ಹೊರಡುತಾರೆ)

ಕಾಚ (ಮೊಲ್ಲೆಯನ್ನು) ಮೊಲ್ಲೆ (ಎಂದು ಕರೆಯುತ್ತಾನೆ).

ಮೊಲ್ಲೆ (ಹಿಂದಕ್ಕೆ ಬಂದು) ಏನಪ್ಪಾಜಿ ?

ಕಾಚ ಮೋನ ನಿನ್ನ ಮೆಚ್ಚಿದಾನ ?

ಮೊಲ್ಲೆ ನಾ ಕಾಣೆ, ಅಪ್ಪಾಜಿ.

ಮೋನ (ಹತ್ತಿರ ಬಂದು) ಹೌದು ಕಾಕ. ಮೆಚ್ಚಿ ಜೊತೆಯಾಗು ಅಂದಿದೀನಿ.

ಕಾಚ ಅದಕೇನಂದವ್ವ ?

(ಮೊಲ್ಲೆ ಏನನ್ನೂ ಹೇಳುವುದಿಲ್ಲ.)

ಮೋನ ಏನೂ ಅಂದಿಲ್ಲ.

ಕಾಚ ಯಾಕೆ ತಾಯಿ.

ಮೊಲ್ಲೆ ನನಗ್ಯಾಕೊ ಒಲ್ಲದು ಅಪ್ಪಾಜಿ.

ಕಾಚ ಅಂಗಂದವ್ಯಾಲೆ ಈ ಮಾತು ಆಡಲೇಬಾರದು. ಏನೋ ಮೋನ ?

ಮೋನ ಇಲ್ಲ ನಾನು ಆಡಲಿಲ್ಲ ನನ್ನ ತಂಗಿ ಇರಲಾರದೆ ಏನೋ ಹೇಳ್ಯಾಳೆ. ನಾವು ಯಾರೂ ಈ ಮಾತು ಆಡೋಲ್ಲ.

ಕಾಚ ಅದು ಜಾಣ. ಗಂಡಾಗಲಿ ಹೆಣ್ಣಾಗಲಿ ಮನಸು ಕಾಯ ಬೇಕು. ಮನಸು ಕಾಯಬೇಕು, ಮನಸು ಬೆರೆಯಬೇಕು. ಮನಸು ಬೆರೆತಮೇಲೆ ಕಾಡಿಗೆ ಹೋಗಬೇಕು. ಕಾಡಿಗೆ ಹೋಗಿದ್ದು ಬೂಡಿಗೆ ಬರಬೇಕು. ಬೂಡಿಗೆ ಬಂದಮೇಲೆ ಜೊತೆಯಾಗಿ ನಡೀಬೇಕು. ಒಬ್ಬರು ಮೆಚ್ಚಿದೀವಿ ಅಂದರೆ ಸಾಲದು ; ಇಬ್ಬರೂ ಮೆಚ್ಚಬೇಕು. ಇಬ್ಬರೂ ಮೆಚ್ಚಿದ ಮೇಲೆ ಮೈ ಕೂಡಬೇಕು. ಮಿಗ ನೋಡು ಹಕ್ಕಿ ನೋಡು, ಆಕಾಸ ಬೂಮಿ ನೋಡು, ಅಂತ ಹಿರೇರು ಹೇಳ್ಯಾರೆ. ತಿಳೀತೆ ಮೋನ ?

ಮೋನ ತಿಳೀತು ಕಾಕ.

ಕಾಚ ತಿಳೀತೆ ಮೊಲ್ಲೆ ?

ಮೊಲ್ಲೆ ತಿಳೀತು ಅಪ್ಪಾಜಿ.

ಕಾಚ ನನ್ನ ಮಗಳು ಅಂತ ನೀನು ಮೋನನ್ನ ಹಂಬಲುಪಡಿಸೋದು ಬಾರದು.

ಮೊಲ್ಲೆ ಇಲ್ಲ ಅಪ್ಪಾಜಿ.

ಕಾಚ ಒಲ್ಲದೀರ ಇದ್ದರೆ ಒಲ್ಲೆ ಅನ್ನಬೇಕು. ಸುಮ್ಮಕಿರಬಾರದು. ಸುಮ್ಮಕಿದ್ದರೆ ಗಂಡು ಪರದಾಡುತಾನೆ. ಬೂಡು ಆಡಿಕೋತದೆ. ಏನು ?

ಮೊಲ್ಲೆ ತಿಳೀತು ಅಪ್ಪಾಜಿ.

ಕಾಚ ಸರಿ ಇನ್ನು ನಡೀರ.

(ಅವರು ಹೋಗುವರು) ಏನು ಗೌಡಣ್ಣ ಇನ್ನು ಈ ಮಾತಾಡೋಣೆ ? ಮಾವ ಬರುತಾನಂದ್ಯೆ ; ಎಲ್ಲಿ ?

ಗೌಡ ಹಕ್ಕಳು ಹೋದಮೇಲೆ ಕೂಗು, ಬರುತೀನಿ, ಅಂದುಲೋ, ಮೋನ, ಮಾವನ್ನ ಒಸಿ ಬರಹೇಳು.

ಮೋನ (ದೂರದಿಂದ) ಹೇಳತೀನಿ ಮಾವ.

ಗೌಡ ಹೆಗ್ಗಡೆ ಬಂದು ನಮ್ಮನ್ನ ಕಾಡೋವ್ಯಾಳ್ಯಾಕ್ಕೆ ಸರಿಯಾಗಿ ಇಲ್ಲಿ ಈ ಮಾವ ಏನೋ ಮಾತು ತೆಗೆದದಾನಲ್ಲ. ಇದಕೇನು ಮಾಡೋದು ?

ಕಾಚ ಮಾಡೋದು ಏನ. ತೆಗೆದ ಮಾತು ಆಡೋದು. ಏನಾದರೂ ಆಗಬೇಕೆಂದರೆ ಆದರೆ ಕೊಡೋದು.

ಗೌಡ ಆದರಲ್ಲವೆ ಕೊಡೋದು ? ಸತ್ತೋಳನ ತಾ ಅಂತಾನೆ.

ಕಾಚ ಯಾಕೆ, ಆ ಮಾತೂ ಎತ್ತತಾನೇನು ?

ಗೌಡ ಸರ್ಯೆ, ಅವ ಎತ್ತದ ಮಾತಿಲ್ಲ.

ಕಾಚ ಆಯಿತು ಕೇಳೋಣಂತೆ.

(ಅಸಮಾಧಾನದ ದೃಷ್ಟಿಯಿಂದ ನೋಡುತ್ತ ಮಾವನು ಪ್ರವೇಶಿಸುತ್ತಾನೆ.)

ಗೌಡ (ಕಾಚನಿಗೆ ಅವನ ರೀತಿಯನ್ನು ಸೂಚಿಸುತ್ತ) ಬಾ ಮಾವಯ್ಯ

ಮಾವ ಬಂದೀ ಕಾಣಪ್ಪ.

| | |
|---|---|
| ಗೌಡ | ಅದೇನೋ ಹೇಳಬೇಕು ಅಂದ್ಯೆ ಕಾಕನಕೂಟೆ. |
| ಮಾವ | ಹೌದು ಹೇಳಬೇಕು. ಕೇಳುತಾನೋ ನಿಮ್ಮ ಕಾಕ? |
| ಗೌಡ | ಓ ಕೇಳೋದು ಅಂತಲೇ ಕುಂತವ್ನೆ, ನಾನೂ ಕುಂತದೀನಿ. |
| ಮಾವ | ಮತ್ತೆ ಆವ ಏನೂ ಹೇಳೋಲ್ಲ. |
| ಕಾಚ | ನಾ ಹೇಳೋದು ಏನು ಮಾವ? ನೀ ಹೇಳೋದು, ನಾವು ಕೇಳೋದು, ಅಂತ ಅಲ್ಲೆ ಇಲ್ಲಿ ಕಲೆತಿರೋದು? |
| ಮಾವ | ಹೆಗ್ಗಡೆಗಳು ಬಂದರಂತೆ, ಕಂದಾಾಯದ ಮಾತು ಆಡಿದರಂತೆ, ಹೌದೊ? |
| ಗೌಡ | ಹೌದು. |
| ಮಾವ | ಹಿಂದಲಾ ಕಾಲಕ್ಕೆ ಇಂತಾ ಮಾತು ಬಂದಾಗ ನನ್ನ ಕರೆದು ಕೇಳುತಾ ಇದ್ದಿರಿ. ಈಗ ಯಾಕೋ ಕೇಳಲ್ಲ.... |
| ಗೌಡ | ನಿನ್ನ ಕರೀರಿ ಅಂತ ಕಾಕ ಹೇಳಿದ. ನೀ ಆ ಹೊತ್ತಿಗೆ ಸರಿಯಾಗಿ ಎತ್ತಾಗೋ ಹೋಗಿದ್ದ್ಯೆ? |
| ಮಾವ | ಒಳ್ಳೇತಾತು. ಮುಂದಾಗಿ ಹೇಳಿದ್ದರೆ ನಾನ್ಯಾಕೆ ಎತ್ತಾಗೊ ಹೋಗುತಾ ಇದ್ದಿ? ನೀವು ಹೇಳಲ್ಲ. ನಾ ಇರಲ್ಲ. ಹೆಗ್ಗಡೆಗಳ ಕಾಣಿಕೆ ಕೊಡೋದು ಬೇಡ ಅಂತ ನಿಮ್ಮ ಕಾಕ ಹೇಳತಾ ಅದಾನಂತಲ್ಲ. ನಮ್ಮ ಕುರುಬರು ಈ ಕಾಡಾಗೆ ಇರೋದೇ ಬಿಡೋದೇ? ಏನು ಅಂತ ಏರುಪಾಡು. |
| ಗೌಡ | ಬ್ಯಾಡ ಅನ್ನಲಿಲ್ಲೇ? ಹಾಡೀ ಗೌಡರೆಲ್ಲ ನಾಳೆ ಕಲೆತು ಆ ಮಾತು ಆಡಬೇಕು ಅಂತ ಮಾಡ್ಯದಾರೆ. |
| ಮಾವ | ಸರ್ರಿ, ಆಡಿರ. ಅಂದರೆ, ಕಾಕ ಮೈಸೂರು ಕಂಡೋನು ಅಂತ, ಹೆಗ್ಗಡೆ ಇಲ್ಲ ಅನಬೇಡಿರ. |
| ಗೌಡ | ಕಾಕನೇ ಹಂಗನಲಿಲ್ಲಪ್ಪ. |
| ಮಾವ | ಸರ್ರಿ. ಕಾಕ ಅಂದನೋ ಇಲ್ಲೋ ಹಕ್ಕಳು ಅಂತಾರೆ. ಹೆಗ್ಗಡೆ ಏನು ಗಿಗ್ಗಡೆ ಏನು ಅನ್ನೋದು ನನ್ನ ಕಿವೀಗೆ ಬೀಳತಾ ಅದೆ. ಹಿಂದಲ ಕಾರಾಗೆ ಅಂದರು ಮಾವ ಬೇಡ |

ಕಾಕ ಇರಲಿ ಅಂತ. ಈಗ ಅಂತಾ ಅದಾರೆ ಹೆಗ್ಗಡೆ ಬೇಡ ಕಾಕ ಇರಲಿ ಅಂತ. ಕಾಕನ್ನ ತಕೊಂಡುಹೋಗಿ ದೇವರು ಅಂದರೆ ಆಗೋಲ್ಲ. ನನ್ನ ಕಳುವಿದಹಂಗೆ ಹೆಗ್ಗಡೇನ ಕಳುವಬೇಡಿರ.

ಗೌಡ ಕಾಕನ್ನ ದೇವರು ಅನಲಿಲ್ಲ. ಅಂದರೆ ಕಾಕ ಹಾಡೀಗೆ ಬಹಳ ಒಳ್ಳೇದ ಮಾಡಿದಾನೇ?

ಮಾವ ಒಳ್ಳೇದ ಮಾಡಿದ್ದೇನ? ನನ್ನ ಬೂಡಿನ ಬಟ್ಟೆಗೆಡಿಸಿದ. ಈಗ ಹಾಡೀನ ಬಟ್ಟೇ ಕೆಡಸತಾ ಐದಾನ.

ಕಾಚ ಏನು ಮಾವ ನಾ ಬಟ್ಟೆಗೆಡಿಸಿದ್ದು?

ಮಾವ ಯಾಕ, ನೀ ಕೆಡಿಸಿದ ಬಟ್ಟೆ ನಿನಗೆ ತಿಳೀದಾಹೋಯ್ತು?

ಕಾಚ ಹೇಳಪ್ಪ ಕೇಳೋಣಂತೆ.

ಮಾವ ಎಲಾ ನೀ ಎಂಟು ಕಾರಿನ ಹೈದ ಕಾಡು ಬಿಟ್ಟು ಹೊಂಟು ಹೋದೆ. ಏನಾದೆ ಅನ್ನೋದು ಯಾರಿಗೂ ತಿಳಿದಿರಲಿಲ್ಲ. ಹದಿನೈದು ಕಾರು ಬಿಟ್ಟುಕೊಂಡು ತಿರಗಾ ಬೂಡಿಗೆ ಬಂದು ನಾನೂ ಕುರುಬರ ಹೈದ ಅಂತ ಸೇರಿಕೊಂಡೆ. ಮುತ್ತು ಮಣಿ ತೋರಿಸಿ ಬೂಡುಗಳನ್ನೆಲ್ಲ ಕೆಡಿಸಿದೆ........

ಕಾಚ ಕೆಡಿಸಲಿಲ್ಲ ನಾನು. ಇಲ್ಲದ್ದ ಆಡಬ್ಯಾಡ.

ಮಾವ ಇಲ್ಲದ್ದ ನಾ ಆಡಲ್ಲ. ಆದದ್ದನ್ನ ಹೇಳುತೀನಿ ಕೇಳು. ನನ್ನ ಜೊತೆ ಹೆಂಡರ ನೀನು ಬೆಳ್ಳಿಸಿ ಕರಕೊಂಡ್ಯೋ ಇಲ್ಲೊ?

ಕಾಚ ಅವಳು ಸತ್ತು ಈಗ ಮಣ್ಣಿನ ಮರೆಯಾಗದಾಳೆ. ಅವಳ ಹೆಸರು ಅನ್ನೋದು ಅವಳ ಮಾತು. ಇವತ್ತು ನಾವು ಅವಳ ಮಾತು ಯಾಕೆ ಎತ್ತಬೇಕು?

ಮಾವ ಅವಳ ಮಾತು ಬೇಡ. ನಿನ್ನ ಮಾತು ಹೇಳು. ನೀನು ಬೆಳ್ಳಿಸಿದ್ದು ಕರಕೊಂಡದ್ದು ಉಂಟೋ ಇಲ್ಲೋ?

ಕಾಚ ಗೌಡಣ್ಣ ಇದು ನನ್ನದು ಮಾವನದು ಇಬ್ಬರದೇ ಮಾತಾಯಿತು.

ಮಾವ ಎಲವೋ ನೀ ನನಗೆ ಮಾವ ಮಾವ ಅಂತ ಮರುವಾದಿ ಬಾಸಿಂಗ ಕಟ್ಟಬೇಡ ಕಾಣ. ಇಬ್ಬರದೇ ಯಾಕ ಮಾತು? ಊರು ಕೇಳಲಿ ಹೇಳು.

ಕಾಚ ಊರು ಕೇಳಲಿ ಅಂತೀಯಾ?

ಮಾವ ಹೌದು ಕೇಳಲಿ ಹೇಳು.

ಕಾಚ ಸರಿ. ಹಂಗಾದರೆ ಹೇಳು ಇನ್ನೂ ನೀ ಹೇಳೋದನೆಲ್ಲ. ಕೇಳಿಬಿಟ್ಟು ಆಮೇಲೆ ಹೇಳೋಣಂತೆ.

ಮಾವ ಆವೊತ್ತು ನನ್ನ ಹೆಣ್ಣಿನ ಬೆಳ್ಳಿಸಿ ಕರಕೊಂಡೆ. ನಾಲ್ಕು ಕಾರ ಹಿಂದೆ ಬಂದವನೆ ನೀನೇ ದೇವರಗುಡ್ಡ ಅಂದೆ, ನನ್ನ ಆಚೀಗೆ ದೂಡಿದೆ. ನಿನ್ನ ಹೊನ್ನು ತೋರಿದೆ, ಹಾಡೀನ ಮರುಳುಮಾಡಿದೆ. ತೊಗಟೆ ಬಿಟ್ಟದ್ದಾಯಿತು; ತೊಗಲು ಬಿಟ್ಟದ್ದಾಯಿತು; ಕಂಬಳಿ ಬಿಟ್ಟದ್ದಾಯಿತು. ಇನ್ನು ಬಿಳೀ ಬಟ್ಟೆ ಆಸೇ ಯಾಕೆ ಬಣ್ಣದ ಬಟ್ಟೇನೂ ಉಡಿರ ಅಂದು ಹಾಡೀ ಜನಕೆಲ್ಲ ನೀನು ನಿನ್ನ ಮೈಸೂರು ಮಂಕುಬೂದಿ ಚೆಲ್ಲಿದೆ. ಈಗ ಅವರಿಗೆ ಹೇಳುತಾ ಇದೀಯಾ ಹೆಗ್ಗಡೆ ಅಲ್ಲ ಅಂತ; ನೀನೆ ಹೆಗ್ಗಡೆ ಆದಹಂಗೆ. ಈ ಬಳಿ ಏನು ಬಾಳಬೇಕು ಅಂತಲಾ ಬೇಡ ಅಂತಲಾ ನಿನ್ನ ಮನಸು?

ಕಾಚ ಆ ಮಾತು ನಾಳೆ ಬಳೀಮಂದಿ ಕಲೆತಾಗ ಅವರನ್ನೆ ಕೇಳೋಣಂತೆ. ಇದಕ್ಯಾಕೆ ಕದಡು? ಏನು ಗೌಡಣ್ಣ ಇದೆಲ್ಲಾನೂ ನಾಳೆ ಮಂದೀಗೆ ಹೇಳೋಣ. ಅವರು ಏನಂತಾರೊ ಕೇಳೋಣ. ಮಾವನೂ ಬರಲಿ ಹೇಳಲಿ. ನಾನೂ ಹೇಳತೀನಿ. ನೀನೂ ಹೇಳು. ಅದಾದಮೇಲೆ ಅವರು ಹೇಳಿದಂತೆ ಆಗಲಿ. ಏನಂತೀಯಾ?

ಗೌಡ ಈ ಮಾತೆಲ್ಲ ಮಂದಿಗೆ ಹೇಳಬೇಕು?

ಕಾಚ ಮಾವ ಹೇಳತಾನೆ ಹೇಳೋಣ ಅಂತ; ಹೇಳೋಣ. ಮಂದಿ ಎಲ್ಲಾನೂ ಕೇಳಿ ಹೆಂಗೆ ಮನಸುಮಾಡುತಾರೋ ಹಂಗೆ ಆಗಲಿ. ಏಸು ಮಾವ?

ಮಾವ ಎಲಾ ನಿನ್ನ ಮಾವನೆ! ಆಗಲಿ ಏಳು. ಹೇಳೋಣ, ನೋಡೋಣ.

ಕಾಚ ಆಗಲಿ. (ಎಂದು ಹೇಳುವನು. ಮೂವರೂ ಹೋಗುವರು.)

### ೩

[ಅದೇ ಸ್ಥಳ. ಮಾರನೆಯ ಮಧ್ಯಾಹ್ನ. ಹಾಡಿಗಳ ಮುಖಂಡರು ಕೆಲ ಹೆಂಗಸರು ಹುಡುಗರು ಹುಡುಗಿಯರು ಇದಾರೆ. ಗೌಡ ಮಾವ ಒಂದು ಕಡೆ ಕುಳಿತಿದ್ದಾರೆ. ಮೋನ ಕುಣಿಯುತ್ತಿದಾನೆ. ಒಬ್ಬ ಮುದುಕನು ಸಣ್ಣ ತಮಟೆ ಹೊಡೆಯುತ್ತಿದಾನೆ.]

ಮೋನ

ಒಂದು ದಿನ ಕರಿಹೈದ ಕಾಡಲ್ಲಿ ಅಲೆದಾನೊ,
ಅಲೆಯೂತ ಹತ್ತ್ಹೆಜ್ಜೆ ಹುಲಿಯೊಂದ ಕಂಡಾನೊ;
ಹುಲಿರಾಯ ಕಾಡಲ್ಲಿ ಧೀರಾಗಿ ನಡೆಯೂತ
ಎದುರೀಲಿ ಹೈದನ್ನ ಝುಗ್ಗಂತ ನೋಡ್ಯಾನೊ;
ಝುಗ್ಗಂತ ನೋಡೂತ ನಿಂತಲ್ಲೆ ನಿಂತಾನೊ
ನಿಂತಲ್ಲೆ ನಿಂತೋನು ಬಾಲಾನ ಮಿಸುಕ್ಯಾನೊ;
ಬಾಲಾನ ಮಿಸುಕಾದೆ ಕಿಮಿಯನ್ನು ನಿಮಿರ್ಯಾನೊ
ಹೈದನಾ ಮೊಕದಲ್ಲಿ ನೋಟಾನ ನಟ್ಟಾನೊ.
ಬಿಡು ಬಟ್ಟೆ ಬಿಡು ಬಟ್ಟೆ ಅನ್ನೂತ ಇದೆ ಕಣ್ಣು;
ಬಿಡನಲ್ಲ ಬಿಡನಲ್ಲ ಅನ್ನೂತ ಇದೆ ಜೀವ.
ಬಿಡು ಬಟ್ಟೆ ಬಿಡನಲ್ಲ ಬಿಡು ಬಟ್ಟೆ ಬಿಡನಲ್ಲ,
ಬಿಡನಲ್ಲ ಬಿಡುವೊಲ್ಲ ಬಿಡಲಿಲ್ಲ ಬಿಡಲಿಲ್ಲ;
ಬಿಡಲಿಲ್ಲ ಬಿಡಲಿಲ್ಲ; ಅಂದಾನೊ ಹುಲಿರಾಯ.
ಹೈದನ್ನ ನೋಡೂತ ನೋಡೂತ ಇದ್ದಾನೊ,
ನೆಟ್ಟನ್ನ ನೋಟಾನ ಹಿಂದಕ್ಕೆ ಸೆಳೆದಾನೊ,
ಹತ್ತ್ಹೆಜ್ಜೆ ಒಡಲನ ಒಂದ್ಹೆಜ್ಜೆ ಮಾಡ್ಯಾನೊ,
ಒಂದ್ಹೆಜ್ಜೆ ಒಡಲಾಗಿ ಚಿಮ್ಮಂತ ಚಿಗಿದಾನೊ;
ಚಿಮ್ಮಂತ ಚಿಗಿದೋನು ಅಡಿವ್ಯಾಗೆ ಕೆಡೆದಾನೊ,
ಅಡಿವ್ಯಾಗೆ ಕೆಡೆದೋನು ಎತ್ತಾಗೊ ನಡೆದಾನೊ.
ಕಾಡಿನದು ಈ ಬಟ್ಟೆ ಹೈದನದು ಅಂದಾನೊ,
ಕರಿಹೈದ ನಡೆಯೂವ ಬಟ್ಟೆಲ್ಲ ಹೈದಂದು,
ಹೈದ ನಡೆಯುವ ಹೊತ್ತು ಆ ಬಟ್ಟೆ ನನತಲ್ಲ,

ಹೈದನ ಬಟ್ಟೆಗೆ ಹುಲಿರಾಯ ಅಡ್ಡಲ್ಲ,
ಅನ್ನೂತ ಕಾಡಾಗೆ ಗುಡುಗಿಟ್ಟು ಮೊಳಗ್ಯಾನೊ ;
ಗುಡುಗಿಟ್ಟು ಮೊಳಗೂತ ಕಾಣದೆ ಮರೆದಾನೊ
ಕರಿಹೈದ ಉಸುಕದೆ ಮಿಸುಕದೆ ಇದ್ದಾನೊ
ಹುಲಿರಾಯ ಚಿಗಿದಾನೆ ಮುಂದಾಕೆ ನಡೆದಾನೊ
ಮುಂದಾಕೆ ನಡೆದಾನೆ...............

(ಕಾಚ ಒಂದು ಕಡೆಯಿಂದ ಬರುತ್ತಾನೆ.)

ಗೌಡ ಮೋನ, ಸಾಕು ಬಿಡಲಾ, ಕಾಕ ಬಂದ. ನಿಲ್ಲಿಸಣ್ಣ.

(ಮೋನ ಮಂಗಳ ಕುಣಿದು ನಿಲ್ಲಿಸುತ್ತಾನೆ.)

ಮೋನ ಕರಿಹೈದ ನಡೆದಂತ ಬಟ್ಟೆಯೆ ಬಟ್ಟೆ ;
ಕರಿಹೈದ ಆಡಿದ ಮಾತೇ ಮಾತು ;
ಕರಿಹೈದ ಹಾಕಿದ ಕಟ್ಟೆಯೇ ಕಟ್ಟೆ;
ಕರಿಹೈದ ನೋಡಿದ ಗಿಡವೆಲ್ಲ ಕಾತು
ಕಾಯಾತು ಹಣ್ಣಾತು ಬಳ್ಳ್ಯೆಲ್ಲ ಹೂತು ;
ಬಳ್ಳ್ಯೆಲ್ಲ ಹೂತು ಕಾಡೆಲ್ಲ ನಾತು.
ಹೈದನ ಬಳಿಯೆಲ್ಲ ಎಂದಿಗೂ ಮುಂದಾ
ಬಳಿಯೆಲ್ಲ ಎಂದಿಗೂ ಬಾಳಿರಲಿ ಚೆಂದಾ.

(ಕುಣಿತ ತಮಟೆ ನಿಲ್ಲುತ್ತವೆ. ಕಾಚ ಆ ವೇಳೆಗೆ ಗೌಡ ಮಾವ ಇರುವ ಕಡೆಗೆ ಬಂದು ಕುಳಿತುಕೊಳ್ಳುತ್ತಾನೆ.)

ಗೌಡ (ಮೆಲ್ಲನೆ ಕಾಚನಿಗೆ) ಹೇಳುತೀಯಾ ಮಂದಿಗೆ?

ಕಾಚ ಹೇಳುತೀನಿ, ಮಾವ ಏನಾರಾ ಹೇಳುತಾನೇ ಕೇಳು.

ಗೌಡ ಅವನ ಮಾತು ಏನೂ ಬೇಡಾಪ್ಪ. ಮಂದಿ ಮನಸು ಕದಡಿಬಿಡುತಾನ.

ಕಾಚ ಕದಡಲಿ ಬೇಕಾರೆ. ಅದಕಾಗ್ಯೆ ಗುಡಿಯಾಗೆ ಕೂತಿದ್ದು ಬಂದಿವಿನಿ. ಇವತ್ತು ಏನು ಆದರೂ ಆಯಿತೆ. ಮಂದಿ ಅವನ ಮಾತು ಇರಲಿ ಅಂದರೆ ಹಂಗೇ ಅನ್ನಲಿ. ನಾ

ಕಾಡಿಗೆ ಬೇಕಾದರೆ ನಡೀತೀನಿ. ಅಂತೂ ಇವತ್ತು ಎಲ್ಲಾ ಮನಸು ಮಾಡಬೇಕು, ಮುಗಿಸಬೇಕು.

ಗೌಡ — ಯಾಕ, ಕಾಕ. ಅವ ಮಾತಾಡೋದು ಬೇಡ ಅಂತೀನಿ. ಇದರ ಮೇಲೆ ನಿನ್ನ ಮನಸು.

ಕಾಚ — ಇಲ್ಲ, ನೀ ಬೆದರಬೇಡ ಕೇಳು.

ಗೌಡ — ಸರ‍್ಯಪ್ಪ (ಎಂದು) ಮಾವ, ಮಂದಿ ಎಲ್ಲಾ ಕಲೆತಾರೆ. ನೀ ಹೇಳೋದು ಏನಾರಾ ಇದ್ದರೆ ಹೇಳು, ಆಮೇಲೆ ಕಾಕ ಮಾತನಾಡತೀನಿ ಅಂತಾನೆ.

ಮಾವ — ನಾ ಏನೂ ಹೇಳಲ್ಲ. ನನ್ನ ಇವರು ಬ್ಯಾಡ ಅಂದು ನಾಲ್ಕು ಕಾರು ಆತು. ನಾ ಹೇಳೋದು ನಿಮ್ಮ ಕಾಕನಿಗೆ ಹೇಳಿವಿನಿ. ಅವ ಏನು ಹೇಳುತಾನೋ ಹೇಳಲಿ.

ಗೌಡ — ಕೇಳಿದ್ಯ ಕಾಕ? ನೀನೇ ಹೇಳಬೇಕಂತೆ.

ಕಾಚ — ಆಯಿತು. ಏನರಯ್ಯ, ಬೂಡಿನ ಮಂದಿ ಮುಂದಾಳು ಮಕ್ಕಳು,ಎಲ್ಲಾರೂ ನಾಹೇಳೂದ ಕೇಳಬೇಕು. ಕರಿಹೈದನ ಮಕ್ಕಳು ಅಂತಾ ನಾವು ಎಂಟು ಹಾಡಿಯವರು ಇಲ್ಲಿ ಕಲೆತಿದೀವಿ. ನಿಮ್ಮಲ್ಲಿ ನಾ ಒಬ್ಬ ಈಗ ಇರುತಿದೀನಿ. ಹೈದನಾಗಿದ್ದು ನಾ ಆನೆಕೂಟೆ ಮೈಸೂರಿಗೆ ಹೋದಿ. ಅಲ್ಲಿ ಆನೆ ಕರಹಟ್ಟೆ ಮಾವುತಿಗರ ನಾಯಕನಾದಿ. ದಿನ ಹೋಗಿ ಬೂಡಮೇಲೆ ಮನಸಾತು, ನಾಲ್ಕು ವರಸದ ಹಿಂದಾಗಿ ಇಲ್ಲಿಗೆ ಬಂದಿ. ನೀವೆಲ್ಲ ನನ್ನ ಕಾಕ ಅಂದಿರಿ ದೇವರಗುಡ್ಡ ಅಂದಿರಿ. ಈಗಲಾದರೂ ನಾ ಆ ದೇವರ ತಾವಿಂದಲೇ ಬಂದಿದೀನಿ (ಒಂದು ನಿಮಿಷ ಸುಮ್ಮನಾಗುತ್ತಾನೆ).

ಗೌಡ — ಓ ಅದು ಎಲ್ಲ ಬಲ್ಲರು. ಈಗತಾನೇ ಗುಡಿಯಿಂದ ಬಂದಿದೀಯಾ ನೋಡಲಿಲ್ಲೆ?

ಕಾಚ — ಸರ‍್ರೈ. ನಾ ಮೈಸೂರಿಂದ ಬಂದವನೆ ನಿಮಗೆ ಹೇಳಿದಿ. ಅಣ್ಣಾ ನನ್ನ ಮಂದಿ, ನಾ ಮೈಸೂರಾಗಿದ್ದು ನೋಡಿವಿನಿ

ಎಂಟು ಹಾಡಿ ಕುರುಬರದು ಅಂತ ಅರಸರಿಗೆ ಸಲುವಳಿ ಆಗೋದು ಎರಡು ಜೋಡಿ ಆನೆಕೊಂಬು ಎಂಟು ಸರವಿ ಜೇನು. ನೀವು ಹೆಗ್ಗಡೆಯೋರಿಗೆ ಕೊಡೋದು ಎರಡು ಜೋಡಿ ನಾಲ್ಕು, ಎಂಟು ಸರವಿ ನಾಲ್ಕು. ಹೆಗ್ಗಡೆ ದೊಡ್ಡೋರು. ಹೆಗ್ಗಡೆ ಇರಲಿ. ಅರಸರ ಪಾಲು ನಾಲ್ಕಾದರೆ ಹೆಗ್ಗಡೆ ಪಾಲು ಒಂದು ತಕ್ಕೊಳ್ಳಲಿ. ಹೆಚ್ಚು ಅವರು ಕೇಳೋದು ಬಾರದು. ಹೆಚ್ಚು ನೀವು ಕೊಡೋದು ಬಾರದು. ಕೊಡಲೇಬೇಕು ಅಂತ ಹೆಗ್ಗಡೆ ಹೇಳೋ ವ್ಯಾಳ್ಯಾಕ್ಕೆ ಅರಸರ ಕೇಳಿಕೊಳ್ಳೋಣಂತೆ. ಹಿಂಗಂತ ಹೇಳಿ ನಾ ಮುಂದೀನ ಏನಂತೀರಾ ಅಂತ ಕೇಳಿದಿ.

(ಒಂದು ಕ್ಷಣ ಸುಮ್ಮನಾಗುತ್ತಾನೆ.)

ಗೌಡ ಹೌದು ಕೇಳಿದ್ದುಂಟು. ನಾವೆಲ್ಲ ಆಗಲಿ ಅಂದಿವಿ. ಹೌದೇನರಣ್ಣ ?

ಎಲ್ಲರೂ ಹೌದು.

ಕಾಚ ನೀವು ಆಗಲಿ ಅಂದಿರಿ. ಹೆಗ್ಗಡೆಗೆ ಹಂಗಂತ ನಾವು ಹೇಳಿ ದಿವಿ. ಹೆಗ್ಗಡೆ ಒಪ್ಪಲ್ಲ. ಅವರಿಗೆ ಒಂದುಸಲ ಸಲ್ಲೋ ಕೊಂಬನ್ನ ಸರವೀನ ಅವರೇ ಕಳುವಿದರು ಅಂತ ಹೇಳಿ ಅರಸರ ಪಾಲು ಅಂತ ಮೈಸೂರಿಗೆ ಕಳುವಿದಿವಿ. ಒಪ್ಪಿಸಿದ ಕಪ್ಪಾನ ಅರಮನೆಯೋರು ಸಲಿಕೆ ತಕ್ಕೊಂಡರು. ಎಂಟು ಹಾಡೀ ಕಂದಾಯ ಸಂದಾಯ ಆಯಿತು. ಒಂದು ವರಸದ ಹೆಗ್ಗಡೆ ಪಾಲು ನಾಲ್ಕು ವರಸದ ರಾಯಪಾಲು ಆಯಿತು.

ಗೌಡ ಹೌದು. ಹೌದು ಅನ್ನಿರೋ.

ಎಲ್ಲರೂ ಹೌದು.

ಕಾಚ ಮೂರು ವರಸದ ಕಂದಾಯ ಸರಗೂರಾಗೆ ಕೊಟ್ಟು ಬೂಡಿನ ಮುಂದಿಗೆಲ್ಲಾ ಅರಿವೆ ಅಚ್ಚಡ ತಂದದ್ದಾಯಿತು.

ಗೌಡ ಹೌದು.

ಕಾಚ ಈಗ ಹೆಗ್ಗಡೆ ಬಂದದಾರೆ. ಅರಸರಿಗೆ ಒಂದು ಪಾಲು ನನಗೆ ಮೂರು ಪಾಲು ಕೊಟ್ಟರೆ ಸೈ, ಇಲ್ಲಿದೀರಾ ಇದ್ದರೆ ನಮ್ಮ ಕಾಡಾಗೆ ಇರಬೇಡಿರ, ಅಂತಾರೆ. ಕಾಡು ನಿಮ್ಮತಲ್ಲ ಅರಸರದು ಅಂತೀರಾ? ಇಲ್ಲ, ಕಾಡು ನಿಮ್ಮತೇ ಹೌದು ಕೇಳಿದ್ದು ಕೊಡುತೀವಿ ಅಂತೀರಾ? ನಾ ಹೇಳುತೀನಿ ಅರಸರದು ಅನ್ನೋಣ ಅಂತ; ಮಾವ ಹೇಳುತಾನೆ, ಹೆಗ್ಗಡೇನ ಒಪ್ಪೋನ ಅಂತ. ಏನಂದರೂ ಹೆಗ್ಗಡೆ ಹೆಗ್ಗಡೆ, ಅವ ಎದೆಮೇಲೆ ಕೂತರೆ ಮುಂದಿಗೆ ಉಬ್ಬಸ ಆಗುತದೆ, ಹೆಂಗೊ ಸರಿಸಿಕೊಂಡು ಹೋಗಬೇಕು, ತಿಕ್ಕಾಟ ಬೇಡ, ಅಂತಾನೆ. ಅವನ ಮಾತು ಇರಲೆ ನಿಮಗೆ? ನನ್ನ ಮಾತು ಇರಲೆ?

(ಒಂದು ಕ್ಷಣ ಸುಮ್ಮಸಾಗುತ್ತಾನೆ.)

ಗೌಡ ಏನು ಹೇಳುತೀರಾ?

ಎಲ್ಲರೂ ಕಾಕನ ಮಾತು ಇರಲಿ.

ಕಾಚ ಅರಿವೆ ಅಚ್ಚಡ ಬೇಕು ಅನ್ನೋ ಆಸರಿಗೆ ಕಾಕನ ಮಾತು ಇರಲಿ ಅಂದರೆ ಆಗದು. ಇವತ್ತು ಅರಿವೆ ಅಚ್ಚಡ ಚಂದ ಆದಹಂಗೆ ನಾಳೆ ಕಾಡು ಬಿಡೋ ಬಂದ ಬಂದಾತು. ಹೆಗ್ಗಡೆ ಬಂದು ಹಾಡೀಗೆ ಬೆಂಕೀ ಇಕ್ಕತೀನಿ ಅಂದರೆನಿಂತು ಕಾದಬೇಕು, ಸೋತರೆ ಓಡಬೇಕು. ಇದೂ ಇರಲಿ ಅಂತೀರೋ?

ಎಲ್ಲರೂ ಇರಲಿ ಅಂತೀವಿ.

ಕಾಚ ಇನ್ನು ನನ್ನ ಮಾವನಾ ಮಾತು ಬೇರೆ ಒಂದೆಡೆ. ಅದನೂ ಕೇಳಿ ಬೂಡಿನ ಮುಂದಿ ತೀರುಮಾನ ಮಾಡಿಬಿಡಿರ. ಮಾವ ಹೇಳತಾನೆ, ನಾನವನ ಹೆಂಡರನ ಬೆಳ್ಳಿಸಿ ಕರಕೊಂಡಿ ಅಂತ. ನಾನು ಹಂಗೆ ಕರಕೊಂಡೋನಲ್ಲ. ಅವ ಅವಳ ಹೊಡೆದ ಅಂತ ಅವ ಅವನ್ನ ಬ್ಯಾಡ ಅಂದಲು. ದೊಡ್ಡವರು ಸೇರಿ ಅವಳನ ಬಿಡಿಸಿದರು. ಆಮೇಲೆ ಅವಳು ನನ್ನ ಕೂಡಿ

ದಳು. ಹಾಡೀಲಿ ಹೆಣ್ಣ ಕಳುವೋದು ಸಲ್ಲ, ಬೂಡಲ್ಲಿ ಬುವ್ವ ಕಳುವೋದು ಸಲ್ಲ. ನಾ ಸಲ್ಲದ ಕೆಲಸಾನ ಮಾಡಿದೋನಲ್ಲ. ಕಂಡೋರು ಇದ್ದರೆ ಹೇಳಿರ.

ಮುದುಕರು ಹೌದು ಹೌದು.

ಮಾವ ಯಾತರದೊ ಹೌದು ಹೌದು? ಏನು ಹೌದಂತೀರಿ? ಯಾತರದು ಕಂಡಿರಿ?

ಕಾಚ ಆಯಿತು. ಆ ಮಾತು ಬೇಕಾರೆ ಆಮೇಲೆ ಆಡೋಣಂತೆ. ಇದು ಹೆಂಗಾರ ಇರಲಿ, ಮಾವನ್ನ ದೇವರಗುಡ್ಡನ್ನ ಮಾಡಿಕೊಳ್ಳಿ.

ಎಲ್ಲರೂ ಒಲ್ಲಿವಿ.

ಒಬ್ಬ (ಮುಂದಕ್ಕೆ ಬಂದು) ಮಾವ ಹಾಡೀಲಿ ಇರಲಿ, ಬೂಡಿಗೆ ಬರಲಿ, ಮುಂದಾಳಾಗಿ ಇರಲಿ. ಅಂದರೆ ನಮಗೆ ಕಾಕಾ ದೇವರ ಗುಡ್ಡಾ ನೀನೇ ಆಗಿರಬೇಕು.

ಕಾಚ ಅದೂ ಆಗಬಹುದು. ಅಂದರೆ ಮಾವನಿಗೆ ಹೇಳಿರ. ನನಗೇನೋ ಸಂತೋಸ ನಿಮ್ಮ ಕಾಕ ಅಂತ ಇರೋಕ. ಮಂದಿ ಅರಿವೆ ಅಂಗರೇಕ ಹಾಕ್ಕೊಂಡದ ನೋಡಿದರೆ ನನ ಕಣ್ಣು ಹಬ್ಬ ಕಂಡಂಗ ನಲೀತಾದ. ಅಂದರೆ ಮಾವ ನಾದರೂ ಸರ್ರೆ, ಯಾರಾದರೂ ಸರ್ರೆ, ನಾ ಈ ಪಟ್ಟಕ ಆಸೆಪಡುತೀನಿ ಅಂತ ತಿಳಿಯೋ ಹಂಗಿದ್ದರೆ ನನಗೆ ಇದರ ಮಾತೇ ಬೇಡ.

(ಮಾವನು ಎದ್ದು ಎತ್ತಲೋ ಹೋಗುವನು.) ನೋಡಿರ ಮಾವನಿಗೆ ಮನಸು ಚೆಂದಾಗಿಲ್ಲ.

ಗೌಡ ಆಯಿತು. ಇಂದಲ್ಲದಿದ್ದರೆ ನಾಳೆ ಚಂದಾಗತದೆ. ಈಗ ಇನ್ನು ಏನುಮಾಡೋಣ ಹೇಳು.

ಕಾಚ ಆದ ಹೇಳತೀನಿ ಈಗ ಹೋಗಿ ಒಸಿ ಮಾವನ ಒಪ್ಪಿಸೋಣ ಬಾ. (ಎಂದು ಅವರಿಬ್ಬರೂ ಹೊರಡುವರು.)

ಮುದುಕ ಹಿರಿಯೋರು ಅಂದದ ಕೇಳಿವಿನಿ. ಪಾಂಡ್ಯ ಬಂದ ಅಂತ ಕುರುಬ ನಾಡು ಬಿಟ್ಟು ಕಾಡು ಸೇರಿದನಂತೆ. ತೋಡ ಬಂದ ಅಂತ ಕಾಡಿನಾಗೆ ಸರಿಪಾಲು ಬಿಟ್ಟನಂತೆ. ಇನ್ನು ಕುರುಬ ಬಂದ ಅಂತ ಮಾವ ಕಾಡನೇ ಬಿಡು ಅಂತಾನೆ. ಇವನ ಮಾತಿಗೆ ಏನು ಅನ್ನೋದು? ಕಾಚ ಇರೋ ಮೊತ್ತಕ ಈಗ ನಾವು ಬದುಕಿಕೊಂಡಿವಿ. ತೆಗೀರಲಾ ಕಾಚನ ಒಸಗೆ. ಲೋ ಮೋನ.

ಮೋನ (ಹಾಡಿಕೊಂಡು ಕುಣಿಯುತ್ತಾನೆ. ತಮಟೆಯ ಮುದುಕ ತಮಟೆ ಹೊಡೆಯುತ್ತಾನೆ.)

ಕಾಕ ಇರಲಿ ನಮಗ
ಎಂದೆಂದು ಇರಲಿ
ನಮ್ಮ ಕಾಕ ನಮ್ಮ
ಇರಲಿ ನಮಗ
ಎಂದಿಗೂ ಇರಲಿ
ಕಾಕ ಇರಲಿ ನಮಗ.

ಮುದುಕ ಬನ್ನಿರೋ ಎಲ್ಲಾ ಕುಣೀರ.

(ಮಕ್ಕಳೆಲ್ಲ ಸೇರುತ್ತಾರೆ. ಹೇಳಿದ ಮಾತನ್ನೇ ಹೇಳುತ್ತ ಮೋನ ತೋರಿಸಿದಂತೆ ಕುಣಿಯುತ್ತಾರೆ. ಕುಣಿಯುತ್ತ ಕುಣಿಯುತ್ತ ಹೊರಟುಹೋಗುತ್ತಾರೆ.)

೪

[ಅದೇ ಸ್ಥಳ. ಅದೇ ಸಂಜೆ.]

(ಕಾಚ, ಗೌಡ, ಬರುತ್ತಾರೆ.)

ಗೌಡ ಏನು ತಡಕಾಡಿದರೂ ಸಿಕ್ಕಲಿಲ್ಲಲ್ಲ. ಮಾವಾ ಅಂತ ಕೂಗಿದ್ದಾಯಿತು. ಅತ್ತ ಇತ್ತೆಲ್ಲ ನೋಡಿದ್ದಾಯಿತು. ಇನ್ನೇನು ಮಾಡೋದು?

ಕಾಚ ಹೌದು. ಮಾವ ಮುನಿಸಿಕೊಂಡರೆ ಬೂಡುಗಳಿಗೆ ಒಳ್ಳೇದಲ್ಲೇ. ಏನು ಮಾಡೋದು.

ಗೌಡ ಓ ಅವ ಮುನಿಸಿಕೊಂಡಿದ್ದರೆ ಬೂಡುಗಳಿಗೆ ಏನಾತು? ಅದಿರಲಿ, ಯಾರನೋ ಅರಸರ ಬಳಿಗೆ ಅಟ್ಟಬೇಕಂದ್ಯೆ ಏನು ಅದು?

ಕಾಚ ಈಗ ಮಂದಿ ಎಲ್ಲ ನಮ್ಮ ಹಂಗೆ ಹೇಳುತಾರೆ. ಅಂದಮೇಲೆ ಹೆಗ್ಗಡೆಗೆ ಈ ಮಾತು ತಿಳಿಸಬೇಕು. ತಿಳಿಶಿದಿವಂದರೆ ಅವರು ಬೆಂಕಿಯ ಹಂಗೆ ಕಾಯುತಾರೆ. ಜನಾಸ ಕರಕೊಂಡು ಬೂಡುಗಳ ಮೇಲೆ ಬಂದರೂ ಬಂದರೆ. ಅದಕ್ಕೆ ಮುಂದಾಗಿ ಈ ಮಾತು ಅರಸರಿಗೆ ತಿಳಿಯೋ ಹಂಗೆ ಮಾಡಬೇಕು. ನೀ ಹೋದರೂ ಹೋಗಬಹುದು. ಅಂದರೆ ನೀ ಇಲ್ಲಿ ನನ್ನ ಜೊತೆಗೆ ಇರೋದು ಒಳ್ಳೇದಂತ ತೋಚತದೆ.

ಗೌಡ ನೀನೇ ಹೋದರೆ?

ಕಾಚ ಇಲ್ಲಿ ಹೆಗ್ಗಡೇಗೆ ಹೇಳೋರು? ಹೆಗ್ಗಡೆಗಾದರೂ ಹೇಳೀಯೆ. ಆ ಕರಣೀಕ ಏನಾರೂ ಮಾಡುತಾನೇ, ಅವನಿಗೆ ಹೇಳೋರು?

ಗೌಡ ಅದೇನೋ ಮೆಯ್. ತಮ್ಮ ಗೌಡನ್ನ ಕಳುವಿದರೊ? ಅರಸರು ಅವನ್ನ ಕಾಣಿಸಿಕೊಳ್ಳುತಾರೋ ಇಲ್ಲೊ? ಹೆಂಗೆ ಕಾಣಬೇಕು, ಏನು ಹೇಳಬೇಕು, ಏನು, ಅನ್ನೋದನೆಲ್ಲಾ ಅವನಿಗೆ ಹೇಳಿಕೊಡಬೇಕು.

ಕಾಚ ಹೇಳುತೀನಿ. ಅರಸರು ಎರಡು ದಿನ ಮೂರು ದಿನಕೆ ಒಮ್ಮೆ ಆನೇಮನೆಗೆ ಬರುತಾರೆ. ಆ ಹೊತ್ತಿನಾಗ ಅಲ್ಲಿದ್ದು ಮೊಕ್ಕಿ ನನ್ನ ಹೆಸರು ಹೇಳಿ ಕಳುವಿದಾನೆ ಅಂದರೆ ಏನು ಅಂತಾರೆ. ಹಿಂಗೆ ಕಷ್ಟದಾಗೆ ಇದೀವಿ, ನಮ್ಮ ಕಾದುಕೋಬೇಕು ಅಂತ ಕೇಳಿಕೋತಾನೆ ಅಂದರೆ ಬಂದುಬಿಡುತಾರೆ.

ಗೌಡ ಏನು! ಅರಸರು ತಾವೇ ಬಂದುಬಿಡುತಾರಾ?

ಕಾಚ ತಾವೇ ಬಂದುಬಿಡುತಾರೆ. ಎಲ್ಲಿ ಆದರೂ ಸರ್ಯೆ. ಯಾತರ ದಾದರೂ ಸರ್ಯೆ. ಇಲ್ಲಿ ಕಷ್ಟ ಅಂದರೆ ಅದು ನಂದು ಅಂತ ಬರೋರು ರಣಧೀರ ಅರಸರು. ಹೋಗಿ ಹೇಳಿದರೆ ಸರಿ. ನಾನು ಇತ್ತ ಬರೋಕಾಲಕ ಇಂತದೇನಾದರೂ ವ್ಯಾಳ್ಯ ಒದಗ್ಯಾತು ಅಂತ, ನಾ ಬೇಡಿದಾಗ ಬರಬೇಕು ಅಂತ ಕೇಳಿ ಕೊಂಡಿನಿ. ಆಗಲಿ ಅಂದರು. ತಮ್ಮ ಗೌಡನ್ನ ಅತ್ತ ಅಟ್ಟಿ ಎರಡು ದಿನ ಬಿಟ್ಟುಕೊಂಡು ಇತ್ತ ಹೆಗ್ಗಡೇ ಹತ್ತಿಲಿ ಹೋಗೋಣ. ಏನಾಗತದ ಅಂತ ನೋಡೋಣ. ಅವರು ಮುನಿದು ಏನಾದರೂ ಮಾಡೋ ವ್ಯಾಳ್ಯಕ್ಕೆ ನಮ್ಮ ಮಾತು ಅರಸರಿಗೆ ಮುಟ್ಟಿ ಅವರು ಬಂದಿರತಾರೆ. ಎಲ್ಲಾ ಸರಿಯಾಗತದೆ.

ಗೌಡ ಅವರು ಬರದೇ ಇದ್ರೆ?

ಕಾಚ ಇಲ್ಲ, ಬರತಾರೆ.

ಗೌಡ ಅವರು ಬರೋಕಂಟ ನಾವು ಹೆಗ್ಗಡೇನ ನೋಡೋದು ಬೇಡ.

ಕಾಚ ಅವರು ಬರೋಕಂಟ ನಾವು ಹೆಗ್ಗಡೇನ ನೋಡದೀರ ಇರೋದು ಆಗೋಲ್ಲ. ನಾಳೆ ನಾಡದು ನಾವು ಹೋಗದಾ ಇದ್ರೆ ಅವರು ಜನಾನ ಕಟ್ಟಿಕೊಂಡು ಹಾಡಿಮ್ಯಾಲೆ ಹಾಯಬಹುದು.

ಗೌಡ ಕಾಕನ್ನ ಕರತರತೀವಿ ಅಂದಿವೆ, ನೀನು ಕಾಕ ಅಂತ ಹೇಳಬೇಕಲ್ಲ.

ಕಾಚ ನಮ್ಮ ನಮ್ಮ ಮಾತಿಗೆ ಬೇಕಾರೆ ನಾ ಕಾಕ ಆದೇನು. ಹೆಗ್ಗಡೇಗೆ ತೋರಿಸೋಕೆ ಕಾಕ ನಾನಲ್ಲ. ಅವ ಬೇರೆ ಅದಾನೆ.

ಗೌಡ ಬೇರೆ ಯಾರು ಕಾಕ ?

ಕಾಚ ಅವ ಬರುತಾನೆ, ಬಂದಾಗ ಹೇಳುತೀನಿ.

ಗೌಡ ಏನು ಕಾಕ ನೀನು ನನಗೇ ಮಂಕುಮಾಡುತಿದೀಯಲ್ಲ.

ಕಾಚ ಹೌದು ಗೌಡಣ್ಣ ಮುನಿಸುಕೋ ಬೇಡ. ಇವತ್ತು ತಮ್ಮ ಗೌಡನ್ನ ಮೈಸೂರಿಗೆ ಅಟ್ಟು. ಇದು ಯಾರಿಗೂ ತಿಳಿಯ ಬಾರದು. ಮುಂದಿನ ಮಾತು ಹೇಳೋಕೆ ನಾಳದ್ದು ಬರು ತೀನಿ ಅಂತ ಹೆಗ್ಗಡೇ ಕಿವಿ ಮುಟ್ಟಿಸು. ಮೂರು ದಿನ ಬಿಟ್ಕೊಂಡು ನಾನೂ ನೀನೂ ಹೋಗೋಣ. ಜೊತೆಗೆ ನಾಲ್ಕು ಹೈಕಳು ಬರಲಿ. ಈ ಮಾತು ಆ ಮಾತು ಆಗಿ ಅವರು ಹಾಂ ಹೂಂ ಅನ್ನೋಹೊತ್ತಿಗೆ ತಮ್ಮ ಗೌಡ ಅರಸರನ ಕರತರುತಾನೆ. ಎಲ್ಲಾ ಸರಿಯಾಗುತದೆ.

ಗೌಡ ಕಾಕ ನಾ ಅಲ್ಲ ಇನ್ನೊಬ್ಬ ಅದಾನೆ ಅಂತ ನೀ ಅಂದರೆ ಮಂದಿ ಒಪ್ಪತದೆಯಾ ?

ಕಾಚ ಅದರ ಮಾತು ಹೇಳತೀನಿ ಬಾ. ತಮ್ಮ ಗೌಡನ್ನ ಅಟ್ಟೋ ಕೆಲಸ ನೋಡು ಮೊದಲು.

(ಎಂದು ಮುಂದುವರಿಯುವನು.)

ಗೌಡ ಹಂಗೇ ಆಗಲಪ್ಪ, ಯಾವದೂ ನೀ ಹೇಳಿದ ಹಂಗೆ.

(ಇಬ್ಬರೂ ಹೋಗುವರು.)

೫

[ಹೆಗ್ಗಡೆಯ ಪಾಳೆಯ. ಹೆಗ್ಗಡೆ, ಕರಣೀಕ. ಹಿಂದೆ ಮಾಚಣ್ಣ, ಮಾವ.]

ಕರಣೀಕ — ಕಾಕ ಅನ್ನೋನು ಬೇರೆ ಅಲ್ಲ. ಆ ಜಂಬದ ಕೋಳಿ ಇದಾನಲ್ಲ ಅವನೇ ಅಂತ ಇವ ಹೇಳತಾನೆ.

ಹೆಗ್ಗಡೆ — ಇಲ್ಲಿ ಕಂದಾಯ ಎತ್ತಿದರೆ ಕಾಕ ನಿಮ್ಮ ಉಸಿರು ತೆಗೆಯುತಾನೆ ಅಂದನಲ್ಲ. ತಾನೇ ಕಾಕನಾಗಿ ತಾನೇ ಹೀಗೆ ಹೇಳುತಾನೆಯೆ?

ಕರಣೀಕ — ಅವನ ಸ್ವಭಾವ ಬಹಳ ಜಂಭದ ಸ್ವಭಾವ. ಇವ ಹೇಳುತಾನೆ, ಈ ಕಾಕ ಅನ್ನೋನು ಮೈಸೂರಲ್ಲಿ ಆನೇಮನೆ ಹತ್ತಿರ ಕಸಗಿಸ ಗುಡಿಸುತ ಇದ್ದನಂತೆ. ಈಗ ನಾಲ್ಕು ವರ್ಷದ ಹಿಂದೆ ಬಂದು ತಾನು ಬಹಳ ಮೈಸೂರು ಕಂಡೋನು ಅಂತ ಗ್ರಾಮಗಳವರಿಗೆ ಹೇಳಿ ಇವರನ್ನ ಎತ್ತಿಕಟ್ಟಿದಾನೆಯಂತೆ. ಇವರು ತಿಳಿಯದವರು. ಇರಬಹುದೇನೋ ಅಂತ ಅವನ ಮಾತಿಗೆ ಮರುಳಾಗಿದಾರೆಯಂತೆ.

ಹೆಗ್ಗಡೆ — ಹೌದು, ಈಗ ಬಂದಿರೋನು ಏನಾರೂ ನಮಗೆ ಮೋಸ ಮಾಡೋಕೆ ಬಂದಿದ್ದರೆ?

ಕರಣೀಕ — ಅದಿಲ್ಲ ಅಂತ ಕಾಣುತ್ತೆ. ಮೊದಲು ಇವನೇ ಬುದ್ಧಿವಂತ ದೇವರಗುಡ್ಡ ಆಗಿದ್ದನಂತೆ. ಈ ಕಾಕ ಬಂದ ಮೇಲೆ ಗ್ರಾಮಗಳವರು ಇವನ್ನ ಬೇಡ ಅಂತ ಹೇಳಿ ಅವನ್ನ ಕಾಕ ಕಾಕ ಅಂತ ಬುದ್ಧಿವಂತನ್ನ ದೇವರಗುಡ್ಡನ್ನ ಮಾಡಿಕೊಂಡರಂತೆ. ತನ್ನ ಕೆಡಿಸಿದ ಅಂತ ಇವನಿಗೆ ಅವನ ಮೇಲೆ ಕೋಪ. ಅದರಿಂದಲೇ ಇಲ್ಲಿ ಬಂದು ನಮಗೆ ಇದನೆಲ್ಲಾ ಹೇಳುತಾ ಇದಾನೆ.

ಹೆಗ್ಗಡೆ — ಒಳ್ಳೇದು. ಅವನ ಕರೆಯಿರಿ ನೋಡೋಣ.

ಕರಣೀಕ — ಆಯಿತು. (ಎಂದು ಕೂಗಿ ಹೇಳುತ್ತಾನೆ.) ಎಲಯ್ಯ ಮಾಚನಾಯಕ.

ಮಾಚಣ್ಣ ಸ್ವಾಮಿಗಳೆ (ಎಂದು ಮುಂದೆ ಬರುತ್ತಾನೆ.)

ಕರಣೀಕ ಆ ದೇವರಗುಡ್ಡನ್ನ ಕರತಾ.

ಮಾಚಣ್ಣ ಅಪ್ಪಣೆ. (ಎಂದು ಹೋಗಿ ಮಾವಯ್ಯನನ್ನ ಕರೆದುಕೊಂಡು ಬರುವನು.)

ಕರಣೀಕ (ಮಾವಯ್ಯನಿಗೆ) ಅಣ್ಣಾ, ದೇವರಗುಡ್ಡ, ನನಗೆ ಹೇಳಿದ ಮಾತು ಹೆಗ್ಗಡೆಗಳಿಗೆ ತಿಳಿಯುಹೇಳು.

ಮಾವ ಇನ್ನೇನು ಹೇಳೋದು. ಈ ಮೊಂಡಾಟ ಬಂದಿರೋದೆಲ್ಲ ಈ ಕಾಕನಿಂದ; ಮೈಸೂರಾಗಿದ್ದು ಮೂರು ಹೊನ್ನು ತಂದವನೆ. ಮುಂದಿ ಮರುಳಾಗಿ ಇವ ಹೇಳಿದ ಹಂಗೆ ಕುಣೀತವರೆ. ಅವನ್ನ ಹಿಡಿದರೆ ಎಲ್ಲಾ ಸರಿಹೋಗತದೆ. (ಮೋನ ಒಂದು ಕಡೆಯಿಂದ ತಲೆಹಾಕಿ ಇವರನ್ನೆಲ್ಲ ನೋಡಿ ಮರೆಯಾಗುತ್ತಾನೆ.)

ಹೆಗ್ಗಡೆ ನಿಮ್ಮ ಈ ಬುದ್ಧಿವಂತ ಅನ್ನೋನೇ ಕಾಕನೆ ಹಂಗಾದರೆ?

ಮಾವ ಇನ್ಯಾರು ಕಾಕ?

ಹೆಗ್ಗಡೆ ಕಾಕನ್ನ ಕರತಾ ಅಂದರೆ ಅವನು ಇಲ್ಲಿ ಇದಾನೊ ಇಲ್ಲೋ ನೋಡಿಬಂದು ಹೇಳುತೀನಿ ಅಂತ ಅವನೇ ಹೇಳಿದನೇ.

ಮಾವ ಊಂ. ಹೇಳುತಾನೆ.

ಕರಣೀಕ ಅವನಿಗೆ ಸುಳ್ಳು ಹೇಳೋದು ಕಷ್ಟಾನೆ? ಬೇಕಾದರೆ ನಾ ಅರಸರನ ಕರಸುತೀನಿ ಅಂತಾನಂತೆ. ಅವನ ಮಾತಿಗೇನು?

ಹೆಗ್ಗಡೆ ಒಳಿತಾಯ್ತು. ಅವನ್ನ ಅತ್ತಲಾಗಿ ಕಳುಹಿಸಿ (ಕರಣೀಕನು ಸನ್ನೆಮಾಡುತ್ತಾನೆ. ಮಾಚನಾಯಕ ಮಾವನನ್ನು ಕರೆದುಕೊಂಡು ಆಚೆಗೆ ಹೋಗುತ್ತಾನೆ.) ಇದೇನೋ ಈ ಮಾತೆಲ್ಲ ಕಟ್ಟಿದ ಮಾತು ಅಂತ ಕಾಣತದಲ್ಲ. ಇದರಲ್ಲೇನೂ ಮೋಸ ಇಲ್ಲ ಅಂತೀರಾ? ಅರಸರನ ಕರಸತೀನಿ ಅಂತ ಇವ ಹೇಳೋದುಂಟೆ?

ಕರಣೀಕ ಈಗಿನ ಅರಸರನ್ನ ಅಂದರೂ ಅಂದರೆ. ಎಲ್ಲಿಯಾದರೂ ತುಂಟರಿಬ್ಬರು ಕಾದುತಾರೆ ಅಂದರೆ ಇವರು ವಿನೋದ ನೋಡೋಕೆ ಹೋಗುತಾರಂತೆ. ನಾವು ಜಗಳವಾಡುತೀವಿ ನೋಡಿ ಬನ್ನಿ ಅಂತ ಇವ ಪೇಳಿಕಳುಹಿಸಿದರೆ ಅವರು ಬಂದರೂ ಬರಬಹುದೇನೋ!

ಹೆಗ್ಗಡೆ ನಾಲ್ಕು ವರುಷದಿಂದ ಇವರಕಡೆ ಕಂದಾಯ ನಾವು ಸಲ್ಲಿಸಿಲ್ಲ. ಯಾಕೆ ಸಲ್ಲಿಸಲಿಲ್ಲ ಅಂತ ಕೇಳದಿದ್ದ ಅರಮನೆ ಈ ಮಾತಿಗೆ ಬಂದೀತೆ?

ಕರಣೀಕ ಹುಂಜದ ಕಾಳಗ ನೋಡುತಿರೋರಿಗೆ ಕಂದಾಯ ಸಂದಿತೋ ಇಲ್ಲವೋ ಕೇಳೋಕೆ ಹೊತ್ತಿರುತದೆಯೇ? ಉಳಿದಿದ್ದ ಕಳುಹೋವಾಗ, ಇದು ಬಂದಿಲ್ಲ ಬಂದಾಗ ಕಳುಹಿಸುತೀವಿ, ಅಂದಿವಿ. ಅಷ್ಟೇ ಆಯಿತು. ಬಂದಿಲ್ಲ ಕಳಿಸಿಲ್ಲ ಅಂತ ಸಮ್ಮನಿದ್ದಾರೆ.

ಹೆಗ್ಗಡೆ ಊರಾಗಿರುತಾ ಕಾಣಿಕೇ ಕೇಳದೋರು ಕುರುಬರನ್ನ ಹೊರೆಯೋಕೆ ಕಾಡಿಗೆ ಬಂದಾರೆ? ಅಂತೂ ಇದು ನೋಡಬೇಕು. ಗೌಡರೂ ಈವತ್ತು ಬರಬೇಕಲ್ಲ?

ಕರಣೀಕ ಹೌದು. ಮಧ್ಯಾಹ್ನ ಬರಬೇಕು. ಬರತಾರೆ ಅಂತ ಅವರ ಕಡೆ ಮನುಷ್ಯ ಬಂದು ಹೇಳಿದ. ಮಾಚನಾಯಕನ್ನ ಆ ಕಾಕನ ಹಿಂದೇನೇ ನಿಂತಿರು ಅಂತ ಹೇಳುತೇನೆ. ಅವನ್ನ ಇವತ್ತು ಹಿಡಿಯಬೇಕು. ಕಂದಾಯ ಕೊಡೋದು ತಪ್ಪಿಸಿದೋನು ಅಂತ ಅವನ್ನ ಕೋಟೆಯಲ್ಲಿ ಸೆರೇಗಿಟ್ಟರೂ ಆಯಿತೆ. ಮೈಸೂರಿಗೆ ಕಳುಹಿಸಿದರೂ ಆಯಿತೆ. ಇವರ ಪುಂಡಾಟ ಮುಗಿಯುತ್ತದೆ.

ಹೆಗ್ಗಡೆ ಒಳಿತು ಹಾಗೇ ಮಾಡಿ. ಕೆಲ ಜನ ಸಿದ್ಧವಾಗಿರಲಿ. ಚಿಕ್ಕಯ್ಯನಿಗೂ ಹೇಳಿ ಏರ್ಪಾಡು ಮಾಡಿ (ಎಂದು ಬಿಡಾರದ ಒಳಕ್ಕೆ ಹೋಗುವನು).

ಕರಣೀಕ ಎಲಯ್ಯ ಮಾಚನಾಯಕ.

ಮಾಚಣ್ಣ ಅಯ್ಯನೋರೆ (ಎಂದು ಬರುತ್ತಾನೆ).

ಕರಣೀಕ ಇನ್ನು ಸ್ವಲ್ಪಹೊತ್ತಿಗೆ ಆ ಗೌಡ, ಕಾಕ ಬರತಾರೆ. ಆ ಹೊತ್ತು ನಮ್ಮನ್ನೆಲ್ಲಾ ಬೆದರಿಸಿದನಲ್ಲಾ ಆ ಬುದ್ಧಿವಂತ, ಅವನೇನಂತೆ ಕಾಕ. ಮಾತುಕತೆ ಏನಾಗುತದೆ ನೋಡು ತೀನಿ. ನೀನು ಅವನ ಹಿಂದಾಕಡೆಗೇ ನಿಂತಿರು. ಅತ್ತಾಗೆ ನಾಲ್ಕು ಜನಾನ ನಿಲ್ಲಿಸಿರು. ನಾನು ಸನ್ನೆಮಾಡಿದಾಗ ಅವನನ್ನ ಹಿಡಿದುಕೊ. ನಾನು ಸನ್ನೆಮಾಡದೇ ಇದ್ದರೆ ಹೊರಟುಹೋಗಲಿ ಬಿಟ್ಟುಬಿಡು. ಅನಕಾ ಅವನ ಹಿಂದಾ ಕಡೆ ನಿಂತು ಅತ್ತ ಇತ್ತ ನೋಡುತಿರೊ ಹಂಗೆ ನೋಡುತಾ ಕಾದಿರಬೇಕು. ತಿಳಿಯಿತೆ ?

ಮಾಚಣ್ಣ ತಿಳೀತು ಅಯ್ಯನೋರೆ.

ಕರಣೀಕ ಇಲ್ಲೇ ಇರು ನೀನು. ಅವರು ಬಂದರೆ ಬಿಡಾರದಾಕ್ಕೆ ಬಂದು ತಿಳಿಸು. ಅವರ ಕೂಟೆ ಇಲ್ಲೇ ಮಾತನಾಡೋಣಂತೆ. ನಾ ಹೋಗಿ ಚಿಕ್ಕಯ್ಯಗಳಿಗೆ ಇದನ್ನೆಲ್ಲಾ ಹೇಳಿರು ತೀನಿ (ಎಂದು ಒಳಗೆ ಹೋಗುವನು).

ಮಾಚಣ್ಣ (ಒಂದೆರಡು ಹೆಜ್ಜೆ ಹಾಗೆ ಹೀಗೆ ನಡೆದು) ಓಹೊ ಇವರು ಬಂದರು. ಇದೇನೊ ಗುಟ್ಟಾಗಿ ಮಾತನಾಡಿಕೋತಾ ಇದಾರೆ. ಇದನೆಲ್ಲ ಕೇಳಿ ತಿಳಿದರೆ ಚೆನ್ನಾಗಿದ್ದೀತು. ನೋಡೋಣ (ಎಂದುಕೊಂಡು ಒಳಕ್ಕೆ ಹೋಗುವನು).

(ಕಾಚ ಗೌಡ ಮೋನ ಬರುವರು.)

ಮೋನ ನಾನು ಕಣ್ಣಿಂದ ನೋಡಿದಿನಿ, ಮಾವಯ್ಯ ಇವರ ಕೂಟ ಮಾತನಾಡುತ ಇದ್ದವನ್ನ.

ಕಾಚ ಅನಕಾ ಮಾವನ ಉಮ್ಮಳ ಈಸು ದೂರ ಮುಟ್ಟಿತಲ್ಲ. ಏನಂತಾ ಇದ್ದರು ಮಾತು ಗೀತು ಕೇಳಿತಾ ?

ಮೋನ ಅವನ್ನ ಹಿಡಿದರೆ ಎಲ್ಲಾ ಸರಿಹೋಗುತದೆ ಅಂತಾ ಇದ್ದರು.

ಗೌಡ ಯಾರನ್ನ ಅಂದಿರಬಹುದು ಅವರು ?

ಕಾಚ ಆಮೇಲೆ ?

ಮೋನ ನಾನು ತಲೆಹಾಕಿ ಮಾವನ್ನ ಇವರನ್ನ ಕಂಡಿ. ಈ ಮಾತು ಕೇಳಿಸಿತು. ಬೇರೆ ಏನಾನ ಕೇಳೋಕೆ ಮುನ್ನ ಅವರು ಈ ಕಡೇಕೆ ತಿರುಗಿದ ಹಂಗಾತು, ನಾ ಮರೆ ಆದಿ. ಇನ್ನೇನೂ ತಿಳೀಲಿಲ್ಲ.

ಕಾಚ ಹಿಡೀಬೇಕು ಅಂದರೋ ? ನನ್ನ ಹಿಡೀತಾರಂತ ಕಾಣತದೆ. ಸರ್‍ಯೆ. ಗೌಡಣ್ಣ ಆ ಹಾವು ನಾವು ಕಂಡದ್ದು ಯಾವ ಮರದಡೀಲಿ. ದೊಡ್ಡ ತ್ಯಾಗದಡೀಲಿ ಅಲ್ಲೆ ? (ಎಂದು ಮೋನನನ್ನು ಒಂದು ಕಡೆಗೆ ಕರೆದು ಕಿವಿಯಲ್ಲಿ ಏನೋ ಹೇಳಿ) ಹೋಗಿ ಬೇಗನೇ ತರಬೇಕು. ನೀ ಬರೋತನಕ ನಾವು ಅವರ ಕೂಟೆ ಮಾತಿಗೆ ಮೊದಲುಮಾಡೋಲ್ಲ. ನಾ ಹುಯಿಲಿಟ್ಟಾಗ ನಾ ಹೇಳಿದಂಗೆ ಮಾಡು. ಏನು ?

ಮೋನ ಆಗಲಿ ಕಾಕ. ನನಗೆ ಇಂತ ಕೆಲಸ ಮಾಡೋಕೆ ಬಾಳ ಸಂತೋಸ. (ಎಂದು ಹೋಗುವನು.)

ಕಾಚ ಗೌಡಣ್ಣ, ನೋಡಿದೋ ಮಾವಯ್ಯ ಎಂತಾ ಕೆಲಸ ಮಾಡಿದಾ ? ತನ್ನೊಬ್ಬನ ಮುನಿಸಿಗಾಗಿ ಬಳೀನೇ ಕೆಡಿಸು ತೀನಿ ಅಂತಾನೆಯೆ ! ಈಗೇನು ಮಾಡೋದು ?

ಗೌಡ ಇವರನ್ನ ಈಗ ಕಂಡರಲ್ಲೇ ಇವರು ನಿನ್ನ ಹಿಡಿಯೋದು ! ಸುಮ್ಮನೆ ಹಾಡೀಗೆ ನಡಿ. ಹೆಂಗೆ ಹಿಡೀತಾರೆ ?

ಕಾಚ ನಾವು ಇವರನ್ನ ಕಾಣದೀರ ಹಂಗೇ ಹೋದರೆ ಅವರು ನನ್ನ ಇಲ್ಲಿ ಹಿಡಿಯೋಲ್ಲ, ಹಿಂದೆ ಬರತಾರೆ. ಹಾಡೀ ಬೂಡು ಸುಡುತಾರೆ. ಇವನನ್ನ ಕರತನ್ನಿ, ಇಲ್ಲದಿದ್ದರೆ ಜೀವ ತೆಗೀತೀವಿ ಅಂತಾರೆ. ಹಾಡೀಗೆ ಹೊಂಟೋದರೆ ಏನಾದ ಹಂಗಾತು ?

ಗೌಡ	ಮತ್ತಿನ್ನು ಕಾಣಿಸಿಕೊಂಡಿವಿ ಅಂದರೆ ನಿನ್ನ ಹಿಡೀತಾರಲ್ಲ! ನಿನ್ನ ಹಿಡಿದಮೇಲೆ ನಾವೇನು ಮಾಡೋದು? ಎಲ್ಲಾ ಆದಹಂಗೇ ಆತು.

ಕಾಚ	ಹಿಡಿದರೇನೊ ಕಷ್ಟಾ ಅನ್ನು. ನೀನು ಮೈಸೂರಿಗೆ ಹೇಳಿಕಳುವಿ ಅರಸರನ ಬರಮಾಡಿಕೊಂಡು ನನ್ನ ಉಳುಹಬೇಕಾಗುತದೆ.

ಗೌಡ	ಆವರೆಗೆ ಇವರು ನಿನ್ನ ಉಳಿಸಿದ್ದರೆ.

ಕಾಚ	ಹೌದು. ಉಳಿಸದೀರಾ ಬಿಟ್ಟರೆ ನನ್ನ ಕೆಲಸ ಏನೋ ಚಂದೇ ಆಯಿತು. ಅಂದರೆ ಹಾಡೀ ನನ್ನಿಂದ ಕೆಟ್ಟಂತೆ ಆದಾತು. ಆಗ್ಯೆ ಇನ್ನ ತಿರಗಾ ಇವರನ ಮೇಲೆ ಹಾಕಿಕೊಳ್ಳದೆ ಕಂದಾಯ ಕೊಡುತೀವಿ ಅನ್ನಬೇಕು. ಅರಸರಿಗೆ ಕೇಳಿಕೊಂಡು ಕಡಮೆ ಮಾಡಿಸಿಕೊಬೇಕು. (ಮಾಚನಾಯಕ ಒಂದು ಕಡೆಯಿಂದ ಇಣಿಕಿನೋಡಿ ಮೆಲ್ಲಗೆ ಬರುತ್ತಿರುವುದನ್ನು ತಿಳಿದು) ಗೌಡಣ್ಣ, ನಮ್ಮ ನಾಯಕರು ಹೊಂಚಿ ಕೇಳುತವರೆ. ಎರಡು ಮಾತು ಹೇಳುತೀನಿ. ನಿನಗೆ ತಿಳಿಯೋಲ್ಲ. ಸುಮ್ಮನೆ ಹೂಂಕುಟ್ಟು.

ಗೌಡ	ಹೂಂ. (ಈ ವೇಳೆಗೆ ಮಾಚ ಇವರ ಹಿಂದೆ ಒಂದು ಪೊದೆಯ ಮರೆಗೆ ಸೇರಿ ನಿಲ್ಲುತ್ತಾನೆ.)

ಕಾಚ	ಬೇಡ ಬೇಡ ಅಂದರೂನೂವೆ ನಮ್ಮ ಕಾಕ . . .

ಗೌಡ	ಹೂಂ.

ಕಾಚ	ನಾ ಬೇಡ ಅಂದಿ; ನೀ ಬೇಡ ಅಂದಿ; ನಮ್ಮ ಮಾತು ಕೇಳದೀರ ತಾನೊಬ್ಬವನೇ ಮುಂದಾಗಿ ಬಂದು ಇಲ್ಲಿ ಸಿಕ್ಕಿಕೊಂಡಿದಾನೆಯೋ ಇದಕೇನು ಮಾಡೋದು?

ಗೌಡ	ಏನು ಮಾಡೋದು?

ಕಾಚ	ಇವ ಕಾಕ ಅಂತ ಅವರಿಗೆ ತಿಳಿಯೋಕಂಟ ಆಗಲಿ ಅನ್ನಬಹುದು. ಕಾಕ ಅಂತ ಅವನ್ನ ನೇಣಿಗೆ ಹಾಕಿದರೆ ನಮಗೆ ದಿಕ್ಕು ಯಾರು?

ಗೌಡ ದಿಕ್ಕೋ ಗಿಕ್ಕೋ.

ಕಾಚ ಕಾಕ ಬರಲ್ಲ ಅನ್ನೋಣ ಅಂದೆ. ಬೇಡ ಅಂದ. ಕಾಕ ಊರಾಗಿಲ್ಲ ಅನ್ನಿ ನೀವು, ಆ ಕಾಚನೇ ಕಾಕ ಅಂತೀನಿ ನಾನು, ನಿನ್ನ ಅವರು ಹಿಡಿದರೂ ಭಯ ಇಲ್ಲ, ನಾ ಬಿಡಿಸಿ ಕೋತೀನಿ, ನಾ ಇಲ್ಲಿ ಇದ್ದು ಇವರ ಬಾಳು ಬಟ್ಟೆ ತಿಳುಕೊಳುತೀನಿ, ಹೆಗ್ಗಡೇನ ಕೊಂದರೂ ಕೊಂದಿ ರಾತ್ರೀಕೆ, ಅಂದನಲ್ಲ. ಇದೆಲ್ಲಾ ಮಾಡತಾ ಇವನೇನಾದರೂ ಆದರೆ ಕೆಲಸ ಕೆಟ್ಟತೇ? ಇದಕೆ ಹೆಂಗೆ?

ಗೌಡ ಹೆಂಗಪ್ಪಾ ಇದಕೆ? ಹೇಳಿದ ಮಾತು ಕೇಳೋಲ್ಲೆ!

ಕಾಚ ಯಾವಾಗಲೂ ನಮ್ಮ ಕಾಕನ ಕೆಲಸ ಹಿಂಗೇ ಆಯಿತು. ಬೆಂಕಿಯಾಕ್ಕೆ ಹೋಗೋದು ಅರ್ದ ಸುಟುಕೊಂಡು ಬರೋದು. ಸುಳಿಯಾಕೆ ಈಸೋದು ಸಾವು ತಪ್ಪಿಸಿಕೊಂಡು ಬರೋದು. ಹುಲಿ ಬಾಯಾಗ ಕೈಯಿಟ್ಟು ಗಾಯ ಮಾಡಿಕೊಂಡು ಬರೋದು. ಎಷ್ಟುದಿನ ಹೋದರೂ ಇವನಿಗೆ ಬುದ್ಧಿ ಬರಲಿಲ್ಲವೇ.

ಗೌಡ ಬರಲಿಲ್ಲಪ್ಪಾ.

ಕಾಚ ಇವನಿಗೇನಾರಾ ಆದಾತು ಅಂತ ನಾವೆಲ್ಲ ನಡುಗುತಿರಬೇಕಾದರೆ ಇವನಿಗೆ ಇದೆಲ್ಲಾ ಬರೇ ಆಟ ಆಗಿಬಿಟ್ಟಿತು. ಹಾಡೀ ಏನಾರ ಆಗಲಿ ಬೂಡೇನಾರ ಆಗಲಿ ಇವನ ಆಟ ಇವಗೆ ದೊಡ್ಡದಾತು. ನನ್ನ ಕಾಕ ಅಂತ ಇವ ಹೇಳಿ ಅವರು ನನ್ನ ಹಿಡಿದರೆ ನಾ ಏನು ಮಾಡೋದು? ಕಾಕನ ಮರ್ಯಾದೆ ಇವನಿಗೆ, ಕಾಕನ ನೇಣು ನನಗೆ?

ಗೌಡ ಏನು ಮಾಡೋದಪ್ಪಾ. ಮೆಲ್ಲಗೆ ಮಾತಾಡು, ಯಾರಾರ ಕೇಳ್ಯಾರು.

ಕಾಚ ಇಲ್ಲ, ಯಾರೂ ಇಲ್ಲ. ಅತ್ತ ಇತ್ತ ನೋಡಿ ಯಾರೂ ಇಲ್ಲ ಅಂತ ತಿಳದೇ ನಾ ಹೇಳಿದ್ದು. ಇರಲಿ ಇತ್ತ ಬಾ.

ಯಾರಾದರೂ ಕಂಡರೆ ಹೇಳಿಕಳುಹುವಾ ಬಂದಿದೀವಿ ಅಂತ. ದ್ಯಾವರು ಮಾಡಿದ್ದು ಆಗಲಿ.

(ಎಂದು ಕಾಚ ಗೌಡ ಒಳಗೆ ಹೋಗುವರು.)

ಮಾಚ (ಪೊದೆಯಿಂದ ಹೊರಕ್ಕೆ ಬಂದು) ಚೆನ್ನಾಯಿತು. ಇವರು ಕಾಡಿನ ಕುರುಬರು ಅಂದರೆ ಊರು ಕುರುಬರಿಗೆ ಚಳ್ಳೇ ಹಣ್ಣು ತಿನ್ನಿಸುತೀವಿ ಅಂತಾರೆ. ಕಾಕ ತಾನೇ ಬಂದು ಇವರಿಗೆ ಆಗದೋನು ಅಂದೂ ಈ ಕತ್ತೆ ಕಾಕ ಅಂದೂ ನಮ್ಮ ಕಣ್ಣಿಗೆ ಮಣ್ಣು ಹಾಕೋದೆ? ನಾನು ಮರೆಯಾಗಿದ್ದು ಕೇಳಲಾಗಿ ಆಯಿತಲ್ಲ. ಇಲ್ಲದೀರಾ ಇದ್ದರೆ ಏನು ಗತಿ? ಹೆಗ್ಗಡೆಗಳು ಕರಣೀಕರನ್ನ ಬಾಳ ಬುದ್ಧಿವಂತರು, ನಾನು ಒಳ್ಳೇ ಮನಸಾ ಅಂದರೆ ದಡ್ಡ ಅಂತಿದಾರೆ. ಇದ ಅವರಿಗೆ ಹೇಳುತೀನಿ. ನನ್ನ ಬುದ್ಧಿವಂತ ಅಂತಾರೋ ಕರಣೀಕರನ್ನ ಬುದ್ಧಿವಂತಾ ಅಂತಾರೋ ನೋಡೋನ.

(ಎಂದು ಮರೆಯಾಗುವನು.)

ಮೋನ (ಏನನ್ನೋ ಒಂದು ಹಚ್ಚಡದಲ್ಲಿ ಕಟ್ಟಿ ಮೇಲೆ ಹಾಕಿಕೊಂಡು ಬಂದು) ಎಲ್ಲಪ್ಪಾ ಇವರು ಯಾರೂ ಕಾಣಲಿಲ್ಲೇ (ಎಂದು ಎರಡುಸಲ ಅತ್ತ ಇತ್ತ ಸುತ್ತಿ ನೋಡಿ) ಅಪ್ಪೋ ಅಪ್ಪೋ (ಎಂದು ಮೆಲ್ಲನೆ ಕರೆಯುವನು. ಗೌಡ ಕಾಚ ಬರುವರು.)

ಕಾಚ ತಂದ್ಯ ಮೋನ?

ಮೋನ ತಂದಿವಿನಿ, ಹೆಗ್ಗಡೆಗಳ ಕಾಣಿಕೆ.

ಗೌಡ ಎಂತಾದೋ ಅದು?

ಕಾಚ ನಾ ತಾ ಅಂದಿ, ತಂದದಾನೆ. ನಾ ನಿಂತಿರೋ ಕಡ್ಯಾಕೇ ನಿಂತಿರು ಮೋನ. ಬೇಕು ಬೇಡ ಅಂತ ನಾನು ತೋರುತೀನಿ. ಹುಯಿಲಿಟ್ಟರೆ ಹಂಗೆಮಾಡು. ಇಲ್ಲದೀರ ಇದ್ದರೆ ಸುಮ್ಮಕಿರು.

ಮೋನ ಹಂಗೆ ಆಗಲಿ ಕಾಕ.

ಕಾಚ ಎಲಾ ತಿಕ್ಕಲಣ್ಣ, ಕಾಕ ಅನಬೇಡ, ನಾನು ಕಾಕ ಅಲ್ಲ.

ಮೋನ ತಿಳೀತು ಕಾಕ.

ಕಾಚ ಆಯ್ಯೋ ನಿನ್ನ ಕಾಕವೇ! ಬಾಯಿ ತೆಗೆಯೋದು ಬೇಡೋ ಮಗನೆ (ಎಂದು ಅವನ ಬಾಯಿ ಮುಚ್ಚಿ) ಹೋಗಿ ಅಲ್ಲಿ ನಾಯ ಕರು ಕಂಡರೆ ನಾವು ಬಂದಿದೀವಿ ಅಂತ ಹೇಳು.

(ಮೋನ ಒಳಗೆ ಹೋಗುತ್ತಾನೆ. ಕಾಚ ಹಾಡುತ್ತ ನಡೆಯುತ್ತಾನೆ.)

ಕುರುಬರ ಬಳಿಗೇ ಮೊದಲಿಗ ಮಾದೇಶ್ವರನ ಮಗಾ
ನಮ್ಮ ಕರಿಹೈದಾ
ಕರಿಹೈದಾ ನಮ್ಮ ಕರಿಹೈದಾ ನಮ್ಮ ಕರಿಹೈದಾ
ನಮ್ಮ ಕರಿಹೈದಾ
ಕಾಡನು ಕಡಿದಾ ಹಾಡಿಯ ಮಾಡಿದ ಬೂಡನು
ಕಟ್ಟಿದ ಕರಿಹೈದ
ಕರಿಹೈದಾ ನಮ್ಮ ಕರಿಹೈದಾ ನಮ್ಮ ಕರಿಹೈದ....
ಮರವನೆ ಏರಿದ ಹಣ್ಣನೆ ತಿಂದ ಸೀಯಿದು ಎಂದಾ
ಕರಿಹೈದ
ಕರಿಹೈದಾ ನಮ್ಮ ಕರಿಹೈದ....
ನೆಲವನೆ ಕೆರೆದಾ ಬೀಜಾ ಚೆಲ್ಲಿದ ಬೆಳೆಯುನೆ ತೋರಿದ
ಕರಿಹೈದ
ಕರಿಹೈದಾ ನಮ್ಮ ಕರಿಹೈದಾ....
ಹುಲಿ ನರಿ ಬೂಡಿಗೆ ಬರದಿರಿ ಅಂತಾ ಹಳುವಕೆ ಹೇಳಿದ
ಕರಿಹೈದಾ
ಕರಿಹೈದಾ ನಮ್ಮ ಕರಿಹೈದಾ....
ಹಾಡಿಯ ನಡುವಿಲಿ ಕೆಂಡದ ದೇವರ ಕಾವಲ ಮಾಡಿದ
ಕರಿಹೈದಾ
ಕರಿಹೈದಾ ನಮ್ಮ ಕರಿಹೈದಾ....
ಮರಗಳ ಮೈಯಾ ಆರಿವೆಯ ಕಂಡೂ ಅದ ತಿರಿತಂದಾ
ಕರಿಹೈದಾ

ಕರಿಹೈದಾ ನಮ್ಮ ಕರಿಹೈದಾ....
(ಎಂದು ತಟ್ಟನೆ ಗೌಡನ ಬಳಿಗೆ ಬಂದು)
ಗೌಡಣ್ಣಾ, ಇವತ್ತು ಏನಾಗುತದೋ ಹೇಳೋಹಂಗಿಲ್ಲ. ನಾನು ನೋಡಿಕೊಂಡುಬರುತೀನಿ. ನೀನು ಹಾಡೀಗೆ ಹೋಗಣ್ಣ.

ಗೌಡ ನಿನ್ನ ಇಲ್ಲಿ ಬಿಟ್ಟು?

ಕಾಚ ನನಗೆ ಅಂಜಿಕೆ ಇಲ್ಲಪ್ಪ.

ಗೌಡ ನನಕೇನ ಅಂಜಿಕಿ?

ಕಾಚ ನಿನ್ನ ಇವರು ಹಿಡಿದರೆ?

ಗೌಡ ನನ್ನ ಹಿಡಿದು ಏನ ಮಾಡತಾರೆ ತಿನಬಾರದ ಮಿಗನ್ನ? ಇವತ್ತು ಹಿಡೀತಾರೆ, ನಾಳೆ ಬಿಡತಾರೆ. ಇನ್ನೂ ನೀನು ಹೋಗುದಾದರೆ ಹೋಗು ನಾನು ಇರುತೀನಿ.

ಕಾಚ ನಿನ್ನ ಬಿಟ್ಟು?

ಗೌಡ ಮತ್ತೆ ನಾ ನಿನ್ನ ಬಿಟ್ಟು? ಏನಂತಾದಾಗೋದು ನೋಡೋನ ಬಿಡು.

ಮೋನ (ಬಂದು) ಅಪ್ಪಾ ಅವರು ಬರುತದಾರೆ.
(ಹಿಂದೆ ಕರಣೀಕ ಮಾಚನಾಯಕ ಬರುವರು.)

ಕಾಚ, ಗೌಡ ಒಡೆಯ ಕೈಮುಗಿದಿವಿ.

ಕರಣೀಕ (ಅವರಿಗೆ) ಒಳ್ಳೇದು, ಒಳ್ಳೇದು. (ಮಾಚನಿಗೆ ಏನೋ ಹೇಳುವಂತೆ) ನೀನು ಹೊಂಚಿಕೇಳಿದ ಮಾತು ಹಂಗಿರಲಿ. ನಾ ಹೇಳಿದ ಹಂಗೆ ಇವನ ಹಿಂದಾ ಕಡೆಗೆ ಇದ್ದು ನಾ ಸನ್ನೆಮಾಡಿದಾಗ ಇವನ್ನ ತಬ್ಬಿ ಹಿಡುಕೊ. ಏನು? ತಿಳೀತೆ?

ಮಾಚ ಆಗಲಿ ಬಿಡಿ ಅಯ್ಯನೋರೆ. ನಾ ಹರೆಯದಾಗೆ ಸಾಮು ಮಾಡಿದೋನು. ಈ ತೋಳಿಂದ ಅಪ್ಪಿಕೊಂಡೆನೇ ಬಿಡಿಸಿಕೊಂಬೋರ್ಯಾರು?

ಕರಣೀಕ ಅಪ್ಪೋದೇನೋ ನಾಯಕ? ಇದೇನು ಚಿಲ್ಲಗಾತೀ ಬೀಡಲ್ಲ, ಹುಲಿ ಇಕ್ಕೆ. ಅಪ್ಪ್ಯಾನೇ ಅಂತ ಕಾದಿರೋ ಹೆಣ್ಣಲ್ಲ ಇವ. ಕಂಡ ಸಿಕ್ಕಿತು ಅಂತ ಬಾಯಿ ಹಾಕಿದರೂ ಹಾಕಿದ. ಜೋಕೆ.

ಮಾಚ ಆಗಲಿ ಬಿಡಿ, ಅಯ್ಯನೋರೆ ಇವತ್ತು ನೀವು ನೋಡಿ.

ಕರಣೀಕ ಆಗಲಿ ಮುಂದೆ ನಡಿ. ಹೆಗ್ಗಡೆಗಳು ಬಂದರು. (ಎಂದು ಕಾಚ ಗೌಡ ಇವರಿಗೆ) ಅಯ್ಯಾ ಗೌಡ, ಬುದ್ಧಿವಂತ ಇತ್ತ ಇತ್ತ ಬನ್ನಿ ಹೆಗ್ಗಡೆಗಳು ಅಡಿ ಬೆಳಸುತಿದಾರೆ.

ಕಾಚ (ಗೌಡನಿಗೆ) ಇವರೇನು ನಮ್ಮನ್ನ ಬಿಡೋಹಂಗಿಲ್ಲ. ಮುಂದೆ ನಿಂತಿರು. ಅವರಕೂಟ ಮಾತನಾಡುತೀನಿ. ಹೊತ್ತು ನೋಡಿಕೊಂಡು ಓಡಬೇಕಾದಾತು. ನಾ ಹುಯಿಲಿಟ್ಟರೆ ಓಟಾಕೀಳು.

ಗೌಡ ಸೈ.

ಕಾಚ (ಮೋನನಿಗೆ) ಆಚೇಕಡೇಕಿರು. ನಾ ಕೂಗತಾಲೇ ಹಾಕಿ ಬಿಡು, ಹುಯಿಲಿಡು. ಏನಾದರೂ ಸರ್‍ಯೆ ಗೌಡನ್ನ ಉಳಿಸಿ ಕೊಂಡು ಬಾ.

ಮೋನ ಓ.

ಹೆಗ್ಗಡೆ ಏನು ಕರಣೀಕರೆ? ಕಾಕ ಬಂದಿದಾನಂತೊ?

ಕರಣೀಕ ಏನಯ್ಯಾ ಗೌಡ, ಮೂರು ದಿನದ ಹಿಂದೆ ಹೇಳಿದಿರೆ, ಕಾಕನ್ನ ಕರತರತೀವಿ ಅಂತ. ಕರತಂದಿದೀರೊ?

ಕಾಚ ನನ್ನೊಡೆಯ ಕಾಕ ಊರಾಗಿಲ್ಲ. ಯಾವಾಗ ಬರುತಾನೋ ತಿಳೀದು. ಅವ ಬಂದಮೇಲೆ ದಣಿಗಳ ಅಪ್ಪಣೆ ಅವನಿಗೆ ತಿಳಿಸುತೀವಿ. ಇದ ಹೇಳೋನ ಅಂತ ಬಂದಿವಿ.

ಹೆಗ್ಗಡೆ ಕಾಕ ಬರದಿದ್ದರೆ ಬೇಡ. ಕಂದಾಯ ಈಗ ಎಂದಿನಂತೆ ಸಲ್ಲಿಸಿಬಿಡಿ. ಅವ ಬಂದಮೇಲೆ ಅದ ಕಡಮೆಮಾಡೋ ಮಾತಾಡೋಣ.

ಕಾಚ ನನ್ನೊಡೆಯ ನಾವು ಸರವಿ ಜೇನು ಆನೆಕೊಂಬು ಮನೆಗಳಾಗೆ ಇಟ್ಟುಕೊಂಡಿರೋರಲ್ಲ. ನಾಲ್ಕು ದಿನ ಬಿಟ್ಟು ಸರವಿ ಜೇನು ಸಲ್ಲಿಸೋಕೆ ಈವತ್ತಿನಿಂದ ಹಾಡಿಯೋರೆಲ್ಲ ಹುಡುಕಬೇಕು. ಕಮ್ಮಿ ಮಾಡದ ಹಂಗ ಕೊಡಬೇಕೆಂದರೆ ನಾಲ್ಕು ತಿಂಗಳ ಕೆಲಸ ಆಯಿತು. ಜೇನನಾದರೂ ಏನಾರ ಮಾಡಿ ಕಲೆಹಾಕಬಹುದು. ಆನೆಕೊಂಬು ಹಿಡಿಯೋದು ಗಾಸಿ ನನ್ನೊಡೆಯ. ಅದು ನಮ್ಮ ಹಲ್ಲಿನ ಹಂಗೆ ಗಟ್ಟಿಯಾಗಿದ್ದು ಬಿಡುತದೆ, ಬೀಳೋದಿಲ್ಲ. ಆನೇನ ಬೇಕಾದರೆ ತೋರಿಸಿಕೊಟ್ಟೇವು. ಕೊಂಬು ಕೊಯ್ಯುಕೊಳ್ಳೋದಾದರೆ. ಬಾಳ ಗಾಸಿ ನನ್ನೊಡೆಯ, ಬಾಳ ಗಾಸಿ.

ಹೆಗ್ಗಡೆ ಅರವತ್ತು ವರ್ಷದಿಂದ ಸಲ್ಲಿಸಿದೋರು ಹೆಂಗೆ ಸಲ್ಲಿಸಿದರು?

ಕಾಚ ಗಾಸಿಪಟ್ಟರು ನನ್ನೊಡೆಯ. ಆನೆಕೊಂಬು ಒಂದು ಸಿಕ್ಕಬೇಕಾದರೆ ಕಾಡನೆಲ್ಲ ಅಲೇಬೇಕು. ಆನೇ ಜಗಳ ಮಾಡೋದು ಕಾಯಬೇಕು. ಕೊಂಬು ಉಡಿದೋ ಮುರಿದೋ ಬಿದ್ದರೆ ಎತ್ತಬೇಕು. ಆನೆ ಮುದಿಯಾಗಿ ಸತ್ತು ಬಿದ್ದಿದೆಯೋ ಕಾಣಬೇಕು; ಅದು ಹೆಣ್ಣಾದರೆ ಬರೀ ಕೈಯೇ. ಗಂಡು ಸಾಯಲಂತ ಬೇಡಬೇಕು. ಅದರ ಗಾಸಿ ಬಹು ಗಾಸಿ. ಹೇಳಿ ಏನು ನನ್ನೊಡೆಯ.

ಕರಣೀಕ ಗಾಸಿ ಇರಬಹುದು. ಅಂದರೆ ಇದು ಹೊಸತಲ್ಲ. ಹಿಂದಲಿಂದ ಕೊಡುತಾ ಇದ್ದದು.

ಕಾಚ ಹಿಂದೆ ಕೊಡುತಾ ಇದ್ದಿವಿ ಒಂದು ಎರಡು. ಈಗ ಕೊಡು ಅಂತೀರಿ ನಾಲ್ಕು ಎಂಟು.

ಕರಣೀಕ ಅರಸರ ಪಾಲು ಬೇರೆ, ಹೆಗ್ಗಡೇ ಪಾಲು ಬೇರೆ.

ಕಾಚ ಅರಸರ ಪಾಲು ಎಷ್ಟು ನನ್ನೊಡೆಯ?

ಕರಣೀಕ ಅದರ ಮಾತ್ಯಾಕೊ ನಿಮಗೆ? ನಾವು ಕೇಳಿದ್ದು ಕೊಡಬೇಕು.

ಕಾಚ ಕೇಳಿದ್ದೇ ಕೊಡತೀವಿ. ಒಸಿ ನಮಗೆ ಹೇಳಿರ. ಹೆಗ್ಗಡೆಗಳ ಪಾಲು ಹೆಗ್ಗಡೆಗಳಿಗೆ ಅರಸರ ಪಾಲು ಅರಸರಿಗೆ ಸಲ್ಲಿಸುತೀವಿ.

ಕರಣೀಕ ಅರಸರ ಪಾಲು ಅರಸರಿಗೆ ನೇರವಾಗಿ ಸಲ್ಲಿಸೋಕೆ ನೀನು ಯಾವೂರ ಗೌಡ? ನಿನ್ನ ಪಾಲಿಗೆ ಅರಸರಿಲ್ಲ. ಹೆಗ್ಗಡೆಗಳೇ ಅರಸರು.

ಕಾಚ ಹಂಗಾರೆ ನಾ ಹೆಗ್ಗಡೆ.

ಕರಣೀಕ ಎಲಾ ಎಷ್ಟೋ ಮಾತು? ಹೆಗ್ಗಡೆಗಳ ಎದುರಿಗೆ ನಿಂತು ನೀನೇ ಹೆಗ್ಗಡೆ ಆದಿಯ? ನೀ ಹೆಗ್ಗಡೆ ಅಂದರೆ ನಿನ್ನ ಹಿಡಿದು ನೇಣುಹಾಕಬಲ್ಲರೆ?

ಕಾಚ ಆಯಿತು ಒಡೆಯ, ಹೆಗ್ಗಡೆ ತಾನು ಅರಸ ಎಂದರೆ ಅರಸರು ಸುಮ್ಮನಿರುತಾರೆಯಾ?

ಹೆಗ್ಗಡೆ ಬಿಡಿ ಕರಣೀಕರೆ; ಇವನ ಸಂಗಡ ಎಷ್ಟು ಮಾತು. ಅನಕಾ ಇದರಿಂದ ಕಾಣುತದೆ ನಮ್ಮ ಕಿವಿ ಮುಟ್ಟಿದ ಮಾತು ನಿಜ ಅಂತ.

ಕರಣೀಕ ಹೌದು ಒಡೆಯರೆ.

ಕಾಚ ಏನು ಒಡೆಯ ಆ ಮಾತು.

ಕರಣೀಕ (ಹೆಗ್ಗಡೆಗೆ) ಹೇಳಲೆ ಒಡೆಯರೆ?

ಹೆಗ್ಗಡೆ ಹೇಳಿ.

ಕರಣೀಕ ನಿಮ್ಮ ಕಾಕ ಇನ್ನು ಬೇರೆಯಲ್ಲ. ಕಾಕ ಅನ್ನೋನು ನೀನೆ ಅಂತ ಹೆಗ್ಗಡೆಗಳಿಗೆ ಸುದ್ದಿ ಬಂದದೆ.

ಕಾಚ ಸರಿ ನನ್ನೊಡೆಯ.

ಹೆಗ್ಗಡೆ ಎಂದಿನಂತೆ ನಡಕೊಂಡರೆ ಒಳಿತಾಯ್ತು. ಇಲ್ಲದಿದ್ದರೆ ನಿನ್ನ ಇಲ್ಲಿಂದ ಹೋಗೋಕೆ ಬಿಡೋದಿಲ್ಲ.

ಕಾಚ ಸರಿ ನನ್ನೊಡೆಯ.

ಹೆಗ್ಗಡೆ ಇಲ್ಲೇ ಹಿಡಿದು ಹಾಕುತೀವಿ.

ಕಾಚ ಆಗಬಹುದು ನನ್ನೊಡೆಯ. ಅಂದರೆ, ಮೀನಾದರೆ ಹಿಡಿದು ತಿನ್ನಬಹುದೇ, ಹಾವು ಹಿಡಿದು ಏನು ಮಾಡುತೀರ?

ಕರಣೀಕ ತಲೆ ಚಚ್ಚುತೀವಿ.

ಕಾಚ ಒಳ್ಳೀನ ಹಿಡಿದು ತಲೆ ಚಚ್ಚಿದರೆ ನಂಜಿನ ಹುಳ ಸತ್ತಾತ? ನನ್ನ ಏನಾರ ಮಾಡಿದವರನ ಕಾಕ ಇರುತಾನೆ ನೋಡಿ ಕೋತಾನೆ.

ಕರಣೀಕ ಹೆಗ್ಗಡೆಗಳ ಅಪ್ಪಣೆ ಏನು?

ಹೆಗ್ಗಡೆ ಇವನೇ ಕಾಕ ಅಂದನಲ್ಲ ಅವನನ್ನ ಕರತರಿಸಿ.

(ಕರಣೀಕನು ಒಳಗೆ ಹೋಗಿ ಮಾವನೊಂದಿಗೆ ಬರುವನು. ಮಾವನು ಇವರ ಕಡೆ ಕ್ರೂರದೃಷ್ಟಿಯಿಂದ ನೋಡುವನು. ಕಾಚನು ಅವನನ್ನು ನೋಡಿ ತಮು ತಮುಗೆ ಸಂಕೇತವಿರುವಂತೆಯೂ, ಯಾರೂ ನೋಡದವೇಳೆ ಹೊಂಚಿದಂತೆಯೂ ನಟಿಸಿ ಅವನ ಕಡೆಗೆ ಕಣ್ಣು ಮಿಟಕಿಸುತ್ತಾನೆ.)

ಮಾವ ಏನೋ ಅದು ಕಣ್ಣು ಮಿಟಕಿಸುತೀಯಾ?

ಕಾಚ ಕಣ್ಣ್ಯಾತರದು ಮಿಣಕಿಸೋದು? ಅದೇನೊ ಬಿದ್ದಹಂಗೆ ಆಯಿತು.

ಮಾವ ಹಂಗೇ ನೋಡುತಾ ಇರು ಬೀಳುತದೆ ನೇಣು.

ಕಾಚ ಬಿದ್ದರೆ ಹೋಯಿತೇನ ನನತೊಂದು ಉಸುರೆ?

ಹೆಗ್ಗಡೆ ಇವರಲ್ಲಿ ಯಾರು ಕಾಕ ವಿಚಾರಿಸಿ ಕರಣೀಕರೆ.

ಕರಣೀಕ ಎಲಯ್ಯ ಬುದ್ಧಿವಂತ ನೀನು ಕಾಕ ಅಂತ ಇವ ಅಂತಾನೆ.

ಕಾಚ ಆಯಿತು ಗುರುವೆ.

ಕರಣೀಕ ಇವ ಕಾಕ ಅಂತೀಯಾ ನೀನು.

ಕಾಚ ಎಲ್ಲಾರ ಉಂಟೆ ನನ್ನೊಡೆಯ?

ಕರಣೀಕ ಇವ ಕಾಕ ಅಂತ ನೀ ಹೇಳಿದೆಂತೆ. ಏನು ಮಾಚನಾಯಕ?

ಮಾಚ ಹೌದು ನನ್ನೊಡೆಯ. ಈಗ ಇವ ಹೇಳುತಾ ಇದ್ದಾಗ ನಾ ಕೇಳಿದಿ.

ಕಾಚ ಏನು ನಾಯಕರೆ ಇದನೇನು ಕನಸಾಗಿ ಕಂಡಿರೋ? ಕಾಕ ಊರಾಗಿಲ್ಲ ಅಂತ ಹೇಳುತಿವಿನಿ. ಎತ್ತಾಗೋ ಹೋಗವ್ನೆ. ಇವ ನಮ್ಮ ಮಾವಣ್ಣ. ನನಕ ಮೊದಲು ದೇವರಗುಡ್ಡ ಆಗಿದ್ದೋನು. ನಾನಂದರೆ ನಂಜುಕಾರು ತಾನೆ. ಇವ ಕಾಕ ಯಾಕಾದಾನು?

ಹೆಗ್ಗಡೆ ಏನಯ್ಯ ಕಾಕ ಬೇರೆ ಇದಾನೊ?

ಮಾವ ನಾನು ಮಾವಮೆಯ್, ಇವ ಕಾಕಮೆಯ್.

ಹೆಗ್ಗಡೆ ಕರಣೀಕರೆ.

ಕರಣೀಕ ಒಡೆಯರೆ.

ಹೆಗ್ಗಡೆ ಆಗಲಿ.

ಕರಣೀಕ ಮಾಚನಾಯಕ

(ಎಂದು ಸನ್ನೆ ಮಾಡುತ್ತಾನೆ. ಮಾಚನಾಯಕ ಕಾಚನನ್ನು ತಬ್ಬಿ ಹಿಡಿಯಲು ನೋಡುತ್ತಾನೆ.)

ಕಾಚ ಅಯ್ಯೋ ಅಯ್ಯೋ, ಮೋನ, ಮೋನ (ಎಂದು ಕೂಗುತ್ತಾನೆ).

ಮೋನ ಹಾವು ಹಾವು (ಎಂದು ಗುಂಪಿನ ಮಧ್ಯೆ ಒಂದು ಸತ್ತ ಹಾವನ್ನು ಹಾಕುತ್ತಾನೆ. ಅದು ಸತ್ತಿದೆಯೆಂದು ತಿಳಿಯದೆ ಎಲ್ಲರೂ ಹೆದರಿ ಹಾರುತ್ತಾರೆ. ಈ ಗಲಭೆಯಲ್ಲಿ ಕಾಚ ಮಾಚನಾಯಕನ ಕೈಯಿಂದ ಬಿಡಿಸಿಕೊಂಡು ಓಡುತ್ತಾನೆ).

ಚಿಕ್ಕಯ್ಯ ಎಲ ಮುಂಡೇದೆ ತಪ್ಪಿಸಿಕೊಂಡನೆ (ಎಂದು ಅವನ ಹಿಂದೆ ಓಡುತ್ತಾನೆ).

(ಒಳಗೆ ಯಾರೋ ಬಿದ್ದ ಶಬ್ದ. ರಂಗದಲ್ಲಿ ಎಲ್ಲರೂ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಹಾರಾಡುತ್ತಿದಾರೆ. ಮಧ್ಯೆ ಕರಣೀಕನು ಒಬ್ಬನೇ ಇರುವಾಗ ಹಿಂದುಗಡೆಯಿಂದ ಮೋನ ಕಾಚ ಬರುತ್ತಾರೆ. ಕಾಚ ಅವನಿಗೆ ಬಾಯಿಗೆ ಬಟ್ಟೆ ನಡುವಿಗೆ ಒಂದು ಹಗ್ಗವನ್ನು ಸುತ್ತಿ ಕಟ್ಟುತ್ತಾನೆ. ಇಬ್ಬರೂ ಅವನನ್ನು ಹೊತ್ತುಕೊಂಡು ನಡೆಯುತ್ತಾರೆ. ಒಂದು ಕ್ಷಣದಲ್ಲಿ ಹೆಗ್ಗಡೆ ಬರುತ್ತಾನೆ. ಹಿಂದೆ ಮಾಚನಾಯಕ.)

ಹೆಗ್ಗಡೆ	ಮಾಚ, ಚಿಕ್ಕಯ್ಯ ಎತ್ತ?

ಮಾಚ	ಅವನ್ನ ಅಟ್ಟಿಕೊಂಡು ಇಲ್ಲಿಂದ ಓಡಿದರು. ಅಲ್ಲಿ ಬಿದ್ದದ ಕಂಡೆ. ಹಿಂದೆ ಹೋಗಿ ನೋಡಿದೆ. ಕಣ್ಣಿಗೆ ಕಾಣಲಿಲ್ಲೇ.

ಹೆಗ್ಗಡೆ	ಕರಣೀಕರು ಎತ್ತ ಹೋದರು?

ಮಾಚ	ನಾ ಈಗ ಇಲ್ಲಿ ಬಂದಾಗ ಇದ್ದರು ; ಅತ್ತ ಹೋಗಿ ಬರೋ ವ್ಯಾಳ್ಯಾಕ್ಕೆ ಇಲ್ಲ. ಏನಾದರೋ ತಿಳೀಲಿಲ್ಲೇ.

ಹೆಗ್ಗಡೆ	ಚಿಕ್ಕಯ್ಯನನ್ನ ಕರಣೀಕರನ್ನ ಅವರು ಹೊತ್ತುಕೊಂಡು ಹೋದರೇನೊ? ಹಂಗಾದರೆ ಇಲ್ಲಿ ಉಳಿದೋರ್ಯಾರು?

ಮಾಚ	ನನ್ನೊಡೆಯ ನಾ ಏನ ಹೇಳಲಿ, ಸತ್ತದ್ದು ಇದೊಂದು ಹಾವು, ಸಾಯದಲೆ ನಾ ಒಂದು ಹುಳ, ಎರಡು ಉಳಿದದೆ ಇಲ್ಲಿ. ಬಾಳ ಮೋಸ ಆಯ್ತೇ.

ಹೆಗ್ಗಡೆ	ಸತ್ತ ಹಾವಿಗೆ ಹಾಗೆ ಹೆದರುವರುಂಟೇ ಮಾಚನಾಯಕ?

ಮಾಚ	ಮಾಸ್ವಾಮಿ ಅದು ಸತ್ತದು ಅಂತ ತಿಳೀಲ್ಲ. ಹಾವು ಹಾವು ಅಂತ ಮೇಲೆ ಹಾಕುತಾಲೇ ಎಲ್ಲರೂ ಸುಗಿದರು. ನಾನೂ ಕೈ ಸಡಿಲಬಿಟ್ಟೆ. ಆ ಕಾಕ ತಪ್ಪಿಸಿಕೊಂಡೋನೇ ಓಡೇಬಿಟ್ಟ. ಚಿಕ್ಕಯ್ಯ ಅಟ್ಟಸಿಕೊಂಡು ಓಡಿದರು. ಬಿದ್ದು ಬಿಟ್ಟರು. ಆಮೇಲೆ ಅವರು ಕಾಣಲ್ಲ. ಕರಣೀಕರು ಇಲ್ಲಿ ನಿಂತಿದ್ದರು. ಹಂಗೆ ನೋಡಿ ಹಿಂಗೆ ನೋಡೋ ಹೊತ್ತಿಗೆ ಅವರೂ ಇಲ್ಲ.

ಹೆಗ್ಗಡೆ	ಒಳ್ಳೇದಾಯ್ತು, ನೀನು ಪಾಳ್ಯದ ಕಡೆಗೆ ನೋಡಿಕೊ. ಆ ಮಾವ ಅನ್ನೋನನ್ನಾದರೂ ನಿಲ್ಲಿಸಿಕೊಂಡಿರು. ನಾ ಹೋಗಿ ಚಿಕ್ಕಯ್ಯನನ್ನಾದರೂ ನೋಡಿಕೊಂಡು ಬರುತೀನಿ.

ಮಾಚ	ನನ್ನೊಡೆಯ ಚಿಕ್ಕಯ್ಯನವರನ್ನ ನಾನೇ ನೋಡಿಕೊಂಡು ಬರತೀನಿ. ತಾವು ಪಾಳ್ಯದಾಗ ನಿಂದಿರಬೇಕು.

ಹೆಗ್ಗಡೆ ನನಗೆ ಈಗ ಇರೋನು ನೀನೊಬ್ಬ, ನಿನ್ನ ಕಳುಹಿಸಿ ಬಿಡಲೆ ?

ಮಾಚ ನಾ ಹೋದರೆ ಒಂದು ಕತ್ತೆ ಹೋಯಿತು. ಒಡೆಯರು ಕಾಡಿಗೆ ನಡೆದು ಏನಾದರೂ ಆದರೆ ನಾ ಕೋಟೆಗೆ ಏನಂತ ಹೋಗಲಿ ?

ಹೆಗ್ಗಡೆ ಒಳ್ಳೇದು. ಯಾರನಾದರೂ ಕಳುಹೋಣ ಬಾ. ಪಾಳ್ಯದ ಜನಕ್ಕೆ ಎಚ್ಚರವಾಗಿರಬೇಕಂತ ಹೇಳು (ಎಂದು ಒಳಗೆ ಹೋಗುವನು).

ಮಾಚ ಪಾಳ್ಯ ನಿದ್ದೆ ಹೋಗಿ ಚಿಕ್ಕಯ್ಯನನ್ನ ಕಳಕೊಂಡಿತೇ. ಇನ್ನು ಎಚ್ಚರದಿಂದಿದ್ದು ಆದು ಮಾಡೋದಾದರೂ ಏನು? ಯಾಕಾದರ ನಮ್ಮ ಕರಣೀಕರು ನನ್ನ ಮಾತು ಕೇಳದೀರ ಆ ಕಾಚನ್ನ ತಬ್ಬಿಕೋ ಅಂದರೋ.

(ಎಂದು ಹಿಂದೆ ಹೋಗುವನು.)

---

೬

[ಸ್ಥಳ : ಕುರುಬರ ಹಾಡಿ. ಪುಂಡರ ಚಾವಡಿಯ ಮುಂದೆ. ಅದೇ ರಾತ್ರಿ. ಗೌಡ, ಕಾಚ, ಮೋನ, ಕರಣೀಕ; ಇನ್ನಿಬ್ಬರು ಚಿಕ್ಕಯ್ಯನನ್ನು ಎತ್ತಿಕೊಂಡು ಬರುತ್ತಾರೆ.]

ಕಾಚ — ಗೌಡಣ್ಣ, ಅಯ್ಯನವರನ್ನ ನನ್ನ ಬೂಡಾಗೆ ಕೂರಿಸಿರು. ಜೊತೆಯಾಗ ಒಬ್ಬನನ್ನು ಹಾಕು. ನಾನು ಚಿಕ್ಕ ಹೆಗ್ಗಡೆಗಳ ಮಾತು ನೋಡಿಕೊಂಡು ಬರುತೀನಿ.

ಕರಣೀಕ — ಎಲಯ್ಯ ಬುದ್ಧಿವಂತ, ಅವರಿಗೇನಾದರಾದೀತು ಜೋಕೆ. ಹೆಗ್ಗಡೆಗಳು ತಲೆ ತೆಗೀತಾರೆ.

ಕಾಚ — ಆಯಿತು ನನ್ನೊಡೆಯ. ಆಲಬೇಡಿ ಸುಮ್ಮನಿರ್ರಿ. ಹೆಗ್ಗಡೆಗಳು ತಲೇ ತೆಗಿಯೋದು ಹೆಗ್ಗಡೆಗಳ ಕೋಟೇಲಿ, ಇಲ್ಲಿ ತಲೆ ತೆಗಿಯೋಕೆ ಕಾಕ ಬರಬೇಕು.

ಕರಣೀಕ — ಅನಕಾ ಜೋಕೆ (ಎಂದು ಹೋಗುವನು).

ಕಾಚ — ಯಾರವ್ವಾ ಅಲ್ಲಿ.

ಮೊಲ್ಲೆ — ಏನಪ್ಪಾಜಿ (ಎಂದು ಒಳಗಿಂದ ಬರುವಳು. ನಿಶ್ಚೇಷ್ಟನಾಗಿರುವ ಚಿಕ್ಕಯ್ಯನನ್ನು ನೋಡಿ) ಯಾರಪ್ಪಾಜಿ ಇದು, ಏನಾತು? (ಮೋನಿ ಬರುವಳು.)

ಕಾಚ — ಹೆಗ್ಗಡೆಗಳ ಮಕ್ಕ, ನನ್ನಟ್ಟಿಸಿಕೊಂಡುಬಂದರು. ನಾ ಮರ ಬಳಸಿದಿ. ಅವರೂ ಬಳಸಿದರು. ಬೇರು ಎಡರಾಗಿ ಕೆಡೆದರು. ಅರಿವು ತಪ್ಪಿತು. ದೇವರು ಕೊಟ್ಟ ಬೇಟೆ ಅಂತ ಹೊರಿಸಿಕೊಂಡು ಬಂದಿನವ್ವ. ಎಲ್ಲಿ ದಾರಿ ಬಿಡಿರ್ರಿ. ಇಲ್ಲಿ ಮಲಗಿಸಿ. ಮೊಲ್ಲೆ, ತಣ್ಣನೆ ಗಾಳಿ ಬೀಸಿ ಎಚ್ಚರಕೊಳಿಸು.

ಮೊಲ್ಲೆ — (ಕುಳಿತು ಚಿಕ್ಕಯ್ಯನನ್ನು ಜಗಲಿಯ ಮೇಲೆ ಮಲಗಿಸಿ) ಅವ್ವಯ್ಯಾ, ಕಾಲೇನಾತು?

ಕಾಚ — ಹೊರಳ್ಯದೆಯೋ ಮುರದದೆಯೋ ಕಾಣಲಿಲ್ಲವ್ವ. ಎಚ್ಚರದಾಗ ಮೊನಗುತಾರೆ. ನೋಯುತಾದಂತ ತೋಚುತದೆ.

ನಾ ಹೋಗಿ ಆ ಕರಣೀಕರನ್ನ ನೋಡಿಕೊಂಡು ಬರುತೀನಿ. ಒಸಿ ಸೊಪ್ಪು ತರುತೀನಿ ಇವರ ಕಾಲಿಗೆ ಕಟ್ಬೋಕೆ. ಹಿಂಗ ಇವರನ್ನ ನೋಡಿಕೊಳ್ಳಿರ. ಏನಾದರೂ ಬೇಕಾದರೆ ಕರೀರ್ಯ, ಇಲ್ಲ ಮೋನನ ಕೈಲಿ ಹೇಳಿಕಳುವಿರ.

(ಚಿಕ್ಕಯ್ಯ ಮೂರ್ಛೆಯಲ್ಲಿ ಮೊನಗುತ್ತಾನೆ.)

ಮೊಲ್ಲೆ ಅವ್ವಯ್ಯಾ, ಪಾಪ, ಅದೇಸೊಂದು ನೋಯುತಾದೊ. ನಾವು ನೋಡಿಕೋತೀವಿ ಅಪ್ಪಾಜಿ ನೀ ಹೋಗಿ ಸೊಪ್ಪು ತಾ.

ಕಾಚ ಬಂದಿ. ಬಾರೊ ಮೋನ. ಇಲ್ಲಿ ಆ ಹೈದನ್ನ ಇರು ಅನ್ನು. ಅವನಿಗೆ ತಿಳಿಯೋಕಿಲ್ಲ ನೀ ತರುವ್ಯಂತೆ ಸೊಪ್ಪ.

(ಎಂದು ಮೋನನನ್ನು ಕರೆದುಕೊಂಡು ಹೋಗುವನು. ಮೋನನು ಮೊಲ್ಲೆ ಚಿಕ್ಕಯ್ಯನನ್ನು ನೋಡುತ್ತಿರುವ ರೀತಿಯಿಂದ ಖಿನ್ನನಾಗಿ ಕಾಚನ ಹಿಂದೆ ನಡೆಯುವನು. ಹುಡುಗಿಯರು ಚಿಕ್ಕಯ್ಯನ ತಲೆಯ ಎರಡು ಕಡೆ ಕೂತು ಅವನನ್ನೇ ನೋಡುತ್ತಿರುವರು.)

ಮೋನಿ ಇವನ ಮಿಾಶೆೊ, ಇವನ ಹುಬ್ಬೊ, ಮಿಗಿಲು ಅಂದಾಗದಾನೆ ; ಅಲ್ಲ?

ಮೊಲ್ಲೆ ಉಂ (ಎಂದು ತಲೆಯನ್ನು ಆಡಿಸಿ ಒಪ್ಪುತ್ತಾಳೆ).

ಮೋನಿ ಅಂದಾಗದಾನೆ (ಎಂದು ಅವನ ಕುರುಳನ್ನು ತೀಡಿ ಕಣ್ಣಿಗೆ ತುಟಿಗೆ ಕೈಯಿಟ್ಟು ಕಣ್ಣಿಗೆ ಒತ್ತಿಕೊಳ್ಳುತ್ತಾಳೆ).

ಮೊಲ್ಲೆ ಮೋನಿ, ನನ್ನ ಕಣ್ಣಿಗೆ ಒಸಿ ಇಕ್ಕು.

(ಮೋನಿ ಅವಳ ಕಣ್ಣಿಗೂ ಒತ್ತುತ್ತಾಳೆ.)

ಚಿಕ್ಕಯ್ಯ (ಕಣ್ತೆರೆದು ಮತ್ತೆ ಮುಚ್ಚಿ) ಯಾರು ಅದು ?

ಮೋನಿ ನಾ ಮೋನಿ.

ಮೊಲ್ಲೆ ಮೋನಿ ನನ್ನ ಹೆಸರು ಹೇಳೆ. ನಿನಗೆ ನಾಕ ಆದಾನಲ್ಲ.

ಮೋನಿ ನೀನೇನು ಇವನ್ನ ಮಾಡಿಕೊಂಡೀಯಾ ಮೊಲ್ಲೆ?

ಮೊಲ್ಲೆ ಮಾಡಿಕೊಳ್ಳೋದೊ ಬಿಡೋದೊ. ನನ್ನ ಹೆಸರೂ ಹೇಳು.

ಮೋನಿ ನಿನ್ನ ಹೆಸರೇಳೋಕೆ ನಾನ್ಯಾಕೆ ಬರಬೇಕು ಮೊಲ್ಲೆ? ನೀನೇ ಹೇಳು.

ಮೊಲ್ಲೆ ನನಗೆ ನಾಚಿಕೆಯಾಗುತದೆ ಮೋನಿ.

ಮೋನಿ ನಾಚಿಕೊಂಡರೆ ಆಗುತದಾವ್ವ? ಬೇಕು ಅನ್ನೋದು ತೋರ ಬೇಕು.

(ಚಿಕ್ಕಯ್ಯ ಮತ್ತೆ ಕಣ್ಣು ತೆರೆಯುವನು.)

ಚಿಕ್ಕಯ್ಯ ಯಾರು ಅದು ?

ಮೊಲ್ಲೆ ನಾ ಮೊಲ್ಲೆ.

ಚಿಕ್ಕಯ್ಯ ಏನಾಯಿತು ? ನನಗೆ ಕಾಲು ಬಹಳ ನೋಯುತದಲ್ಲ. ಅಪ್ಪಾಜಿ ಎಲ್ಲಿ ?

ಮೊಲ್ಲೆ ಇಲ್ಲೇ ಇತ್ತ ಹೋದರು ಬರುತಾರೆ.

ಚಿಕ್ಕಯ್ಯ ನೀನ್ಯಾರವ್ವ ಹೆಣ್ಣುಮಗಳು ? ಇಲ್ಲೇನು ಬಂದೆ ?

ಮೊಲ್ಲೆ ನಾ ಇಲ್ಲೇ ಇರೋದು.

ಚಿಕ್ಕಯ್ಯ ನೀನ್ಯಾರು ?

ಮೊಲ್ಲೆ ಅಪ್ಪಾಜಿಯ ಮಗಳು.

ಚಿಕ್ಕಯ್ಯ ಅಪ್ಪಾಜಿಯ ಮಗಳೆ (ಎಂದು ಎದ್ದು ಕುಳಿತು ಅವಳನ್ನೂ ಮೋನಿಯನ್ನೂ ನೋಡಿ ತಾನಿರುವ ಸ್ಥಳವನ್ನು ತಿಳಿದುಕೊಳ್ಳುವುದಕ್ಕೆ ಸುತ್ತ ಕಣ್ಣು ತಿರುಗಿಸುವನು).

ಮೋನಿ ಕಾಕನ ಮಗಳು.

ಚಿಕ್ಕಯ್ಯ ಕಾಕನ ಮಗಳೇ ? ನಾವಿರೋದೆಲ್ಲಿ ?

ಮೊಲ್ಲೆ ಇದು ನಮ್ಮ ಹಾಡಿ.

ಚಿಕ್ಕಯ್ಯ (ಮೆಲ್ಲನೆ ಎದ್ದು ನಿಲ್ಲುತ್ತಾನೆ. ನಡೆಯುವುದಕ್ಕೆ ನೋಡುತ್ತಾನೆ. ಆಗುವುದಿಲ್ಲ.) ಹ, ಹ, ಕಾಲು ಮುರಿದದೆಯೋ ? ಏನೋ ಆಗ್ಯದೆಯೋ ನನಗೆ. ನನ್ನ ಇಲ್ಲಿ ಯಾರು ಕರೆತಂದರು ?

ಮೊಲ್ಲೆ ನಮ್ಮಪ್ಪಾಜಿ.

ಚಿಕ್ಕಯ್ಯ ನಮ್ಮಪ್ಪಾಜಿ ಎಲ್ಲಿ ? ಅವರನ್ನೂ ಹಿಡಿತಂದರೊ ?

ಮೋನಿ ಇಲ್ಲ. ಇನ್ನೊಬ್ಬರ ಕರತಂದವರೆ.

ಚಿಕ್ಕಯ್ಯ ಓಹೊ ಹೀಗಾಯಿತ ಇದು (ಕುಳಿತು ಚಿಂತಿಸುವನು).

ಮೊಲ್ಲೆ (ಮೋನಿಯನ್ನು ಒಂದು ಕಡೆಗೆ ಕರೆದುಕೊಂಡುಹೋಗಿ) ಯಾಕೆ ಮೋನಿ ಮುನಿಸಿಕೊಂಡದಾನೆ?

ಮೋನಿ ಹಿಡಿದು ತಂದುಬಿಟ್ಟರೇ ಅಂತ ಇದ್ದಾತು.

ಮೊಲ್ಲೆ ಹಳ್ಳದಾಗೆ ಬಿದ್ದ ಹುಲಿ ಹಂಗದಾನೆ. ಏನಾರ ಎರಡು ಮಾತು ಹೇಳಿ ಸಮುದಾಯಿಸು.

ಚಿಕ್ಕಯ್ಯ ನೀನು ಕಾಕನ ಮಗಳೇನವ್ವ?

ಮೊಲ್ಲೆ ಹೌದು.

ಚಿಕ್ಕಯ್ಯ ನೀನೋ ಅವ್ವ?

ಮೋನಿ ನಾನು ಮೋನನ ತಂಗಿ.

(ಚಿಕ್ಕಯ್ಯನು ಮೊಲ್ಲೆಯನ್ನು ಸುಮ್ಮನೆ ಸ್ವಲ್ಪಹೊತ್ತು ನೋಡುವನು.)

ಮೊಲ್ಲೆ ಯಾಕ ಹಂಗ ನೋಡತಿ ನನ್ನ? ಚಂದಾಗಿದೀನಾ?

ಚಿಕ್ಕಯ್ಯ (ಈ ಸ್ಪಷ್ಟೋಕ್ತಿಯಿಂದ ನಾಚಿ ನಕ್ಕು ತಲೆಯನ್ನು ತಿರುಗಿಸಿ) ಚಂದಾಕೆ ಇದೀಯ ಯಾಕಿಲ್ಲ? (ತನಗೆ ತಾನೇ) ಇದೇನಿಲ್ಲಿ ಯಾರೂ ಬೇರೆ ಜನವೇ ಇಲ್ಲ. ಈ ಇಬ್ಬರು ಹೆಣ್ಣು ಮಕ್ಕಳನ್ನೇ ಬಿಟ್ಟು ಹೋಗಿದಾರೆ (ಎಂದು ಮೋನಿಗೆ) ಇಲ್ಲಿ ಹೈಕಳು ಯಾರೂ ಇಲ್ಲವೇನವ್ವ?

ಮೋನಿ ಅದಾರೆ ಬರತಾರೆ. ನಿನಗೆ ಸೊಪ್ಪು ತರೋಕೆ ಹೋಗ್ಯಾರೆ.

ಚಿಕ್ಕಯ್ಯ ನನಗೆ ಸೊಪ್ಪು ತರಾಕೆ ನಾನೇನು ಆಡಿನ ಮರಿ ಆದೆನೋ?

ಮೊಲ್ಲೆ ನಿನ್ನ ಕಾಲ ಆದೇನೋ ಆಗ್ಯದ್ಯೆ, ಅದಕ್ಕೆ ಕಟ್ಟೋಕೆ ಸೊಪ್ಪು

(ಮೋನ ಅದು ಏತರದೋ ಸೊಪ್ಪು ತರುವನು).

ಮೋನ ಕಾಕ ಈ ಸೊಪ್ಪು ಅರೆಶಿಡು ಅಂದ. ಈಗಲೇ ಬಂದಾನಂತೆ ಹೆಗ್ಗಡೆ ಮಕ್ಕ ಕಾಲಿಗೆ ಕಟಲಾಕೆ. ಮೋನಿ ಇದ ಒಸಿ ಅರೆದಿಡು (ಎಂದು ಅವಳ ಕೈಗೆ ಸೊಪ್ಪನ್ನು ಕೊಡುವನು).

ಮೊಲ್ಲೆ	ಬಾ ಮೋನಿ ಅರೆಯೋಣ. ಅಪ್ಪಾಜಿ ಬರೊಮುಂದಾ (ಎಂದು ಸೊಪ್ಪನ್ನು ಅವಳ ಕೈಯಿಂದ ತೆಗೆದುಕೊಳ್ಳುವಳು. ಅವಳ ಆತುರದ ಕಾರಣವನ್ನು ಅರಿತಂತೆ ಮೋನಿ ಮೋನ ಒಬ್ಬರನ್ನೊಬ್ಬರು ನೋಡಿಕೊಳ್ಳುವರು.) ಮೋನ ಆ ಕಲ್ಲ ತತ್ತ ಇಲ್ಲಿ ಹಾಕು (ಎಂದು ಅವನಿಗೆ ಒಂದು ಕಲ್ಲನ್ನು ತೋರಿಸುವಳು. ಅವನು ಕಲ್ಲು ತಂದುಹಾಕಿ ಸೊಪ್ಪನ್ನು ಅರೆಯುವುದರಲ್ಲಿ ಕೆಲನಿಮಿಷ ಕಳೆಯುವುದು).

ಚಿಕ್ಕಯ್ಯ	ಅಯ್ಯಾ ನೀನ್ಯಾರು?

ಮೋನ	ಅಣ್ಣ ನನ್ನ ಮೋನ ಅಂತಾರ. ನಾ ಮೋನಿ ಅಣ್ಣ (ಎಂತ ತಂಗಿಯನ್ನು ತೋರುತ್ತಾನೆ).

ಚಿಕ್ಕಯ್ಯ	ನೀ ಮೊಲ್ಲೆಗೆ ಏನಾಗಬೇಕು.

ಮೋನ	ಇನ್ನೂ ಏನೂ ಇಲ್ಲ, ಏನಾರ ಆಗತೀನಿ ಅಂತೀನಿ. ಅವಳು ಒಪ್ಪಲ್ಲ.

ಚಿಕ್ಕಯ್ಯ	ನೀ ಕಾಕನಿಗೆ ಏನೂ ನಂಟಿಲ್ಲ?

ಮೋನ	ನಂಟ್ಯಾಕಿಲ್ಲ. ನಾ ಕಾಕನ ತಂಗೀ ಮಗ.

(ಕಾಚ ಬರುತ್ತಾನೆ.)

ಕಾಚ	ಮೋನ, ಸೊಪ್ಪು ಅರದು ಆಯಿತೆ (ಎಂದು ಚಿಕ್ಕಯ್ಯ ಎದ್ದು ಕುಳಿತಿರುವುದನ್ನು ಕಂಡು) ಓ ಹೆಗ್ಗಡೆ ಮಕ್ಕ ಎದ್ದದಾರೆ. ಕೈಮುಗದೆ ನನ್ನೊಡೆಯ. (ಚಿಕ್ಕಯ್ಯನು ಅವನಿಗೆ ತಲೆಯನ್ನು ಸ್ವಲ್ಪ ಬಾಗುತ್ತಾನೆ, ಅವನನ್ನು ಸ್ವಲ್ಪ ಮೆಚ್ಚಿಕೆ ಸ್ವಲ್ಪ ಕೋಪದಿಂದ ನೋಡುತ್ತಾನೆ.) ಎಲ್ಲಿ ಈ ಕಾಲು ಹಿಂಗ ನೀಡಿರ. ಏನಾಗದೆ ನೋಡೋವ. ಬಾಳ ನೋಯುತದೆಯಾ?

ಚಿಕ್ಕಯ್ಯ	ನನ್ನ ಯೋಗಾ ಚೇಮಾನಾ ನಾ ಸುಳ್ಳು ಮಂದಿಗೆ ಹೇಳೊಲ್ಲ.

ಕಾಚ	ಯಾರು ಸುಳ್ಳುಮಂದಿ? ನಾನೊ?

ಚಿಕ್ಕಯ್ಯ	ಹೌದು. ನೀ ಸುಳ್ಳಲ್ಲವೇ?

ಕಾಚ	ಏನು ಸುಳ್ಳಾಡಿದಿ ನಾನು?

ಚಿಕ್ಕಯ್ಯ ಕಾಕ ಬೇರೆ ಇದಾನೆ, ನಾ ಕಾಕ ಅಲ್ಲ ಅಂದ್ಯೆ. ನೀನೇ ಕಾಕ ಅಂತಾರೆ ಇವರು.

ಕಾಚ ನಾ ಕಾಕ ಅಲ್ಲ ಅಂದೇ ಬದುಕಿ ಬರೋದು ಗಾಸಿ ಆಯಿತೇ. ನಾ ಕಾಕ ಅಂದಿದ್ದರೆ ನಿಮ್ಮ ಕರಣೀಕರು ಬಿಟ್ಟರೋರೆ. (ಮೊಲ್ಲೆ ಮೋನಿ ಇದೇನೋ ಮಾತಾಗುತ್ತಿದೆಯೆಂದು ಇವರ ಕಡೆ ನೋಡುತ್ತಿರುವರು.)

ಚಿಕ್ಕಯ್ಯ ನೀನು ನಿಜ ಹೇಳಿದ್ದರೆ ನಾನು ನೋಡಿಕೋತಾ ಇದ್ದೆ.

ಕಾಚ ನೋಡಿಕೋತಿದ್ದೋರು, ಒಮ್ಮೆ ಬಾಯಿ ತೆಗೆಯಲಿಲ್ಲೇ! ನೀವು ನೋಡಿಕೊಂಬೋರು ಅಂತ ನಮುಕ ಹೆಂಗೆ ತಿಳಿಯ ಬೇಕು! ಆಯಿತು ಈ ಮಾತೆಲ್ಲ ಆಮೇಲೆ ಆಡಬಹುದು ಬನ್ನಿರ. ನಾ ಸುಳ್ಳಾದರೇನು ನಮ್ಮ ಸೊಪ್ಪು ಸುಳ್ಳಲ್ಲ. ನಿಮ್ಮ ಕಾಲು ವಾಸಿಯಾಗಿ ನಡೆಯೋಹಂಗಾಗಲಿ ಬನ್ನಿರ. (ಎಂದು ಮೊಲ್ಲೆಯ ಕೈಯಿಂದ ಸೊಪ್ಪಿನ ಉಂಡೆಯನ್ನು ತೆಗೆದು ಕೊಳ್ಳುವನು. ಚಿಕ್ಕಯ್ಯನು ಸೊಪ್ಪನ್ನು ಹಾಕಿಸಿಕೊಳ್ಳುವುದೇ ಬೇಡವೆ ಎಂಬಂತೆ ಸೊಪ್ಪನ್ನೂ ಇವನ ಮುಖವನ್ನೂ ನೋಡುವನು.) ಯಾಕೆ ನನ್ನೊಡೆಯ ಈ ಸೊಪ್ಪು ಹಾಕ್ಕೊಂಡರೆ ಇನ್ನೇ ನಾದಾತೊ ಅಂತಲೊ?

ಚಿಕ್ಕಯ್ಯ ಹಂಗೇ ಅನ್ನು. ಅದೇನಾದರೂ ನಂಜಿನ ಸೊಪ್ಪಾಗಿದ್ದರೆ?

ಮೋನಿ ಅವ್ವಯ್ಯ. ನಾಯಿಾ ಕಾಲಿಗೆ ನಂಜಿನಸೊಪ್ಪ ಕಟ್ಟೋಲ್ಲ ಕಾಕ. ನಿನ್ನ ಕಾಲಿಗೆ ಕಟ್ಟುತಾನೆಯಾ?

ಚಿಕ್ಕಯ್ಯ ನೋಡಿದ್ಯಾ, ಕಾಕ?

ಕಾಚ ನೋಡಿದಿ, ಕಾಕ. ತಾಯ ಕಾಣದ ತರುವಳಿ ಊರ ಹೆಣ್ಣನೆಲ್ಲ ತಾಯಂತು. ಕಾಕನ್ನ ಕಾಣದ ಮಕ್ಕಳು ನನ್ನ ಕಾಕ ಅನ್ನದೆ ಏನು ಮಾಡುತಾರೆ. ಎಲ್ಲಿ ಇಲ್ಲಿ ಕಾಲು ಕೊಡಿರ, (ಎಂದು ಚಿಕ್ಕಯ್ಯನ ಕಾಲು ಹಿಡಿದು) ಎಲ್ಲಿ ನೋವು ತದೆ? ಇಲ್ಲ್ಯ ಇಲ್ಲ್ಯ (ಎಂದು ಬಲಗಾಲಿನ ಅಡಿಯಿಂದ ಮೊಣ ಕಾಲಿನವರೆಗೆ ಅವುಕಿ ಅವುಕಿ ಕೇಳುವನು).

ಚಿಕ್ಕಯ್ಯ ಆಹ, ಆಹ (ಎಂದು ಮೊನಗುವನು).

ಮೊಲ್ಲೆ ಅಪ್ಪಾಜಿ, ನೊಂದಾತು ಅಪ್ಪಾಜಿ, ಮೆಲ್ಲಕೆ ಕಟ್ಟು.

ಕಾಚ ಮೆಲ್ಲಕೇ ಅವ್ವ ಮೆಲ್ಲಕೇ. ಎಲಾ ಮೋನ ಇಲ್ಲಿ ಹಿಡೀ ಬಾ. (ಮೋನ ಚಿಕ್ಕಯ್ಯನ ಕಾಲನ್ನು ಸ್ವಲ್ಪ ಒರಟಾಗಿ ಹಿಡಿಯುವನು.)

ಮೊಲ್ಲೆ ಮೆಲ್ಲಕೆ ಮೋನ, ಮೆಲ್ಲಕೆ. ನೊಂದಾತು ಹೆಗ್ಗಡೆ ಮಕ್ಕಕೆ.

ಮೋನ ನೋಯದ ಹಂಗೆ ಕಾಲ ಹಿಡಿಯೋಕೆ ನಾನೇನು ಹೆಣ್ಣು ಮೊಗಾನಾ ಮೊಲ್ಲೆ ? ಮೆಲ್ಲಿಕೆ ಮೆಲ್ಲಿಕೆ ಅನ್ನೋಳು ಬೇಕಾದರೆ ನೀನೇ ಬಂದು ಹಿಡಿ.

ಮೊಲ್ಲೆ ಆಗಲಿ ಹಿಡೀತೀನಿ ಏಳು, ಬಿಡು ನೀನು. (ಎಂದು ಅವನನ್ನು ಬಿಡಿಸಿ ತಾನು ಅದನ್ನು ಹಿಡಿಯುವಳು.)

ಕಾಚ ಅದೀಗ ಜಾಣ. ಎಲಾ ಮೋನ, ಹೋಗಿ ಗೌಡನ್ನ ಬರಹೇಳು. ನೀನೋ ನಾಕನೋ ಈಗಲೇ ಹೆಗ್ಗಡೆಗಳ ಪಾಳ್ಯಕ್ಕೆ ಹೋಗಿ, ನೀವು ಹಾಡೀಮೇಲೆ ಬರೋದು ಗಿರೋದು ಬ್ಯಾಡ, ನಾವು ಬಂದು ಮಾತನಾಡುತೀವಿ, ಹಂಗಲ್ಲದೆ ಹಾಡೀಮೇಲೇನಾರ ಬಂದರೆ ನಿಮ್ಮ ಕರಣೀ ಕರದೂ ನಿಮ್ಮ ಮಕ್ಕಳದೂ ಉಸುರು ತೆಗೀತೀವಿ,ಅಂತ....

ಮೊಲ್ಲೆ ಅಯ್ಯೋ ಅಪ್ಪಾಜೀ !

ಕಾಚ (ಅವಳಿಗೆ) ಅವ್ವಾ ನೀ ಸುಮ್ಕಿರು. (ಮೋನನಿಗೆ) ನಾವು ಬಂದು ಮಾತಾಡುತೀವಿ, ಅದಕೆ ಮುಂದಾಗಿ ಹಾಡೀ ಮೇಲೆ ಬಂದುಗಿಂದರೆ ಇವರ ಉಸುರು ತೆಗೀತೀವಿ, ಅಂತ ಹೇಳಿದಿ ಅಂತ ತಿಳಿಸಬೇಕು. ಹೋಗು ಗೌಡನ್ನ ಕರತಾ ಬೇಗನೆ, ಬೇಗನೆ. (ಎಂದು ಸೊಪ್ಪನ್ನು ಕಟ್ಟಿ ಮುಗಿಸಿ) ಬನ್ನಿ ನನ್ನೊಡೆಯ, ಈ ಬೂಡಾಗೆ ಒಸಿ ಮಲಗೋರಂತೆ (ಎಂದು ಚಿಕ್ಕಯ್ಯನನ್ನು ಎತ್ತಿಕೊಂಡು ಒಂದು ಕಡೆಗೆ ಹೋಗುತ್ತಾನೆ. ಮೋನ ಒಂದು ಕಡೆಗೆ ಹೋಗುತ್ತಾನೆ).

ಮೊಲ್ಲೆ ಅಯ್ಯೋ ಅಯ್ಯೋ (ಎಂದು ತಡೆಯಲಾರದೆ ಅಳುತ್ತಾಳೆ).

ಮೋನಿ ಮೊಲ್ಲೆ, ಇದ್ಯಾಕವ್ವ? ಏನಾತು? ಏನಾತು?

ಮೊಲ್ಲೆ ಅಪ್ಪಾಜಿ ಹೆಗ್ಗಡೆ ಮಕ್ಕನ ಜೀವ ತೆಗೀತೀನಿ ಅಂದನಲ್ಲ ಮೋನಿ.

ಮೋನಿ ಅವ್ವಾ ಅವ್ವ, ಹೆಗ್ಗಡೆ ಮಂದಿ ಹಾಡೀಮ್ಯಾಗೆ ಬರದಿರಲಿ ಅಂತ ಹಂಗಂದ ಕಾಕ. ಇದಕೇ ಅಳೋದೆ?

ಮೊಲ್ಲೆ ಹೆಗ್ಗಡೆ ಮಂದಿ ಬಂದರೆ?

ಮೋನಿ ಅವ್ವಾ ಅವ್ವಾ, ನನ್ನ ಮೊಲ್ಲೆ ಹೂವಾ, ಹೆಗ್ಗಡೇಗೆ ಇವ ಮಕ್ಕ ಕಾಣವ್ವ. ಇವನ ಉಸುರು ಅಂದರೆ ನೀನೇ ಹಿಂಗೆ ಅಳಬೇಕಾದರೆ ಆ ಹೆತ್ತಪ್ಪ ಮಕ್ಕನ ಕಳಕೊಂಡು ನಕ್ಕಾನಾವ್ವ? ಮಂದೀನ ಹಾಡೀಮೇಲೆ ತಂದಾನಾವ್ವ? ಬಾಯಿತ್ತಾ. ಗೌಡ ಬಂದ. ಹಿಂದಾ ಕಡೆ ಮೋನ ಅದಾನೆ. ನೀ ಅಳೋದು ನೋಡಿ ಏನಂತ ಕೇಳ್ಯಾರು!

(ಎಂದು ಅವಳನ್ನು ಕರೆದುಕೊಂಡುಹೋಗುತ್ತಿರುವಳು.)

ಗೌಡ ಎಲವ್ವಾ ಮೋನಿ, ಕಾಕ ಎಲ್ಲಿ?

ಮೋನಿ ಇಕೋ ಇಲ್ಲಿ ಈ ಬೂಡಾಗ (ಎಂದು ಕೈತೋರುವಳು. ಎಲ್ಲರೂ ಹೋಗುವರು.)

---

೭

[ಅದೇ ಸ್ಥಳ. ಆರು ದಿನದಮೇಲೆ. ಕಾಚ.]

ಕಾಚ (ತನಗೆ ತಾನೇ ಹಾಡಿಕೊಳ್ಳುತ್ತಿದಾನೆ.)
ಮಾದೇಶ್ವರಾ ನಿನ್ನ ನಂಬದಾ ಮಂದಿ
ಬಾಳಲ್ಲ ಸಾಯಲ್ಲ ಬಾಡುವರು ಕಂದಿ
ಮಾದೇಶ್ವರಾ ನನ್ನ ಸಲಹೆಂದ ಉಸುರು
ಬಾಡಲ್ಲ ಬಳಲಲ್ಲ ಎಂದೆಂದು ಹಸುರು.
ಮಾದೇಶ್ವರಾ ನಿನ್ನ ನಂಬದಾ ಬಾಳು
ಹುಲ್ಲಲ್ಲ ಮಣ್ಣಲ್ಲ ಹೊಟ್ಟಲ್ಲ ಹಾಳು.
ಮಾದೇಶ್ವರಾ ನೀನೆ ಗತಿಯೆಂದ ಬಾಳು
ಹೊಟ್ಟಲ್ಲ ಬರಡಲ್ಲ ಜಾಳಲ್ಲ ಕಾಳು.
ಮಾದೇಶ್ವರಾ ನಿನ್ನ ಕಾಣದಾ ಕೊಬ್ಬು
ಹೆರೆಯಿಲ್ಲದಿರುಳಿನಾ ಕಾವಳದ ಮಬ್ಬು.
ಮಾದೇಶ್ವರಾ ನೀನೆ ನಡಸಂದ ಜೀವಾ
ನಗುವುದು ನಲಿಯುವುದು ಅದು ಎಲ್ಲತಾವಾ
ಮಾದೇಶ್ವರಾ ನೀನೆ........
(ಗೌಡ ಬರುತ್ತಾನೆ.) ಬಾ ಗೌಡಣ್ಣ.

ಗೌಡ (ಬಂದು) ತಮ್ಮಗೌಡ ಮೈಸೂರಕ ಹೋಗಿ ಹತ್ತು ದಿನ ಆಯಿತೇ?

ಕಾಚ ಆಯಿತಲ್ಲಪ್ಪ. ಹತ್ತು ದಿನ ಆಯಿತು. ಅವನ ಸುದ್ದಿಯಿಲ್ಲೆ!

ಗೌಡ ಅರಸರು ಊರಾಗಿಲ್ಲೇನೊ ?

ಕಾಚ ಹಂಗಾರೆ ಇವನು ಹಿಂದಕ ಬರಬೇಕಾಗಿತ್ತು.

ಗೌಡ ಕರಹಟ್ಟೆ ತಾಕ್ಕೆ ಬರಲಿಲ್ಲೇನೊ ?

ಕಾಚ ಏನೊ ?

ಗೌಡ ಇಲ್ಲ ಇವ ಹೇಳಿಕೊಂಡರೆ ತಿಳೀಲಿಲ್ಲೊ ?

ಕಾಚ ಏನೋ ಕಾಣಲಿಲ್ಲೆ ?

ಗೌಡ ಇಲ್ಲ ಎತ್ತಾಗಾದರೂ ಹಾಳಾಗಿಹೋಗಲಿ ಎಂದು ಬಿಟ್ಟರೊ.

ಕಾಚ ಹೆಂಗಾರ ಇವನು ಹಿಂದಕ್ಕೆ ಬರಬೇಕಲ್ಲಪ್ಪ. ಅರಸರು ನನ್ನ ಮರೆತರೇನೂ ಸೋಜಿಗ ಅಲ್ಲ ಅನ್ನು. ಅಂದರೆ ಅವರು ಮರೆಯೋರಲ್ಲ. ಅಲ್ಲದೀರ ನಾನು ಈ ಕೈಯಿಂದ ಅವರ ಕಾಲು ಮುಟ್ಟಿ ಆನೆಯಿಂದ ಇಳಿಸಿವಿನಿ. ಮರೆತಿಲ್ಲ ಅವರು. ಅಂದರೇನಾಯಿತೋ ತಿಳೀಲ್ಲೆ !

ಗೌಡ ತಮ್ಮಗೌಡ ಬರೋದು ಇನ್ನಾ ದಿನಾ ಆದರೆ ಏನು ಮಾಡೋದು ?

ಕಾಚ ನೋಡು ಗೌಡಣ್ಣ. ನನ್ನ ಹಣ್ಯಾಗಿನ ಬರಾವು ಕೆಟ್ಟದು. ಅದು ನನ್ನ ಜನಕೆ ತಟ್ಟಿತು. ಎಲ್ಲಾ ಗೆಲ್ಲತಾ ಬಂದಿನೆ, ಇದನೂ ಗೆಲ್ಲತೀನಿ, ಇದು ದೇವರ ಮನಸು ಅಂತ ತಿಳಿದಿ. ನಾನು ಯಾವ ಹೊತ್ತಿನಾಗ ಮೈಸೂರಿಗೆ ಹೋದೆನೊ, ಈ ಜನಾನ ಏನಾರ ಮಾಡಿ ಅರಸರಿಗೆ ಒಪ್ಪಿಸಬೇಕು ಅಂತ ಅಂದುಕೊಂಡೆ. ಇವರಿಗೆ ಇತ್ತಾಗ ಕಾಡು ಇತ್ತಾಗ ಹೆಗ್ಗಡೆ ಆದರೆ ಉಳಿಬಾಳಿಲ್ಲ ಅಂತ ನನಗೆ ಕಂಡತು, ನೋಡಿದ್ಯಾ ? ಆದಕಾಗಿ ಈಸು ಮಾಡಿದ್ದಾಯಿತು. ಹೆಗ್ಗಡೆ ಇತ್ತಲಾಗೆ ಬಂದದ್ದು, ಕಾಕನ್ನ ಕರತಾ ಅಂದದ್ದು, ಆವತ್ತು ಹೋಗತಾ ದಾರೀಲಿ ಸತ್ತ ಹಾವು ತಾನೇ ಕಂಡದ್ದು, ಈ ಹೈದ ನನ್ನಅಟ್ಟಿಸಿಕೊಂಡುಬಂದು ಬಿದ್ದದ್ದು, ಎಲ್ಲಾ ನೋಡಿದರೆ ಈ ಆಟ ನಮ್ಮ ಕಡೆಗೆ ಗೆಲ್ಲಬೇಕು ಅನಸತದೆ. ಅರಸರು ಈಗ ಬರಬೇಕು ; ನಮ್ಮ ಜನದ ಕೈಹಿಡಿಯಬೇಕು ; ನಾವು ಬದುಕಬೇಕು. ಬರಬೇಕು ; ಬರಲಿಲ್ಲ. ಹಂಗಾರೆ ಏನು ಮಾಡೋದು ? ಈಸೆಲ್ಲ ಆದದ್ದು ಕೆಟ್ಟುಹೋಯಿತು ಅನ್ನೋದು, ಹೆಗ್ಗಡೆ ಹತ್ತಿರ ತಪ್ಪಾಯಿತು ಅಂತ ಹೇಳಿ ಎಂದಿನಂತೆ ಹೊಡಬಾಳು

ಬಾಳೋದು. ನನ್ನ ಬರಾವು ಕೆಟ್ಟದು ಅನ್ನೋದು, ನನ್ನ ದಾರಿ ನಾ ಹಿಡೋದು.

ಗೌಡ ಅನಕಾ ನೀ ಹೇಳಿಕಳುವಿಶಿದರೆ ಅರಸರು ಬರುತಾರೆ ಅಂದ್ಯೆ. ನನಗೆ ಅನಸತದೆ, ಇದನ್ನ ಹೆಂಗೆ ಹೇಳೋದು, ಬಂದರಾತು ಇಲ್ಲದಿದ್ದರೆ ಇಲ್ಲ, ಅಂತ. ಏನೋ, ದೊರೆಗಳ ಮನಸು, ಹೆಂಗೆ ಹೇಳೋದು?

ಕಾಚ ಗೌಡಣ್ಣ. ದೊರೆಗಳ ಮನಸು ಸರ್‍ಯೆ. ಅಂದರೆ ರಣಧೀರನ ಮನಸು ಅದ್ಯೆ, ನಮ್ಮ ಈ ದೊರೆಗಳ ಮನಸು, ನೀ ಕಾಣೆ, ಅದ. ಆ ಕಾಲು ನಾ ಮುಟ್ಟವಿನಿ. ಆ ನಾಲಿಗಿಂದ ಕಾಚ ಅಂತ ಕರೆಸಿಕೊಂಡಿವಿನಿ. ನೀ ಹೇಳಿಕಳುವು ನಾವು ಬರು ತೀವಿ ಅಂತ ಮಾತಕೊಂಡಿವಿನಿ. ಬರತೀವಿ ಅಂದ ಅರಸರು ಬಾರದೀರ ಇದ್ದರೆ ನಾ ಏನ ಮಾಡಲಿ ಗೌಡಣ್ಣ.

ಗೌಡ ಅದೇನದು ಆದದ್ದು, ನೀನು ಅರಸರನ್ನ ಮುಟ್ಟಬೇಕಾದರೆ, ನಿನ್ನ ಅವರು ಹಂಗೆ ತಿಳೀಬೇಕಾದರೆ, ನೀ ಕರದರೆ ಬರು ತೀವಿ ಅನಬೇಕಾದರೆ.

ಕಾಚ ಬಂದಿದ್ದರೆ ಆ ಮಾತು ಹೇಳಬಹುದಿತ್ತು. ಈಗ ಅದ್ನೇನ ಮಾಡೋದು? ಬಾ, ಇನ್ನೊಂದು ಮಾತು ಮಾಡಿ ನೋಡೋಣ. ಈ ಕರಣೀಕರ ಕೈಲಿ ಅರಸರಿಗೆ ಒಂದು ಅರಿಕೆ ಬರದು ಕಳುಹೋದು. ನಾಕನಿಗೆ ಕೊಟ್ಟು ಮೈಸೂರಕ ಹೋಗಿ ತಮ್ಮಗೌಡನಿಗೆ ಸಲ್ಲಿಸಿ, ಅದನ್ನ ಏನಾರ ಮಾಡಿ ಅರಸರಿಗೆ ಮುಟ್ಟಿಸಬೇಕು, ಮುಟ್ಟಿಸಿದರೂ ಸರ್‍ಯೆ, ಬಿಟ್ಟರೂ ಸರ್‍ಯೆ, ಆದದ್ದೇನು ಅಂತ ನಾಕನ ಕೈಲಿ ಹೇಳಿಕಳುಹಿಸಬೇಕು, ಅಂತನ್ನೋದು. ನಾಕ ನಾಲ್ಕು ದಿನಕ ಬರತಾನೆ. ಆವತ್ತು ಹಣ್ಣಾದರೂ ಸರ್‍ಯೆ, ಕಾಯಾ ದರೂ ಸರ್‍ಯೆ. ಹೆಗ್ಗಡೆ ಮಕ್ಕನ್ನ, ಕರಣೀಕರನ್ನ ಹಿಂದಕ್ಕೆ ಕಳುವಿಬಿಡೋದು.

ಗೌಡ ಕಂದಾಯದ ಮಾತು ?

ಕಾಚ ಅದಕ್ಕೆ ನೀವುಂಟು ಹೆಗ್ಗಡೆ ಉಂಟು. ನಾ ಏನಾದರೂ ದಾರೀ ಹಿಡೀತೀನಿ. ತಪ್ಪುದಾರೀಗೆ ಎಳದೋನು ಅಂತ ಜನ ಹೆಗ್ಗಡೆಗೆ ಹಿಡಿದುಕೊಡೋದಾದರೂನೂ ನನಗೆ ಒಪ್ಪಿಗೇನೆ.

ಗೌಡ ಆ ! ಯಾತರ ಮಾತು ಆಡತೀ ಬಿಡು ! ಬಾ, ಹೋಗೋಣ ಕರಣೀಕರ ತಾಕ್ಕೆ (ಎಂದು ಹೋಗುವರು. ಮೊಲ್ಲೆ ಮೋನಿ ಬರುವರು).

ಮೋನಿ ನೀ ಹೆಗ್ಗಡೆ ಮಕ್ಕನ್ನ ನಮ್ಮ ಹಾಡಿಯಾಗಿನ ಹೈದ ಅಂತ ತಿಳಿದಾ ಮೊಲ್ಲೆ?

ಮೊಲ್ಲೆ ಅದ್ಯಾಕಂತಿ ?

ಮೋನಿ ಯಾಕಂತಿ? ನೀ ಹಂಗ ಆಡತಿ! ನೀ ಈಗ ಇವಗೆ ಮಾಡೋಹಂಗೆ ನಾ ನಾಕಗೆ ಮಾಡಿದಿ ಕಾಡಿಗೆ ಹೋಗೋ ಮುಂದ.

ಮೊಲ್ಲೆ ಏನ ಮಾಡಿದಿ ಹೇಳು ?

ಮೋನಿ ಅವ ಇದ್ದ ತಾವು ಇರತೀನಿ ಅನ್ನೋದು, ಅವ ಹೋದ ತಾವು ಹೋಗತೀನಿ ಅನ್ನೋದು; ಬೇಕೆಂದರೂ ಬ್ಯಾಡಂದರೂ ಅವನ್ನ ಮುಟ್ಟತೀನಿ ಅನ್ನೋದು ; ನಾಯಿ ಹಿಂದೆ ತಿರುಗೋ ನಕ್ಕನ ಹಂಗೆ ಅವ ಎತ್ತ ಹೋದರೆ ಅತ್ತ ಕಣ್ಣಾಡೋದು.

ಮೊಲ್ಲೆ ಮೋನಿ ದಿಟವಾಗಿ ನನಗೆ ಹಿಂಗೇ ಆಗದೆ ಈಗ. ಹೆಗ್ಗಡೆ ಮಕ್ಕನ್ನ ನಂಗೆ ಹೆಂಗಾರ ಮಾಡಿಸಿಕೊಡಬಾರದೇನೆ ?

ಮೋನಿ ಆದನೇ ಮೊಲ್ಲೆ ನಾ ಹೇಳಿದ್ದು. ಇವತ್ತು ಇದ್ದು ನಾಳೆ ಅವರ ಕೋಟೆಗೆ ಹೋಗೋನ್ನ ನೀ ಹಿಂಗೆ ಒಲದದೀಯ. ಇದೇನು ಮಾತು ಅಂತ ?

ಮೊಲ್ಲೆ ಹೋಗೋಕಂಟ ಚೆನ್ನಾಗಿದ್ದರಾತು.

ಮೋನಿ	ಏನು ಒಂದು ದಿನ?

ಮೊಲ್ಲೆ	ಯಾಕೆ? ಇವರು ನಾಳೆ ಹೋಗತಾರಂತೇನು?

ಮೋನಿ	ನಾಳೆ ಅಲ್ಲದೀರ ಇದ್ದರ ನಾಲ್ಕು ದಿನಕ ಹೋಗತಾರ.

ಮೊಲ್ಲೆ	ನಾಲ್ಕು ದಿನ ಸಾಕು, ಮೋನಿ. ಹೆಗ್ಗಡೆ ಮಕ್ಕನ್ನ ಕೇಳುತೀಯೇನೆ?

ಮೋನಿ	ಏನಂತ ಮೊಲ್ಲೆ ಕೇಳೋದು? ಕೂಡಿದರೆ ಕೂಡಿ ಇರ ಬೇಕು. ಇಂದು ಕೂಡಿ ನಾಳೆ ಬಿಟ್ಟರೆ ಬೂಡಿನ ಹೊರಾಕ್ಕೆ ನಿಲಸತಾರೆ. ನೀ ಕಾಣ್ಯಾವ್ವ?

ಮೊಲ್ಲೆ	ನಿಲ್ಲಿಸಲಿ ಮೋನಿ. ನಿಂತಬಿಡುತೀನಿ.

ಮೋನಿ	ಕಾಕನ ಮಗಳು?

ಮೊಲ್ಲೆ	ಕಾಕನ ಮಗಳಾದರೇನು? ಆಚೆಗೆ ನಿಲ್ಲು ಅಂದರೆ ನಿಲ್ಲೋದೆ

ಮೋನಿ	ಆರಿಯುದ ಮೊಗಾನ್ನ ಬಟ್ಟೆಗೆಡಿಸಿದಳು ಅಂತ ನನ್ನ ಸಿಗಿಯುತಾರಲ್ಲವ್ವ?

ಮೊಲ್ಲೆ	ನೀ ಇದರ ಮಾತಿಗೆ ಬಂದಿ ಅಂತ ನಾ ಹೇಳೋಲ್ಲ.

ಮೋನಿ	ಯಾರ್ಯಾಕೆ ಹೇಳಬೇಕು ಮೊಲ್ಲೆ. ಹಾಡೀ ಎಲ್ಲ ಬಲ್ಲುದು ಇದನ. ನಾಕ ನನಮೇಲೆ ಏನು ಸಿಟ್ಟ ಅಂತೀಯಾ!

ಮೊಲ್ಲೆ	ಯಾಕಂತೆ?

ಮೋನಿ	ನಿನ್ನ ಹೆಸರಿಟ್ಟು ನಾ ಹೆಗ್ಗಡೆ ಮಕ್ಕನ ಹಿಂದೆ ಅಲೀತೀ ನಂತೆ.

ಮೊಲ್ಲೆ	ಮೋನಿ ನೀ ದೀಟವಾಗಿ ಹೇಳು ಹೆಗ್ಗಡೆ ಮಕ್ಕ ಚಂದಾಗ ದಾನಲ್ಲ?

ಮೋನಿ	ಅವನ ಹುಬ್ಬು ತುಟಿ ಚಂದಾಗವೆ. ಮಿಕ್ಕೋದು ನಾಕನೇ ಚಂದ.

ಮೊಲ್ಲೆ	ನಾಕ? ಏನಂದಿ ಮೋನಿ! ಮೋನಿ, ಆ ಮಾತತ್ತಿರಲಿ ಹೆಗ್ಗಡೆ ಮಕ್ಕನ್ನ ಕೇಳೋಣೇನೆ?

ಮೋನಿ ಕೇಳೋನೆಂದರೆ ಕೇಳೋನವ್ವ. ಇಕೊ ಹೆಗ್ಗಡೆಯ ಮಕ್ಕ ಬಂದೇಬಂದ. ಏನಾರ ಮಾತನಾಡಿಸು. ಹೊರಡೋಮುಂದ ಅವನ ಕಣ್ಣಿಗೆ ಈ ಕಲ್ಕ ಹಚ್ಚು. ಒಲದು ನೋಡತಾನೆ.

(ಚಿಕ್ಕಯ್ಯ ಬರುತ್ತಾನೆ.)

ಚಿಕ್ಕಯ್ಯ ಏನು ಮೊಲ್ಲೆ, ಮೋನಿ.

ಮೋನಿ ಕೈಮುಗಿದಿವಿ, ಒಡೆಯ. (ಮೊಲ್ಲೆ ಮಾತನಾಡುವುದಿಲ್ಲ) ಮೊಲ್ಲೆ ಮಾತಾಡೆ.

ಮೊಲ್ಲೆ ಕೈಮುಗಿದಿವಿ, ಒಡೆಯ.

ಚಿಕ್ಕಯ್ಯ ಕಾಕನ ಸೆರೆಯಾಳು ನಾನು. ನನಗೇನು ಕೈಮುಗೀತೀವ್ವ?

ಮೊಲ್ಲೆ ನಿನ್ನ ಕಾಲು ಹೆಂಗದೆ ಈಗ ?

ಚಿಕ್ಕಯ್ಯ ಸರಿಯಾತು, ನಡೀತೀನಿ. ಬಾವಿಲ್ಲ, ನೋವಿಲ್ಲ.

ಮೋನಿ ಮೊಲ್ಲೆ, ಕಾಲು ಸರಿಯಾತ ನೋಡು, ಇಲ್ಲ ಒಸಿ ಸೊಪ್ಪ ತರೋನೊ ? ಕುಂತಿರು ನನ್ನೊಡೆಯ, ಮೊಲ್ಲೆ ಕಾಲು ನೋಡಲಿ.

(ಚಿಕ್ಕಯ್ಯನು ಕುಳಿತುಕೊಳ್ಳುವನು.)

ಮೊಲ್ಲೆ (ಅವನ ಕಾಲ ಬಳಿ ಕುಳಿತು ಕಾಲನ್ನು ಮುಟ್ಟಿ ಅವುಕಿ) ನೋಯು ತದಾ ? ನೋಯುತದಾ ?

ಚಿಕ್ಕಯ್ಯ ಇಲ್ಲ ಅಂದಿನೇ, ನೋವು ಒಸೀನೂ ಇಲ್ಲ.

ಮೋನಿ ಒಡೆಯನಿಗೆ ಇಲ್ಲಿ ಹೊತ್ತು ಕಳೆಯೋದೇ ಗಾಸಿ. ಹಾಡೀ ಹೈಕಳಾದರೆ ಕಾಡಿಗೆ ಹೋಗಿ ಬರತಾರೆ.

ಚಿಕ್ಕಯ್ಯ ಗಾಸಿ ಏನೂ ಇಲ್ಲ. ನೀನೂ ಮೊಲ್ಲೆ ಮಾತಾಡಸತಾ ಇದ್ದರೆ ನೋಡುತ ಇದ್ದಹಂಗೆ ಹೊತ್ತು ಹೋಗತದೆ.

ಮೊಲ್ಲೆ ಮೋನೀ (ಎಂದು ಸಂತೋಷದಿಂದ ಅವಳ ಕಡೆ ನೋಡುತ್ತಾಳೆ).

ಮೋನಿ ನೆನ್ನೆ ನಮ್ಮ ಹೈಕಳು ಕುಣಿದದ್ದು ಚಂದಾಗಿತ್ತು ಅಂದಿ. ನಮ್ಮ ಮೊಲ್ಲೆ ಒಂದು ಹೊತ್ತುಟ್ಟು ಕುಣಿತ ಅಂತ ಕುಣೀ ತಾಳೆ. ಬಹಳ ಚಂದಾಗಿರತಾದೆ.

ಚಿಕ್ಕಯ್ಯ ದಿಟವಾಗಿ? ಇವತ್ತು ನೋಡಬಹುದು.

ಮೋಣಿ ಹೊರಗಿನ ಮಂದಿ ಮುಂದೆ ಹೆಣ್ಣುಮಕ್ಕಳು ಕುಣೀ ಬಾರದಂತಾರೆ.

ಚಿಕ್ಕಯ್ಯ ನಾಯಾಕೆ ಹೊರಗಿನಮಂದಿ, ನಾವು ಕೋಟೆ ಕುರುಬರು, ನೀವು ಹಾಡೀ ಕುರುಬರು. ನಮ್ಮ ಹೆಣ್ಣುಮಕ್ಕಳೂ ಕುಣಿಯುತಾರೆ.

ಮೋಣಿ ನಿಮ್ಮ ಕುಣಿತ ಬೇರೆ ಹಂಗೆ ಇರಬೇಕು. ಮೊಲ್ಲೀ ಹೊತ್ತುಟ್ಟು ಕುಣಿತ ಒಸಿ ತೋರಿಸು ಒಡೆಯನಿಗೆ.

ಮೊಲ್ಲೆ ನೀ ಹಾಡಿ ಪರೆ ಕುಟ್ಟುತೀಯಾ ಮೋಣಿ.

ಮೋಣಿ ಊಂ ಕುಟ್ಟುತೀನಿ. (ಎಂದು ಮೆಲ್ಲನೆ ಕೈಯಿಂದ ತಾಳಹಾಕುತ್ತ ಹಾಡುವಳು; ಮೊಲ್ಲೆ ಕುಣಿಯುವಳು.)

ನೇಸರ ನೋಡು ನೇಸರ ನೋಡು
ನೇಸರ ನೋಡು ನೇಸರ ನೋಡು

ಮೂಡಣ ಬೈಲಿಂದ ಮೇಲಕೆ ಹಾರಿ
ದೂರದ ಮಲೆಯ ತಲೆಯನೆ ಏರಿ
ನೇಸರ ನೋಡು ನೇಸರ ನೋಡು

ದೂರದ ತಗ್ಗಿಂದ ಬಾನಿಗೆ ಚಿಗಿದು
ಮಲೆಗಳ ತಲೆಯನು ಮೆಟ್ಟಿ ನೆಗೆದು
ನೇಸರ ನೋಡು ನೇಸರ ನೋಡು

ಹೊರಳಿತು ಇರುಳು ಬೆಳಕಿನ ಬೂಡು
ತೆರೆಯಿತು ನೋಡು ಬೆಳಗಿತು ನಾಡು
ನೇಸರ ನೋಡು ನೇಸರ ನೋಡು

ಬಣ್ಣವೇನೊ ಇದು ಪರಿಪರಿ ಪರಿಯಾ
ಮಾದೇಶ್ವರನಿಗೆ ಕಡಿದರೊ ಮರಿಯಾ
ನೇಸರ ನೋಡು ನೇಸರ ನೋಡು

ಪರಿಪರಿ ಬಣ್ಣದ ಹಾರುವ ಹಕ್ಕಿ
ಮಾಡಿತು ನೋಡೋ ಅಕ್ಕಿ ಬಿಕ್ಕಿ
ನೇಸರ ನೋಡು ನೇಸರ ನೋಡು

ಅಕ್ಕೀ ಬಿಕ್ಕಿ ಆಯಿತು ಚಿಕ್ಕೀ
ಬೆದರಿತು ಓಡಿತು ಹಾಡಿತು ಹಕ್ಕೀ
ನೇಸರ ನೋಡು ನೇಸರ ನೋಡು

ಹಾಡಿತು ಕೇಳೋ ಕೋಗಿಲೆ ಗೊರವ
ಗೂಡನೆ ಬಿಟ್ಟು ಸಾರಿತು ಮರವ
ನೇಸರ ನೋಡು ನೇಸರ ನೋಡು

ಹಾಡುವ ಹಕ್ಕಿಯು ಕೊರಲನು ಕೇಳು
ದನಿಯಿದು ಎನಿತು ಐದಾರೇಳು
ನೇಸರ ನೋಡು ನೇಸರ ನೋಡು

ಮರವನು ಸಾರಿದ ತಾಯನು ಕರೆದು
ಮೊರೆಯುತ ಇದೆ ಮರಿ ಹಂಗನು ತೊರೆದು
ನೇಸರ ನೋಡು ನೇಸರ ನೋಡು

ಹಂಗನು ತೊರೆದೇ ಹೂತಿದೆ ಬಳ್ಳಿ
ನೋಡೋ ಬೂರುಗ ಹಿಡಿದಿದೆ ಕೊಳ್ಳಿ
ನೇಸರ ನೋಡು ನೇಸರ ನೋಡು

ಬೂರುಗ ಹಿಡಿದಾ ಸೊಡರನು ನೋಡು
ಕೇಳದರೆಡೆ ಗಿಳಿ ಹಾಡುವ ಹಾಡು
ನೇಸರ ನೋಡು ನೇಸರ ನೋಡು

ಹಾಡುವ ಗಿಳಿಗೆ ಹಣ್ಣನು ಕೊಟ್ಟು
ಮೆದುವಾಯಿತ್ತೊ ಮಾವಿನ ತೊಟ್ಟು
ನೇಸರ ನೋಡು ನೇಸರ ನೋಡು

ಚಿಕ್ಕಯ್ಯ ಇದೇಸೊತ್ತು ಕುಣಿಯೋಕಾಗತದವ್ವಾ ಹಿಂಗೆ? ಇದೇನು ಮನಸರಕೆ ಸಾಕಾಗೋದಿಲ್ವೆ?

ಮೋನಿ ಮೊಲ್ಲೆ, ಸಾಕಂತೆ ಬಿಡವ್ವ, ನಾಲ್ಕು ಹೆಜ್ಜೆಹಾಕಿ ನಿಲ್ಲಿಸು.
ಹುಟ್ಟುವ ನೇಸರ ನೋಡಿ ನೋಡಿ
ನಲಿದಾಡಿತು ಕರಿಹೈದನ ಹಾಡಿ,
ಕರಿಹೈದನ ಬಳಿ ನಲಿಯಲಿ ಎಂದೂ
ನಲಿಯಲಿ ಬೆಳೆಯಲಿ ಇಂದೂ ಮುಂದೂ

(ಎಂದು ನಿಲ್ಲಿಸುವಳು. ಈ ವೇಳೆಗೆ ಕಾಚ, ಗೌಡ ಬಂದು ಒಂದು ಕಡೆಗೆ ನಿಂತು ಇವರನ್ನು ನೋಡುತ್ತಿರುವರು.)

ಚಿಕ್ಕಯ್ಯ ನೇಸರ ನೋಡು, ನೇಸರ ನೋಡು ಅಂತ ಅಂದದ್ದನ್ನೇ ಅಂತಿದ್ದರೆ ತಲೆ ಚಿಟಗುಟ್ಟುತದೆ.

ಮೋನಿ ಮೊಲ್ಲೆ, ಹೆಗ್ಗಡೆ ಮಕ್ಕಗೆ ತಲೆ ಚಿಟಗುಟತದಂತೆ, ಆ ಕಲ್ಕ ಹಚ್ಚು.

(ಮೊಲ್ಲೆ ಕಲ್ಕವನ್ನು ತೆಗೆದುಕೊಂಡು ಹತ್ತಿರ ಹೋಗುವಳು.)

ಚಿಕ್ಕಯ್ಯ ಚಿಟಗುಟೋದು ಅಂದರೆ ಬೇಸರತದೆ ಅಂದಿ. ನನಕೆ ತಲೆ ಏನೂ ಆಗಲ್ಲ.

ಮೋನಿ ಅಂದರೂ ಈ ಕಲ್ಕ ಒಳಿತು.

ಚಿಕ್ಕಯ್ಯ ಹಂಗಾದರೆ ಹಚ್ಚವ್ವ. ಯಾಕೆ ಬೇಡ ಅನ್ನಲಿ. ನಮ್ಮ ಮೊಲ್ಲೆ ಏನ ಮಾಡಿದರೂ ಚಂದಾಗೆ ಇರುತದೆ.

(ಮೊಲ್ಲೆ ಅವನ ಕಣ್ಣಿಗೆ ಕಲ್ಕವನ್ನು ಹಚ್ಚುವಳು. ಚಿಕ್ಕಯ್ಯನು ಅವಳನ್ನೇ ನೋಡುತಿದ್ದು ಅವಳು ಕಲ್ಕವನ್ನು ಹಚ್ಚಿ ಮುಗಿಸಿದ ಮೇಲೆ ಸರಸಕ್ಕೆ ಅವಳ ಗಲ್ಲವನ್ನು ಅಲುಗಿಸುವನು.)

ಕಾಚ (ಗೌಡನ ಒಡನೆ ಒಳಕ್ಕೆ ಬಂದು) ಏನಿದು ಮೊಲ್ಲೆ? ಯಾತರದಿದು ಮೋನಿ? ಹಾಡಿ ಹೆಣ್ಮಕ್ಕಳುಹಿಂಗೇನ ಮಾಡೋದು?

(ಮೊಲ್ಲೆ ಮೋನಿ ಬೆಚ್ಚಿ ನಿಲ್ಲುವರು. ಚಿಕ್ಕಯ್ಯನೂ ಎದ್ದು ನಿಲ್ಲುವನು.)

ಚಿಕ್ಕಯ್ಯ ಅವರೇನೂ ಮಾಡಲ್ಲ.

ಕಾಚ ಸರಿ ಒಡೆಯ, ಸರಿಯಾತು. ಹೆಗ್ಗಡೆ ಮಕ್ಕಳೇ ಆಗಲಿ ಹೆಣ್ಮೊಗಾನ ಹಿಂಗೆ ಮುಟ್ಟೋದ?

ಚಿಕ್ಕಯ್ಯ ಅರಿಯದ ಹಸುಮೊಗ ಅಂತ ಮುಟ್ಟದಿ. ಮೋನಿ ಇಲ್ಲೇ ಇದ್ದಲು.

ಕಾಚ ಮೋನಿ ಒಬ್ಬ ಕೂಡಾಳಿ; ಮೊಲ್ಲೆ ಒಂದು ಮಕ್ಕು; ನಡೀರವ್ವ ಬೂಡಿಗೆ.

(ಅವರು ಇಬ್ಬರೂ ಹಿಂದೆ ಹಿಂದೆ ನೋಡುತ್ತ ಹೋಗುವರು.)

ಒಡೇರ ಕಾಲು ಸರಿಯಾಗಲಿ, ಆ ವೇಳೆಗೆ ಕಾಕ ಬರತಾನೆ, ಅಂತ ತಡದಿ. ಕಾಕ ಬರಲಿಲ್ಲ. ಒಡೇರ ಕಾಲು ಸರಿಯಾತು. ನಾಳೆ ಅಲ್ಲ ನಾಡದ್ದು ನಿಮ್ಮ ಅಪ್ಪಾಜಿಯೋರ ತಾವಕ್ಕೆ ಹೋಗಬಹುದು. ಅದುವರೆಗೆ ನಮ್ಮ ಹೆಣ್ಮಕ್ಕಳ ನಡತಿ ಉಳಿಸಿಕೊಡಬೇಕು.

ಚಿಕ್ಕಯ್ಯ ತಿಳಿದು ಮಾತನಾಡು ಕಾಕ. ನಾ ಏನೂ ಮಾಡಿಲ್ಲ.

ಕಾಚ ಮಾಡಲಿಲ್ಲ ಸರ್‍ಯೆ ಒಡೆಯ, ಇನ್ನು ಮಾಡಬೇಡಿರ ಅಂತಿನಿ. ಬಿಡಾರಕ್ಕೆ ನಡೀರ.

ಚಿಕ್ಕಯ್ಯ ವಾರದ ದಿನ ಸಾಕಿದೋನು ಅಂತ ಸುಮ್ಮನಿದೀನಿ. ಇಲ್ಲ ದಿದ್ದರೆ ಈ ಮಾತಿಗೆ ನಿನ್ನ ಬಡೀಬೇಕು.

ಕಾಚ ಆಗಬಹುದು ನಡೀರ. ಹೆಗ್ಗಡೆ ಕೆಲಸಾ ಅದೇನೆ. ಬಡೀ ವಿರಂತೆ, ನಡೀರ.

(ಚಿಕ್ಕಯ್ಯ ಕೋಪದಿಂದ ಹೊರಟುಹೋಗುವನು.)

ಗೌಡಣ್ಣ, ಮೋನನ್ನ ಕರಿ, ಈ ಅರಿಕೆ ಮೈಸೂರಿಗೆ ಕಳುವು. ನಾಡಿದ್ದಲ್ಲ ಆಚೆ ದಿನ ಅವ ಬಂದರೂ ಆತು, ಬಿಟ್ಟರೂ ಆತು. ನನಗೆ ಈ ಆಟ ಸಾಕು ಅನಿಸತದೆ. ಮೊಲ್ಲೆ ಹಿಂಗಾದಲೇ!

---

## ೮

[ಹೆಗ್ಗಡೆಯ ಪಾಳ್ಯದ ಮುಂದೆ. ರಣಧೀರ, ಶಿಂಗಾಜೆಟ್ಟಿ, ತಮ್ಮಗೌಡ ಬರುವರು.]

ರಣಧೀರ — ಹೆಗ್ಗಡೆ ಪಾಳ್ಯ ಇಲ್ಲೇಯೋ.

ತಮ್ಮಗೌಡ — ಹೌದು ನನ್ನೊಡೆಯ.

ರಣಧೀರ — ಒಳ್ಗೇದು ಅವರ ಕಡೆಯುವರನ್ನ ಕರೆದು ಹೇಳು. ಅರಸರ ಕಡೆಯಿಂದ ಯಾರೋ ಬಂದಿದಾರೆ ಅಂತ.

ತಮ್ಮಗೌಡ — ಹೇಳುತೀನಿ ನನ್ನೊಡೆಯ.

ರಣಧೀರ — ಅರಸರು ಬಂದಿದಾರೆ ಅಂತ ಬಾಯಿ ತಪ್ಪಿ ಹೇಳಬಾರದು.

ತಮ್ಮಗೌಡ — ಇಲ್ಲ ನನ್ನೊಡೆಯ (ಎಂದು ಒಳಗೆ ಹೋಗುವನು).

ರಣಧೀರ — ನೀನಾದರೂ, ಶಿಂಗ, ನಮಗೆ ಬಹಳ ಮರ್ಯಾದೆ ತೋರಿ ನಾವು ಅರಸರು ಅನ್ನೋದನ್ನ ಬಿಟ್ಟುಕೊಡಬಾರದು.

ಶಿಂಗಾ — ಇಲ್ಲಾ, ಪ್ರಭುವೆ. ತಿರುಚನಾಪಳ್ಳಿಗೆ ಹೋಗಿದ್ದಾಗ ನೋಡ ಲಿಲ್ಲವೆ?

ರಣಧೀರ — ನಮ್ಮ ಕೈ ಮೇಲಾಗಿದ್ದಷ್ಟು ಹೊತ್ತೂ ಎಚ್ಚರಿಕೆಯಿಂದ ಇದ್ದೆ. ಸ್ವಲ್ಪ ಏನೋ ಕೆಳಕ್ಕೆಯಾಯಿತು ಅಂತ ಕಾಣಲೂ ನರೀ ಹಿಡಿತ ಹಿಡೀಬೇಕು ಒಡೆಯಾ ಎಂತ ಕೂಗಿಕೊಂಡೆ.

ಶಿಂಗಾ — ಹೌದು ಮಹಾಸ್ವಾಮಿ. ಮನಸ್ಸು ತಡೆಯಲಿಲ್ಲ; ಕೂಗಿ ಬಿಟ್ಟೆ. ದೊರೆಗಳಿಗೆ ಹೇಳದೆ ಹೊರಟದ್ದಾಯಿತೇ, ತಿರುಚನಾಪಳ್ಳಿಯಲ್ಲಿ ಏನಾದರೂ ಆಗಿಹೋದರೆ ನಾ ಮೈಸೂರಿಗೆ ಯಾವ ಮೊಕದಲ್ಲಿ ಹೋಗೋದು ಅಂತ ಭಯಪಟ್ಟೆ.

ರಣಧೀರ — ನಿನ್ನ ಭಯವೇನೋ ನ್ಯಾಯ. ಅಂದರೆ ಮರೆಸಿಕೊಂಡು ಹೋಗಿದ್ದದು ತೆರವಾಗುತ್ತಿತ್ತು.

ಶಿಂಗಾ — ನಮ್ಮ ಮಾತಿನಲ್ಲಿ ನಾ ಕೂಗಿದರೆ ಆ ತಿಗಳರಿಗೆ ಏನು ತಿಳಿಯಬೇಕು?

ರಣಧೀರ ಅನಕಾ, ಅವರ ಮಾತು ನಮಗೆ ತಿಳಿಯುವುದಿಲ್ಲ, ನಮ್ಮ ಮಾತು ಅವರಿಗೆ ತಿಳಿಯುವುದಿಲ್ಲ, ಅಲ್ಲ?

ಶಿಂಗಾ ಅವರ ಮಾತು, ನಮಗೇನು ಮಹಾಸ್ವಾಮಿ, ಅವರಿಗೇ ತಿಳಿಯೋಲ್ಲ. ಆವ್ ಅಂತ ಒಂದು ಮಾತಿನಲ್ಲಿ ತುಟಿಗೆ ತುಟಿ ಮುಟ್ಟಿಸತಾರೆ. ಮಿಕ್ಕಾದ ಮಾತೆಲ್ಲ ತೆರೆದ ಬಾಯಲ್ಲೆ ಆಡೋದು. ಏನು ಮಾತು ಹೇಳಿದರೂ ಬೈದಹಂಗೆ ಕೇಳಿಸುತದೆ.

ರಣಧೀರ ಅಂದರೆ ನಿನಗೆ ಒಂದು ಸುಖ ನೋಡು, ಹೇಳೋದು ಏನೂ ತಿಳಿಯೋದಿಲ್ಲ. ಬೈದರೂ ನಗುತಾ ಕೇಳು ತಿರತೀಯ.

ಶಿಂಗಾ ಅದೂ ನನಗೆ ಸಮ್ಮತ ಮಹಾಸ್ವಾಮಿ. ಬೈದರೂ ಸರಿ, ಹೊಡೆದರೂ ಸರಿ, ಮೈಸೂರು ಮುಖ ನಗುಮುಖ ಅಂತಾರೆ.

ರಣಧೀರ ನಗುಮುಖ ಅಂತ ಹೇಳಿ ಮುಗಿಸುತಾರೋ ಮಂಗಳಾ ರತೀನೂ ಮಾಡುತಾರೊ?

ಶಿಂಗಾ ಮಂಗಳಾರತೀ ಮಾಡೋಕೆ ನಾನೇನು ಅವರಿಗೆ ಸೋತೆನೇ ಮಹಾಸ್ವಾಮಿ? ನನ್ನ ಕೂಡ ಹೋದ ಜಟ್ಟಿ ಅವರ ಜಟ್ಟೀನ ಬಡಿದನೊ ಇಲ್ಲೋ? ಕಬ್ಬದಯ್ಯ ಹೇಳಿದಹಾಗೆ, ಅವರ ಜಟ್ಟಿ ಆಮೇಲೆ ತನ್ನ ತೋಳಲ್ಲಿ ಜಟ್ಟೀ ಒಬ್ಬನ್ನ ಹಿಡಿಯೋ ಹಾಗಿಲ್ಲ. ಇನ್ನವನು ಹಿಡಿಯೋದು ಏನಿದ್ದರೂ ಸ್ವರ್ಗ ಲೋಕದ ಸುಂದರಿಯರನ್ನ.

ರಣಧೀರ ಅಯ್ಯೋ ಪಾಪ, ಅಯ್ಯೋ ಪಾಪ, ಅವರ ಹಣೇಲಿ ಇನ್ನೇನೇನು ಬರೆದಿದೆಯೋ? ಇದು ಯಾರು ಬಂದವರು? ಇವನು ಹೆಗ್ಗಡೆ ಉಂಟೆ?

(ತಮ್ಮ ಗೌಡನೊಡನೆ ಮಾಚಣ್ಣ ಬರುವನು.)

ತಮ್ಮಗೌಡ ಅರಿಸಿದಿವಿ ಒಡೆಯ, ಬರುತೀವಿ ಅಂದರು.

ರಣಧೀರ ಇವನ್ಯಾರು ?

ತಮ್ಮಗೌಡ ಹೆಗ್ಗಡೆ ದಲಾಯಿತರು.

ಮಾಚ ನನ್ನ ಮಾಚನಾಯಕ ಅಂತಾರೆ ಗುರುವೆ.

ರಣಧೀರ ಒಳ್ಳೇದು ಮಾಚನಾಯಕ, ಹೆಗ್ಗಡೆಗಳು ಬಂದರೆ ಹೇಳು.

ಮಾಚ ಅಪ್ಪಣೆ ಸ್ವಾಮಿ.

ರಣಧೀರ (ಶಿಂಗನಿಗೆ) ಕಬ್ಬದಯ್ಯ ಬರೆದದ್ದು ನಿನಗೆ ಜ್ಞಾಪಕ ಇದೆಯೇ ?

ಶಿಂಗಾ ಮಹಾಸ್ವಾಮಿ ನನಗೇನಿದ್ದರೂ ನಾಲ್ಕು ಪಟ್ಟು ಜ್ಞಾಪಕ ಇದೆ. ಈ ಕಬ್ಬ ಕಗ್ಗ ನನ್ನ ತಲೆಗೇ ಹೋಗೋದಿಲ್ಲ ಪ್ರಭು.

ರಣಧೀರ ಒಳ್ಳೇದಾಯಿತು ಬಿಡು. ಇಂತಾದೆಲ್ಲಾ ತಲೆಹೊಕ್ಕರೆ ಅದು ಮೆತ್ತಗಾಗುತದೋ ಏನೋ! (ಮಾಚಣ್ಣ ಹತ್ತಿರ ಬರುವನು.) ಏನಯ್ಯ ಅದು.

ಮಾಚ ಸ್ವಾಮಿಯವರು ಅತ್ತಲಾಗೆ ದಯಮಾಡಬೇಕು ಅಂತಾರೆ.

ರಣಧೀರ ಆಯಿತು, ಬಂದೇ ಶಿಂಗ, ಇಲ್ಲೇ ಇರು.

(ಎಂದು ಒಳಕ್ಕೆ ಹೋಗುವನು, ಮಾಚಣ್ಣ ಹಿಂದೆ ನಡೆಯುವನು.)

ಶಿಂಗಾ ಆ ನಾಯಕನನ್ನ ಏನಾದರೂ ಕೇಳಿದೇನಯ್ಯ? ಏನಾಯಿತು ಆಚೆಗೆ ಸಮಾಚಾರ ?

ತಮ್ಮ ದಾರೀಲಿ ಕೇಳಿದ ಮಾತು ನಿಜ ನನ್ನೊಡೆಯ. ಎಲ್ಲಾ ತಲಕೆಳಗಾಗ್ಯದೆ. ಆಗ ಇವರು ನಮ್ಮ ಬೆದರಿಸುತಿದ್ದರು. ಈಗ ನಮ್ಮ ಕಾಕ ಇವರ ಬೆದರಿಸುತಿದ್ದಾನೆ.

ಶಿಂಗಾ ಏನಾಯಿತಂತೆ ?

ತಮ್ಮ ಕಾಕ ಬಂದು ಮಾತನಾಡಿದನಂತೆ. ಇವರು ಅವನ್ನ ಹಿಡಿಯೋಕೆ ಹೋದರು. ಅವ ಹೆಗ್ಗಡೆ ಮಕ್ಕನ್ನ ಹಿಡು ಕೊಂಡು ಹೋಗ್ಯವನಂತೆ. ಹೆಜ್ಜೆ ಮುಂದಕ್ಕೆ ಇಟ್ಟರೆ ಮಗನ್ನ ಕೊಲ್ಲುತೀನಿ ಅಂತಾನೆ. ಬಿಟ್ಟು ಹೋಗಲಾಕಿಲ್ಲ,

ಬಿಡಿಸಿಕೊಳ್ಳೋಣ ಅಂತ ಮುಂದೆ ನಡೆಯು ಹಂಗಿಲ್ಲ, ಅಂದ ನಮ್ಮ ನಾಯಕ.

ಶಿಂಗಾ ಹೌದಲ್ಲಯ್ಯ, ನೀನು ಮೈಸೂರಿಗೆ ಬಂದೋನು, ಕಾಚ ಹೇಳಿದ ಅನ್ನದ ಹಂಗೆ, ಕಾಕ, ಕಾಕ ಅಂತ ಹೇಳಿ ಅರಸರಿಗೆ ತಿಳಿಯದೆ ಮಾಡಿಬಿಟ್ಟೆ. ಕಾಚ ಬರಹೇಳಿದ ಅಂದರೆ ಆ ಹೊತ್ತೇ ಬಂದಿರೋರು. ಎಲ್ಲಾ ಸರಾಗ ಆಗಿತ್ತು.

ತಮ್ಮ ಏನೋ ನನ್ನೊಡೆಯ ನನಕ ಕಾಕನೇನು ಕಾಚನೇನು? ನನಕ ಗೊತ್ತಲ್ಲ, ನಿಮುಕೂ ಗೊತ್ತು, ಅಂತ ತಿಳಿದಿ.

ಶಿಂಗಾ ಅನಕಾ ತಡವಾಯಿತು. ಇಲ್ಲಿ ಈ ರಾದ್ಧಾಂತ ನಡೆಯಿತು.

ತಮ್ಮ ಈಗ ದಣಿಗಳು ಬಂದಿದೀರಾ ಇನ್ನೆಲ್ಲ ಸಿಕ್ಕೂ ಬಿಡಿಸಬೇಕು. ಎಲ್ಲಾ ಮೊಕದ ಸುಕ್ಕೂ ಹೋಗಿ ನಗುಮೊಕನಾಗಬೇಕು.

ಶಿಂಗಾ ಆಗತದೆ, ಆಗತದೆ; ದಣಿಗಳು ಬಂದಮೇಲೆ ನಗುಮೊಕ ನಾಗದೇ ಇರುತದೆಯಾ. ಅಂದರೆ ನಿಮ್ಮ ಜನರೂ ನೀನೂ ಅವರನ್ನ ಅರಸರು ಅಂತ ಹೇಳಬಾರದು. ಅರಸರ ಕಡೆಯ ಮನಸರು ಅನ್ನಬೇಕು. ಈ ಕರೇ ಕಳುಹಿಸಿರೋನು ತಮ್ಮ ಕಾಚ ಹೌದೋ ಅಲ್ಲೋ ಅಂತ ಅರಸರಿಗೆ ಇನ್ನೂ ಅರೆಮನಸು. ಅವರು ಅವನ್ನ ನೋಡೋತನಕ ಈ ಮಾತ ನೀನು ಹೇಳಬಾರದು.

ತಮ್ಮ ಇಲ್ಲ ನನ್ನೊಡೆಯ. ಅಂದರೆ ನಿಮ್ಮ ಕಾಚ ಅಲ್ಲದೀರಾ ಇದ್ದರೂ ನೀವು ಅವನಿಗೆ ಏನೂ ಮಾಡಬಾರದು.

ಶಿಂಗಾ ಏನೂ ಮಾಡೋದಿಲ್ಲ. ನಿನಗೆ ಆ ಭಯ ಬೇಡ.

ತಮ್ಮ ಸರಿ ನನ್ನೊಡೆಯ.

(ಮೋನ ಬರುತ್ತಾನೆ.) ಏನೆಲಾ ಮೋನ.

ಮೋನ ನೀನೇ ಗೌಡಣ್ಣ, ನಿನ್ನ ಹಂಗೆ ದನಿಯಾತು. ಹೌದೋ ಅಲ್ಲೋ ಅಂತ ಬಂದಿ. ನಾ ನಿನ್ನ ನೋಡಾಕೆ ಮೈಸೂರಿಗೆ ಪೊಂಟಿದ್ದಿನಿ.

ತಮ್ಮ ಅದೇನ ನನ್ನ ನೋಡಾಕೆ ?

ಮೋನ ದಿನ ಆತು, ಬರಲ್ಲ, ಈ ಓಲೆ ನಿನ್ನ ಕೈಗೆ ಕೊಟ್ಟು ದೊರೆ ಗಳಿಗೆ ಮುಟ್ಟಿಸು ಅಂತ ಹೇಳಂದರು. ತಕ್ಕೊಂಡವನೆ ವೊಂಟೆ.

(ಎಂದು ಓಲೆಯನ್ನು ಅವನ ಕೈಗೆ ಕೊಡುವನು.)

ತಮ್ಮ ಒಳಿತಾತು. (ಎಂದು ಅದನ್ನು ತೆಗೆದುಕೊಂಡು) ಮುಟ್ಟಿ ಸೋಣ, ಅರಸರ ಕಡ್ಯಾಗಿಂದ ಹಿರಿಯೋರು ಬಂದವರೆ, ಅವರ ಕೈಗೆ ಕೊಟ್ಟರೆ ಅವರೇ ಮುಟ್ಟಿಸತಾರೆ. ಇತ್ತಾಗ ಬಾ ಅವರು ಬಂದರು.

(ಹೆಗ್ಗಡೆ ರಣಧೀರ ಬರುವರು ; ಹಿಂದೆ ಮಾಚಣ್ಣ.)

ಹೆಗ್ಗಡೆ ಮೈಸೂರರಸರಿಗೂ ಇದಕ್ಕೂ ಸಂಬಂಧ ಇಲ್ಲ. ದ್ಯಾವಣ್ಣ ಹೆಗ್ಗಡೇ ಕೋಟೆಯು ಎಲ್ಲೆ ಇದು. ಇಲ್ಲಿ ಕಂದಾಯ ಸಂದಾಯ ನಾವು ನೋಡೋ ಮಾತು. ನಮುಗೆ ಕಂದಾಯ ಸಲಿಸೋರು ಅರಸರಿಗೆ ದೂರು ಹೇಳಿದರೆ ಅರಸರು ಅವರ ಮಾತು ಕೇಳಿ ನಿಮ್ಮನ್ನ ಇಲ್ಲಿಗೆ ಕಳುವಬಹುದೇ.

ರಣಧೀರ ಅರಸರು ಏನು ಮಾಡಬಹುದು ಏನು ಮಾಡಬಾರದು ನಾವು ಹೇಳುವವರಲ್ಲ. ನಮ್ಮನ್ನಿಲ್ಲಿ ಕಳುಹಿಸಿದಾರೆ. ಇದೇನಾಗಿದೆ ಎಂತ ನೋಡಿ ಎಂತ. ನೀವು ಒಪ್ಪಿದರೆ ಏನು ಸಂಗತಿ ಎಂತ ಕೇಳುತೇವೆ. ಆಗದು ಎಂದರೆ ಹಿಂದಕ್ಕೆ ಹೋಗಿ ಇದನ್ನ ಅರಿಕೆಮಾಡುತ್ತೇವೆ.

ಹೆಗ್ಗಡೆ ನಮ್ಮ ಕರಣೀಕರಾದರೂ ಇದ್ದರೆ ಚೆನ್ನಾಗಿತ್ತೆ. ಅವರೂ ಕಾಕನ ಕೈಲಿ ಸಿಕ್ಕಿಕೊಂಡಿದ್ದಾರೆ.

ರಣಧೀರ ನಮುಗೆ ದಾರೀಲಿ ಈ ಸುದ್ದೀನೂ ತಿಳೀತು. ನಿಮ್ಮ ಮಗನ್ನ ಕರಣೀಕರನ್ನ ಅವರು ಸೆರೆ ಹಿಡಿದಿದಾರಂತೆ.

ಹೆಗ್ಗಡೆ ನನ್ನ ಗ್ರಹಚಾರ ಎಲ್ಲಾ ಆಯಿತು.

ರಣಧೀರ ಅವರನ್ನಾದರೂ ಬಿಡಿಸಿಕೊಂಡು ಬರಬೇಕಲ್ಲ. ನೀವು ನೀವು ಹಠಮಾಡುವುದರಲ್ಲಿ ನಿಮ್ಮ ಮಗನಿಗೆ ಏನಾದರೂ ಆದರೆ ತೊಂದರೆ.

ಹೆಗ್ಗಡೆ ನಿಜ. ನಿಮ್ಮ ಇಷ್ಟದಂತೆ ಆಗಬಹುದು. ತಾವು ಮಾಡುವ ವಿಚಾರಣೆ ಮಾಡಿ. ಅರಸರಲ್ಲಿ ಆಮೇಲೆ ಅರಿಕೆ ಮಾಡಿಕೊಂಡರೆ ಆಯಿತು.

ರಣಧೀರ ಹಾಗಾದರೆ ರಾತ್ರಿ ಅವರ ಹಾಡಿಯ ಕಡೆಗೆ ಹೊರಡೋಣ. ನೀವೂ ನಮ್ಮ ಜೊತೆಗೆ ಬನ್ನಿ, ನಿಮ್ಮ ಜನಕ್ಕೆ ತಿಳಿಸಿ.

ಹೆಗ್ಗಡೆ ಆಗಬಹುದು. ಎಲಾ ಮಾಚ, ಇದು ನೋಡಿಕೊ.

ತಮ್ಮ ಅರಸರಿಗೆ ಮುಟ್ಟಿಸಬೇಕಂತ ಈ ಓಲೆ ಬಂದದೆ.

ರಣಧೀರ ಏನು ಓಲೆ (ಎಂದು ತೆಗೆದು ಓದುತ್ತಾನೆ). ಓಲೆ ಸ್ವಲ್ಪ ವಿಚಿತ್ರವಾಗಿದೆ. ಕುರುಬರ ಹಾಡೀಲಿ ಯಾರಿದಾರೆ ಈ ಓಲೆ ಬರೆಯೋಕೆ ಅರಸರಿಗೆ.

ಹೆಗ್ಗಡೆ ನಮ್ಮ ಕರಣೀಕರು ಬರೆದಿರಬಹುದು.

ಮೋನ ಹೌದು, ಹೌದು.

ರಣಧೀರ ಓಹೋ, ನಿಮ್ಮ ಕರಣೀಕರು ಬರೆದದ್ದೊ ಇದು, ಚೆನ್ನಾಗಿ ಬರೆದಿದ್ದಾರೆ.

ಹೆಗ್ಗಡೆ ಅವರು ಯಾವಾಗಲೂ ಹಾಗೆಯೆ, ಒಕ್ಕಣೆ ಗಿಕ್ಕಣೆ ಅನ್ನೋದು ಚೆನ್ನ ಬಲ್ಲಂತವರು.

ರಣಧೀರ ಹಾಗೆಂತಲೇ ಕಾಣುತದೆ. ರಾತ್ರೆ ಹೊರಡೋಣ ಕಾಕನ ಹಾಡೀಗಾಗಿ. ಏನಾಗದೇ ಇದ್ದರೂ ಕರಣೀಕರನ್ನ ಹೆಗ್ಗಡೆ ಮಕ್ಕಳನ್ನ ಬಿಡಿಸಿಕೊಂಡು ಬರೋಣ. ಏನಯ್ಯ ಶಿಂಗ?

ಶಿಂಗಾ ಆಗಬಹುದು ಪ್ರಭು.

ರಣಧೀರ ಪ್ರಭು ಅನ್ನೋದು ದೊಡ್ಡಮಾತು. ಹೀಗೆಲ್ಲ ಹೇಳಬೇಡ.

ಶಿಂಗಾ ಅಪ್ಪಣೆ ಪ್ರ........ಅಪ್ಪಣೆ, ಆಗಬಹುದು.

---

## ೯

[ಕುರುಬರ ಹಾಡಿಯಲ್ಲಿ ಚಾವಡಿಯ ಮುಂದೆ. ಮಾರನೆಯ ಬೆಳಿಗ್ಗೆ ಮೋನಿ ಮೊಲ್ಲೆ ಬರುತ್ತಾರೆ.]

ಮೋನಿ ಮೊಲ್ಲೀ, ನನ್ನ ಮೊಲ್ಲೀ, ಹಗಲೆಲ್ಲ ಅತ್ತಾತು, ಇರುಳೆಲ್ಲ ಅತ್ತಾತು. ಇನ್ನೂ ಸಾಕಾಗಲಿಲ್ಲೇ ನಿನಕ, ಅತ್ತು ಅತ್ತು?

ಮೊಲ್ಲೆ ಅತ್ತದ್ದು ಸಾಕಾಗಲಿಲ್ಲ ಮೋನಿ, ಬದುಕಿದ್ದು ಸಾಕಾತು.

ಮೋನಿ ಯಾಕೇ ನನ್ನವ್ವ, ಇಂತಾ ಮಾತಾಡತಿ? ಕಣ್ಣ ತೆರೆಯೊ ಮುನ್ನ?

ಮೊಲ್ಲೆ ತೆರೆಯುವೊಲ್ಲೆ ಮೋನಿ ನಾ ನನ ಕಣ್ಣು, ನೇಣೋ ನೀರೋ ನೋಡಿ ಕಣ್ಮುಚ್ಚೋದೆ ಚಂದ ಅನಸತದೆ.

ಮೋನಿ ಯಾಕಾಗಿ ಈ ಮಾತು? ಹೆಗ್ಗಡೆ ಮಕ್ಕಗಾಗಿ?

ಮೊಲ್ಲೆ ಹೌದು ಹೆಗ್ಗಡೆ ಮಕ್ಕಗಾಗಿ.

ಮೋನಿ ಕಾಕ ಏನಂದಾನು?

ಮೊಲ್ಲೆ ತಪ್ಪುಮಾಡಿದ ನನ್ನ ಮಗಳು ಸತ್ತರೆ ಸತ್ತಲು ಅಂದಾನು.

ಮೋನಿ ಮೋನ ಏನಂದಾನು?

ಮೊಲ್ಲೆ ಯಾಕೇನಂದಾನು?

ಮೋನಿ ನಾ ಏನಾಗಲಿ?

ಮೊಲ್ಲೆ ನೀ ನಾಕನ ಜೊತೆಗಿರುತೀಯಲ್ಲ.

ಮೋನಿ ನಾಕ ಇದ್ದಾನು ಒಸಗ್ಯಾಗಿ, ನಾನ್ಯಾಕ ಇರಲಿ? ನೀ ನೇಣೋ ನೀರೋ ನೋಡಿದರೆ ನಾನೂ ನೋಡೋದೆ. ಅಂದರೆ ಹಂಗೆ ಸತ್ತರೆ ನೆರಳಾಗಿ ತಿರಗಬೇಕು ಅಂತಾರೇ, ಆದಕಾಗಿ ಅಂಜಿಕಿ.

ಮೊಲ್ಲೆ ಹಿಂಗೆ ತುಂಬಿಕೊಂಡಿರೋಳು ನೀ ನೆರಳೇನಾದೀ ಮೋನಿ?

ಮೋನಿ ಒಡಲುಳ್ಳ ಉಸಿರಾದರೆ ಗೂಡಾಗಿರೋ ಹಕ್ಕಿ, ಒಡಲು ಉಡಿದ ಹೊತ್ತಿಗೆ ಅದು ಹಾರತಿದ್ದ ಹಂಗಾಯಿತು. ರಕ್ಕೆ

ಬರೋ ಮುನ್ನ ಗೂಡು ಬೇಡೆಂದರೆ, ಅವ್ವ ಇಲ್ಲ, ಬಾನು ಇಲ್ಲ, ಕೆಡತದೆ ಹಕ್ಕಿ ಅಂತಾರೆ.

ಮೊಲ್ಲೆ ಇದ್ದರೂ ಕೆಡೋದೆ ಆಯ್ತು. ಸತ್ತು ಕೆಡೋಣಂತೆ.

ಮೋನಿ ಇದ್ದು ಕೆಟ್ಟರೆ ಅಯ್ಯೋ ಪಾಪ ಅಂತಾರೆ. ಸತ್ತು ಕೆಟ್ಟರೆ ಅಂದಾರೆ? ಈಗ ನಾ ಮೊಲ್ಲೆ ಅಂದರೆ ನೀನು ಆ ಅಂತೀಯ. ನೆರಳಾಗಿ ಮೊಲ್ಲೆ ಅಂದನೆ ಅಂಜಿಕೊಂಡು ಓಡುತೀಯ. ಒಡಲಿದ್ದು ಹಸಿದರೆ ಉಣ್ಣಬಹುದು; ಒಡಲಿಲ್ಲದೆ ಹಸಿದರೆ ಸೊರಗೋದೆ. ಸಾವು ಅಂತನ್ನೋದು ಸೀಗೆಣಸಲ್ಲ ಮೊಲ್ಲೆ. ನನ್ನ ಮಾತು ಕೇಳು. ನಾಲ್ಕು ದಿನ ತಡಕೊ.

ಮೊಲ್ಲೆ ಹೆಗ್ಗಡೆ ಮಕ್ಕ ಹೊಂಟೋದವ್ಯಾಕ್ಕೆ ನಾ ಇರ ಒಲ್ಲಿ ಮೋನಿ. ಮೋನಿ ಮೋನಿ ಈವೊತ್ತು ಅವನ್ನ ಒಮ್ಮೆ ನೋಡಿದರಾದಾತಲ್ಲೆ!

ಮೋನಿ ಕಾಕ ಏನಂದಾನು? ಅವನ ಮನಸಾದರೂ ಹೆಂಗಿದ್ದಾತೊ?

ಮೊಲ್ಲೆ ಮೋನಿ ಮೋನಿ, ಅಕೊ ನೋಡಲ್ಲಿ ಬರತದಾನೆ, ಹೆಗ್ಗಡೆ ಮಕ್ಕ. ಅವನ್ನ ಕೇಳು, ಏನಂತಾನೆ. ನನ್ನ ನೋಡುತೀನಿ ಅಂದರೆ ಕರಿ, ನಾ ಬರತೀನಿ.

ಮೋನಿ ನೀನೇ ಇದ್ದು ಮಾತಾಡಿಸು; ಬಾರದ್ಯಾಕೆ ಮೊಲ್ಲೆ?

ಮೊಲ್ಲೆ ಇಲ್ಲ, ನೀನಾಡಿಸು, ನಾ ದಂಡೀಲೆ ಇರತೀನಿ.

(ಎಂದು ಸ್ವಲ್ಪದೂರ ಹೋಗುವಳು. ಚಿಕ್ಕಯ್ಯ ಬರುವನು.)

ಚಿಕ್ಕಯ್ಯ ಅಬ್ಬಾ ಅಬ್ಬಾ (ಎಂದು ಚಿಂತೆಯಿಂದ ಅತ್ತ ಇತ್ತ ತಿರುಗುವನು.)

ಮೋನಿ ಹೆಗ್ಗಡೆ ಮಕ್ಕಾ.

ಚಿಕ್ಕಯ್ಯ (ಬೆಚ್ಚಿ) ಯಾರದು?

ಮೋನಿ ನಾ ಮೋನಿ.

ಚಿಕ್ಕಯ್ಯ ಮೋನೀನಾ? ಏನವ್ವಾ?

ಮೋನಿ ಏನೀವೊತ್ತು ಹೊತ್ತಿಗೆ ಮುಂಚೇ ಎದ್ದಿಲ್ಲಿ ತಿರಗತಿದೀಯಾ?

ಚಿಕ್ಕಯ್ಯ ರಾತ್ರೆಲ್ಲ ನಿದ್ದೆ ಬರವೊಲ್ಲದು, ಎಂತೆಂತಾದೊ ಕನಸು. ಕರಣೀಕರ ಕುತ್ತಿಗೆ ಕೊಯ್ದಂತೆ. ನಮ್ಮಪ್ಪಾಜಿ ಏನೋ ಆದಂತೆ. ಮೊಲ್ಲೆ ಭಾವಿಗೆ ಬಿದ್ದಳು ಅಂತ. ಏನೇನೋ ಕನಸು!

ಮೋನಿ ಕರಣೀಕರು ಬಾಳಬೇಕು, ನಿಮ್ಮಪ್ಪಾಜಿ ಬದುಕಬೇಕೇ! ನನ್ನ ಮೊಲ್ಲೆ ಏನಾದರೆ ನಿನಗೇನಂತೆ?

ಚಿಕ್ಕಯ್ಯ ಮೊಲ್ಲೇನೂ ಬಾಳಬೇಕು ಬದುಕಬೇಕು ಮೋನಿ.

ಮೋನಿ ಬಾಳಬೇಕು ಬದುಕಬೇಕು ಅನ್ನೋನು ಬಾಳಿಸಿ ಬದುಕಿಸುತೀಯಾ?

ಚಿಕ್ಕಯ್ಯ ಹೆಂಗೆ ಮಾಡಲಿ ತಿಳೀದೆ?

ಮೋನಿ ಅವಳನೇ ಕೇಳು ಕರೀತೀನಿ. ಮೊಲ್ಲೆ ಬಾ ಇತ್ತ. ಬಾ ಬೇಗನೆ, ನಾಚಬ್ಯಾಡ. (ಮೊಲ್ಲೆ ಬರುವಳು) ಹೆಗ್ಗಡೆ ಮಕ್ಕ, ಇವಳನ್ನು ನೋಡು. ಮೊಲ್ಲೆ ಅಂದರೆ ಮೊಲ್ಲೆ. ಇವರವ್ವ ಹಿಂಗೇ ಇದ್ದಲು, ಕಾಡಾಗಿದ್ದು ಸತ್ತಲು. ಇವಳ ಈ ಹರೆಯಕ್ಕೆ ನೀನಿಲ್ಲಿ ಬಂದಿದೀಯಾ. ಜೊತೆಗೆ ಬರುತೇನಂತಾಳೆ; ಕರದುಕೊಂಡು ನಡಿ. ಎಲ್ಲಿ ಎತ್ತ ಎಂದರೆ ನಾ ಏನಾರ ಬೊಂಕತೀನಿ. ಹೋಗಿ ಪಾಳ್ಯ ಸೇರಿಕೊಂಡು ಕಾಕನಿಗೆ ಹೇಳಿಕಳುವು. ಕೊಂಡುಹೋದದಾಯಿತಂತಾ ಒಪ್ಪಿಕೋತಾನೆ. ಮೊಲ್ಲೆ, ಹೋಗುತೀಯೇನೆ?

(ಮೊಲ್ಲೆ ಸುಮ್ಮನಿರುವಳು.)

ಚಿಕ್ಕಯ್ಯ ಏನಂತೀ ಮೊಲ್ಲೆ?

ಮೊಲ್ಲೆ ನನಗೇನು ತೋಚದು. ನೀ ಹೆಂಗಂದರೆ ಹಂಗೆ.

ಚಿಕ್ಕಯ್ಯ ಕಾಕನ್ನ ಮೋನೀನ ಬಿಟ್ಟು ಬರೋಕಾಗತದಾ?

(ಮೊಲ್ಲೆ ಸುಮ್ಮನೆ ಇದ್ದು ಕಣ್ಣೀರು ಸುರಿಸುವಳು.)

ಬಿಡಲಾರಿ, ಅಂದರೂ ಬಿಟ್ಟೀಯ. ನೀನು ಹೆಣ್ಮಗಳು. ಅಂದರೆ ಹೇಳದೆ ಕೇಳದೆ ಹೋಗೋದು, ನಿನ್ನ ಕಳುವು ಮಾಡೋದು, ನನಗೆ ಚಂದಲ್ಲೆ.

ಮೋನಿ ಇಂಥ ಹೊತ್ತಿನಾಗ ಚಂದ ನೋಡಿದರಾದಾತ?

ಚಿಕ್ಕಯ್ಯ ನಾ ಓಡಿಹೋದೆನೆಂದರೆ ಕರಣೀಕರನ ಏನು ಮಾಡು ತಾರೊ? ಇದಕ್ಕೆ ಅನುವಾದಿ ಅಂತ ನಿನ್ನ ಏನು ಮಾಡು ತಾರೋ?

ಮೋನಿ ಕರಣೀಕ ಏನಾದರೇನು ಅವನೊಬ್ಬ ಸುಳ್ಳಾಟದ ಮನಸ.

ಚಿಕ್ಕಯ್ಯ ಯಾಕೆ ನಿನಗೇನ ಮಾಡಿದರು?

ಮೋನಿ ಮಾಡ್ಯಾನು ಈ ಮನಸ, ನಾ ಆಗಲಿ ಅಂತಂದರೆ. ನಿನ್ನ ನೋಡಲಾಕೆ ನಾನೂ ಮೊಲ್ಲೆ ಬರುತಿದ್ದರೆ ನೋಡತಾನಪ್ಪ ನಮ್ಮನೊಂದು ತಿನಗಣ್ಣ ನೋಟದಾಗೆ. ಕುರುಬರ ಹಾಡೀನ ಮುದುಕ ಕೋಟೆ ಅಂತ ತಿಳಿದನೇನೋ? ಹೋಗಲಿ ಅವನ ಮಾತೇನು. ನನತಾದರೂ ಯಾಕೆ? ನನ್ನ ಏನು ಬೇಕಾರ ಮಾಡಲಿ. ಮೊಲ್ಲೆ ಚೆಂದಾಗಿದ್ದರಾತು.

ಮೊಲ್ಲೆ ನೀನೇನಾರಾ ಆದರೆ ನಂದೆಂತ ಚಂದ? ಆದಹಂಗಾಗಲಿ ನಾವು ಓಡಿಹೋಗೋದು ಬ್ಯಾಡ.

ಮೋನಿ ಬೂಡಾಗೆ ಒಬ್ಬರಿಗೂ ಗಾಸಿ ಆಗಬಾರದು ಅಂದರೆ ನೀ ಉಣ್ಣೋದು ಯಾವ ಹರವಿನ ಉಣಿಸನ್ನ? ಹೋಗಲಿ, ಈಗಲಾರ ಹತ್ತಿಲಿ ಕುಂತಿರು. ನಾ ಇತ್ತಾಗ ನೋಡಿಕೋ ತೀನಿ. (ಎಂದು ಒಂದು ಕಡೆಗೆ ತಿರುಗಿ ಸ್ವಲ್ಪ ಮರೆಗೆ ನಿಂತು ಕೊಳ್ಳುವಳು.)

ಮೊಲ್ಲೆ ಇಲ್ಲಿ ಕುಂತುಕೊ (ಎಂದು ಚಿಕ್ಕಯ್ಯನನ್ನು ಒಂದು ಕಡೆ ಕೂರಿಸಿ ಪಕ್ಕದಲ್ಲಿ ಕುಳಿತು ಭುಜದಮೇಲೆ ತಲೆಯಿಟ್ಟು ಅವನನ್ನು ನೋಡು ತ್ತಿರುವಳು. ಅವನು ಆವಳ ಕುರುಳನ್ನು ತೀಡಿ ಗಲ್ಲವನ್ನು ಹಿಡಿದು ನೋಡುತ್ತ)

ಚಿಕ್ಕಯ್ಯ ಇದು ಎಂತಾ ಹಸುಳೆ ನೀನು ಮೊಲ್ಲೆ!

ಮೊಲ್ಲೆ ಯಾಕೆ? ಏನು ಮಾಡಿದೀ?

ಚಿಕ್ಕಯ್ಯ ನೀ ಏನೂ ತಪ್ಪು ಮಾಡೋಲ್ಲ. ಅಂತ ಎಳೀ ಮನಸು ನಿನ್ನದು. ನಮ್ಮಲ್ಲಿ ಹುಡುಗೇರು ನಿನ್ನ ವಯಸ್ಸಿಗೆ ಅದೇನೇನೊ ಆಗಿಬಿಟ್ಟಿರತಾರೆ.

ಮೊಲ್ಲೆ ಹಂಗಾರೆ ನಾ ಒಳ್ಳ್ಯೇಳು ಅಂತೀಯಾ?

ಚಿಕ್ಕಯ್ಯ ಬಾಳ ಒಳ್ಳ್ಯೇಳು.

ಮೊಲ್ಲೆ ನನ್ನ ಒಂದಿಗೆ ಕರಕೊಂಡು ಹೋಗತೀಯಾ?

ಚಿಕ್ಕಯ್ಯ ಅದೇ ಹೆಂಗಂತ ತಿಳೀಲಿಲ್ಲೇ!

ಮೊಲ್ಲೆ ನಾ ಕಾಕನ ಕೇಳತೀನಿ.

(ಮೋನಿ ಮರೆಯಿಂದ ಬರುತ್ತ)

ಮೋನಿ ಅವ್ವಯ್ಯಾ, ಇದು ಯಾರೊ ಬಂದರೆ.

(ರಣಧೀರನು ಒಂದು ಮರದ ಮರೆಯಿಂದ ಬರುವನು. ಚಿಕ್ಕಯ್ಯ ಎದ್ದು ನಿಲ್ಲುವನು.)

ರಣಧೀರ (ಮಾಚ ತಮ್ಮಗೌಡ ಬರುವರು) ಯಾರು ಇವರು? (ಎಂದು ಬೇರೆಯಾಗಿ ಕೇಳುವನು.)

ತಮ್ಮ (ಅವನಿಗೆ) ಈ ಹೆಣ್ಣು ನಮ್ಮ ಕಾಕನ ಮಗಳು. ಇವರು ಹೆಗ್ಗಡೆ ಮಕ್ಕ.

ರಣಧೀರ ಇವರ ರೀತಿ ನೋಡಿದರೆ ಒಂದು ಕಥೆ ಇದ್ದ ಹಾಗಿದೆಯಲ್ಲಾ. ಇವನನ್ನ ಸ್ವಲ್ಪ ಆಡಿಸೋಣ. (ಎಂದು ಇವರ ಹತ್ತಿರ ಬಂದು ಚಿಕ್ಕಯ್ಯನಿಗೆ) ಅಯ್ಯಾ ನೀನು ಯಾರು?

ಚಿಕ್ಕಯ್ಯ ನಾ ಚಿಕ್ಕಯ್ಯ. ಹೆಗ್ಗಡೆ ದೇವಣ್ಣನವರ ಮಗ.

(ಈ ವೇಳೆಗೆ ಶಿಂಗಾಜಟ್ಟಿ ಬಂದು ಅರಸನ ಹಿಂದೆ ನಿಲ್ಲುವನು.)

ರಣಧೀರ ಇಲ್ಲಿ ಸೆರೆಯಾಗಿರೋನೋ?

ಚಿಕ್ಕಯ್ಯ ಹೌದು.

ರಣಧೀರ ಈ ಹೆಣ್ಣು ಕಾಕನ ಮಗಳು?

ಚಿಕ್ಕಯ್ಯ ಹೌದು.

ರಣಧೀರ ಇದೇನು ಊರಿಗೆ ಮುಂಚೆ ಎದ್ದು ಇವಳನ್ನು ಇಲ್ಲಿ ಕೂರಿಸಿಕೊಂಡು ಸರಸ ಆಡುತಾ ಇದೀಯ ?

ಚಿಕ್ಕಯ್ಯ ಈ ಮಾತು ಕೇಳೋಕೆ ನೀವು ಯಾರು ?

ರಣಧೀರ ಈ ಮಾತು ಯಾರು ಬೇಕಾದರೂ ಕೇಳಬಹುದು.

ಚಿಕ್ಕಯ್ಯ ಯಾರು ಬೇಕಾದರೂ ಕೇಳಬಹುದು. ಆದರೆ ಎಲ್ಲಾರಿಗೂ ನಾ ಹೇಳಬೇಕಾಗಿಲ್ಲ.

ರಣಧೀರ ಯಾರಿಗಾದರೆ ಹೇಳಬೇಕು? ನಮ್ಮನ್ನ ಮೈಸೂರರಸರು ಕಳುಹಿಸಿದ್ದಾರೆ.

ಚಿಕ್ಕಯ್ಯ ಇರಬಹುದು, ಇರಬಹುದು. ಈ ಮಾತು ಕೇಳು ಅಂತ ಅವರು ನಿಮಗೆ ಹೇಳಿಲ್ಲ.

ರಣಧೀರ ತಮ್ಮಗೌಡ, ಹೆಗ್ಗಡೇನ ಕರಿ. ಮಗ ಮಾಡುತಿರೋ ಕೆಲಸ ನೋಡಲಿ.

(ತಮ್ಮಗೌಡ ಒಳಗೆ ಹೋಗಿ ಹೆಗ್ಗಡೆಯನ್ನು ಕರೆತರುವನು. ಚಿಕ್ಕಯ್ಯನು ಮೊಲ್ಲೆಯನ್ನು ಬಿಟ್ಟು ಸ್ವಲ್ಪ ದೂರ ಸರಿದು ತಂದೆ ಬಂದಾಗ)

ಚಿಕ್ಕಯ್ಯ ಅಪ್ಪಾಜಿ ನೀವಿಲ್ಲಿ ಬಂದಿರಾ? (ಎಂದು ಹೋಗಿ ಅವನ ಕಾಲು ಮುಟ್ಟಿ ಕೈಹಿಡಿದು ಕಣ್ಣಿಗೆ ಒತ್ತಿಕೊಳ್ಳುವನು.)

ಹೆಗ್ಗಡೆ ಅಪ್ಪಾ ಚಂದಾಗಿದೀಯಾ, ಇವರ ದಯದಿಂದ ನಾ ನಿನ್ನ ನೋಡಬಹುದಾಯಿತು. (ಎಂದು ರಣಧೀರನನ್ನು ತೋರಿಸುವನು.)

ಚಿಕ್ಕಯ್ಯ ಕೈಮುಗಿದೆ, ನನ್ನೊಡೆಯ.

ಹೆಗ್ಗಡೆ ಕರಣೀಕರು ಎಲ್ಲಿ ?

ಚಿಕ್ಕಯ್ಯ ಗುಡಲಲ್ಲಿದ್ದಾರೆ.

ರಣಧೀರ ಈಗಲಾದರೂ ನನಗೆ ಉತ್ತರ ಹೇಳುತೀಯಾ ?

ಚಿಕ್ಕಯ್ಯ ಅದು ಇದು ಬೇರೆ ಮಾತು.

ರಣಧೀರ — ಗೌಡ, ಕಾಕನಿಗೆ ಹೇಳಿಕಳುಹು, ಅರಸರ ಕಡೆಯವರು ಬಂದಿದಾರೆ ಅಂತ.

ಗೌಡ — ಅಪ್ಪಣೆ (ಎಂದು ಮೋನನನ್ನು ಕರೆದು ಹೇಳಿಕಳುಹಿಸುವನು.)

ರಣಧೀರ — ಏನು ಹೆಗ್ಗಡೆಗಳೆ, ನಿಮ್ಮಾ ಕಾಕನಾ ಜಗಳ ಹರಿಸೋಣ ಅಂತ ನಾವು ಬಂದರೆ, ನಿಮ್ಮ ಮಗ ಕಾಕನ ಮಗಳನ್ನ ಕಳವು ಮಾಡೋದರಲ್ಲಿದಾನಲ್ಲ!

ಚಿಕ್ಕಯ್ಯ — ಏನಿದು ಒಡೆಯಾ, ಕಳವು ಗಿಳವು ಅಂತ ತುಟಿಮೀರಿದ ಮಾತನ್ನೇ ಆಡುತಾ ಇದೀರ?

ರಣಧೀರ — ತುಟಿಮೀರಿದ ಮಾತಾಡುತಿರೋದು ನೀವು. ನಾವು ಅರಸರ ಕಡೆ ಮನುಷ್ಯರು, ಇದ ಹೇಳಬಹುದು.

ಚಿಕ್ಕಯ್ಯ — ಈ ಹೆಣ್ಣು ಕಳವು ಮಾಡಿದ್ಯೇನೋ ಅಂತ ನಮ್ಮಪ್ಪಾಜಿ ಹೇಳಬಹುದು. ಅವಳಪ್ಪ ಕಾಕ ಹೇಳಬಹುದು. ತುದೀ ಮೀರಿದರೆ ಮೈಸೂರಿನ ಅರಸರಾದರೂ ಹೇಳಬಹುದೇನೊ? ಅಪ್ಪ ಅಪ್ಪಾಜಿ ಹೇಳಬಹುದು, ನಾಡರಸರು ಹೇಳಬಹುದು, ಅನ್ನೋ ಮಾತನ್ನ ದಾರೀಲಿ ಹೋಗತಾ ಹೋಗತಾ ದೊಡ್ಡವರನ್ನೋರೆಲ್ಲ ಹೇಳಬಾರದು.

ರಣಧೀರ — ಹಾಗೇ ಆಗಲಿ ಚಿಕ್ಕ ಹೆಗ್ಗಡೆಗಳೆ. ಹೆಣ್ಣಿನಪ್ಪ, ನಿಮ್ಮಪ್ಪಾಜಿ, ಇವರೇ ಹೇಳಲಿ. ಏನು ಹೆಗ್ಗಡೆಗಳೆ?

ಹೆಗ್ಗಡೆ — ಆದರ ಮಾತು ಆಮೇಲೆ ಆಡಬಹುದು. ಈಗ ಇವರ ಆ ಕಾಕನ್ನ ಕರಸಿ ತಾವು ಬಂದಿರೋ ಮಾತು ನೋಡಿದರೆ ಇದ್ದೀತು.

ರಣಧೀರ — ಓಹೋ ನೀವೂ ಹೀಗೇ ಹೇಳುತೀರೋ. ಒಳ್ಳೇದು ಆ ಹೆಣ್ಣಿನ ಅಪ್ಪ ಬರಲಿ.

(ಕಾಚ ಬರುತ್ತಾನೆ. ಹಿಂದೆ ಗೌಡ, ಕರಣೀಕ.)

ಕಾಚ — (ತಮ್ಮಗೌಡನಿಗೆ) ಅರಸರು ಬರೋಕಾಗಲ್ಲ ಅಂದರೆ? ಹೋಗಲಿ ಕಡೇಕೆ ಯಾರನಾದರೂ ಕಳುಪಿದರಲ್ಲ. ಒಳಿತಾತು. ನೀ

ಬರಲೂ ಇಲ್ಲ ಸುದ್ದೀನೂ ಇಲ್ಲ, ಅಂತ ನಾ ನೆನ್ನೆ ಒಂದು ಓಲೆ ಬರದು ಕಳುವಿದೆನೇ.

ತಮ್ಮ ಅದೂ ದಾರೀಲಿ ಸಂದತು. ಅವರ ಮುಂದಿಗೆ ಮುಟ್ಟಿಸಿವಿನಿ.

(ರಣಧೀರನು ಮುಖವನ್ನು ಸ್ವಲ್ಪ ಮರೆಸಿಕೊಳ್ಳುವನು.)

ಕಾಚ ಸರ್ಯೆ. (ಎಂದು ಮುಂದೆ ಬಂದು ಶಿಂಗಾಜಟ್ಟಿಯನ್ನು ನೋಡಿ) ಓಹೊ, ನಮ್ಮ ಜಟ್ಟಿಗಳು. ಕೈಮುಗಿದಿ, ಜಟ್ಟಿ ದಣಿಗಳೆ. ಯಾರು ಬಂದಿರೋರು ?

ಶಿಂಗಾ ನೋಡು (ಎಂದು ರಣಧೀರನನ್ನು ತೋರಿಸುವನು.)

ಕಾಚ (ಹತ್ತಿರ ಬಂದು ರಾಜನನ್ನು ಗುರುತಿಸಿ ಬೆಚ್ಚಿ) ಅರಸರ ಕಡಿಂದ ಯಾರೋ ಬಂದಿದಾರೆ ಅಂದರು. ನನ್ನ ದೇವರು ಬಂದರು ಅಂತ ಹೇಳಲಿಲ್ಲೇ ! ನನ್ನೊಡೆಯಾ, ನನ್ನ ಕಾಕ, ಬಂದಿರಾ, ನನ್ನ ಬದುಕಿಸೋಕ? (ಎಂದು ರಣಧೀರನ ಕಾಲಿಗೆ ಬಿದ್ದು ಹೊರಳಾಡುವನು.)

ರಣಧೀರ ಕಾಚಾ ಕಾಚಾ, ಏಳು. ನೀನೇ ಏನೋ ಕಾಕ? ನಿನ್ನ ತಮ್ಮಗೌಡ ಹೇಳಿದಾಗ ಹಾಗಂತಲೇ ಅಂದುಕೊಂಡೆವು. ಆದರೂ ಹೌದೋ ಅಲ್ಲೋ ಅಂತ ನೋಡಲಿಕಾಗಿ ಹೀಗೆ ಬಂದೆವು. ಏಳು ನಿಲ್ಲು. (ಎಂದು ಮುಟ್ಟಿ ಹಿಡಿದು ಎಬ್ಬಿಸುವನು.)

ಕಾಚ ಏನ, ತಮ್ಮಗೌಡ, ಅರಸರು ಬಂದದಾರೆ ಅನ್ನದೀರ, ಯಾರೋ ಬಂದರು ಅಂದ್ಯೆ? ದೇವರ ಪಾದ ನಮ್ಮ ಹಾಡೀಗೆ ಬೆಳದಾ ಈ ಹೊತ್ತು, ಬಾನಲ್ಲಿ ಗುಡಿ ಇಲ್ಲ, ಚಾವಡಿ ಮುಂದೆ ತೋರಣ ಇಲ್ಲ. ಹಿಂಗಾತೆ ! ಹಿಂಗಾತೆ! ಗೌಡ, ಬಾ ಇತ್ತ. ಅರಸರೇ ಬಂದದಾರೆ ಕಾಲಿಗೆ ಬೀಳು. ನಿನ್ನ ಮುಂದೀ ಕಷ್ಟ ಹರೀತನ್ನು ಇನ್ನು. ಕಾಲಿಗೆ ಬಿದ್ದು ಗುಡಿ ತೋರಣ ಕಟ್ಟು, ಗುಡಿ ತೋರಣ ಕಟ್ಟು. (ಗೌಡನು ರಾಜನಿಗೆ ಅಡ್ಡಬಿದ್ದು ಹೋಗುವನು.) ಕಾಚನ ಮಾತ ಕೇಳಿ ನೀವು ಬಂದೇ ಬಂದಿರಾ ನನ್ನೊಡೆಯಾ !

ಹೆಗ್ಗಡೆ (ಈ ವೇಳೆಗೆ ಇವನು ರಾಜನೆನ್ನುವುದನ್ನು ತಿಳಿದು) ಮಹಾಪ್ರಭು ಕೈಮುಗಿದೆ (ಎಂದು ಬಾಗಿ ನಮಸ್ಕಾರ ಮಾಡುವನು. ಎಲ್ಲರೂ ಹಾಗೆಯೇ ಅರಸನಿಗೆ ನಮಸ್ಕಾರ ಮಾಡುವರು.)

ರಣಧೀರ (ಕಾಚನಿಗೆ) ತಮ್ಮಗೌಡ ನಿನ್ನ ಹೆಸರು ಹೇಳಲಿಲ್ಲ. ಇಲ್ಲ ದಿದ್ದರೆ ನಾವು ಅಂದೇ ಬಂದಿರಬೇಕು. ನೀನು ನಮ್ಮ ಜೀವ ಉಳಿಸಿದೋನು ಕಾಚ, ಅದ ನಾವು ಮರೆಯುವಂತಿಲ್ಲ.

ಕಾಚ ದೇವರು ಉಳಿಸಿದನಾತು ದೇವರ ಜೀವಾನ, ನಾಡಿನ ತಾತೀನ, ಉಳಿಸಬಹುದು ಏನ ಈ ಹುಳುವಂತ ಮನುಸ?

ರಣಧೀರ ನೀವು ಬಲ್ಲಿರಾ ಹೆಗ್ಗಡೆಗಳೆ, ಇವ ನಮ್ಮ ಕಾದದ್ದನ್ನ?

ಹೆಗ್ಗಡೆ ಮಹಾಸ್ವಾಮಿ, ಅಪ್ಪಣೆಯಾಗಬೇಕು.

ರಣಧೀರ ನಾಗ ಎಂತ ನಮ್ಮ ಆನೆ. ಆದರ ಮೇಲೆ ಒಂದು ದಿನ ಕೂತಿರಬೇಕಾದರೆ ಆದಕ್ಕೆ ಏನೋ ಹುಚ್ಚು ತಿರುಗಿತು. ಅದು ಓಡೋಕೆ ಮೊದಲುಮಾಡಿತು. ಮಾವುತ ಏನೇನೋ ಮಾಡಿದ. ಅದು ನಿಲ್ಲಲಿಲ್ಲ. ಕಾಚ ಅಲ್ಲೆಲ್ಲೋ ಇದ್ದ ವನು ನೋಡಿದ. ಆನೆ ಎದುರಿಗೆ ಬಂದ. ಅದೇನೋ ಒಂದು ಸದ್ದು ಮಾಡುತಾನೆ ಸಿಂಹ ಗರ್ಜಿಸಿದಹಾಗೆ, ಆ ಸದ್ದು ಮಾಡಿದ. ಹುಚ್ಚು ಹಿಡಿದು ಓಡುತ್ತಿದ್ದ ಆನೆ ತಟ್ಟನೆ ನಿಂತಿತು. ಇವ ಹತ್ತಿರ ಬಂದು ಆ ಶಬ್ದಮಾಡುತಾ ಮಾಡುತಾಲೇ ಅದರ ಪಕ್ಕಗೆ ಕೈಯಿಟ್ಟು ಹಸ್ತಾನ ನಮ್ಮ ಕಾಲಿಗೆ ಮುಟ್ಟಲು ಮಾಡಿದ. ಆದರ ಮೇಲೆ ಅಡಿಯಿಟ್ಟು ನಾವು ಕೆಳಕ್ಕೆ ದುಮುಕಿದೆವು. ಆ ವೇಳೆಗೆ ನಾಗನ ಕಾಲಿಗೆ ತೊಡರುಹಾಕಿದರು, ನಿಲ್ಲಿಸಿದರು. ಕಾಚ ಓಡಿ ಬಂದು ಆ ಗರ್ಜನೆಮಾಡಿ ನಿಲ್ಲಿಸದೆ ಇದ್ದಿದ್ದರೆ ನಾವು ಈ ದಿವಸ ಇಲ್ಲಿ ಮಾತನಾಡುತ್ತ ಇರುತ್ತಿರಲಿಲ್ಲ.

ಕರಣೀಕ ಕಾಚ ಅಂದು ಮಾಡಿದ ಸಾಹಸದಿಂದ ಇಂದು ನಮಗೆ ಮಹಾಸ್ವಾಮಿಯವರ ಸಂದರ್ಶನದ ಪುಣ್ಯ ಲಭಿಸಿತು.

ರಣಧೀರ ತಾವು ಕರಣೀಕರೊ ?

ಕರಣೀಕ ಹೌದು ಮಹಾಪ್ರಭು.

ರಣಧೀರ ನೀವು ಕಾಚನಿಗೆ ನಿನ್ನೆ ಒಂದು ಓಲೆ ಬರೆದುಕೊಟ್ಟಿರಂತೆ.

ಕರಣೀಕ ಹೌದು ಮಹಾಪ್ರಭು.

ರಣಧೀರ ಇಲ್ಲಿ ರಾಯಸದವರು ಯಾರೂ ಇಲ್ಲ. ಅದನ್ನು ಸ್ವಲ್ಪ ಓದಿ ಹೇಳಬೇಕು.

ಕರಣೀಕ ಮಹಾಪ್ರಭು. (ಎಂದು ಹಿಂದು ಮುಂದು ನೋಡುವನು.)

ರಣಧೀರ (ಅವನ ಕೈಗೆ ಓಲೆಯನ್ನು ಕೊಟ್ಟು) ಓದಿ; ಎಲ್ಲರೂ ಕೇಳಲಿ; ಒಕ್ಕಣೆ ಮುಂತಾದ್ದು ಹೇಗಿದೆ.

ಕರಣೀಕ ಅಪ್ಪಣೆಯಾದರೆ ಪ್ರಭುಗಳು ಸ್ವಲ್ಪ ವಿಶ್ರಮಿಸಿಕೊಂಡ ಮೇಲೆ ಓದಿ ಹೇಳುತ್ತೇನೆ.

ರಣಧೀರ ನಾಚಿಕೊಳ್ಳಬೇಡಿ, ಕರಣೀಕರೆ, ಓದಿ ಹೇಳಿ.

ಕರಣೀಕ (ಓದಿ ಹೇಳುತ್ತಾನೆ.)

"ಸ್ವಸ್ತಿ ಶ್ರೀಮನ್ಮಹಿಸೂರ ನಾಡರಸರು ಮಹಾರಾಜ ಪ್ರಭು ರಣಧೀರ ಕಂಠೀರವ ನರಸರಾಜ ಒಡೆಯರ ದಿವ್ಯ ಪಾದಪದ್ಮಗಳಲ್ಲಿ ಅಡಿಯಾಳು ಕಾಕನಕೋಟೆ ಕುರುಬರ ಹಾಡಿಯ ಕಾಕ ಇನ್ನೊಂದು ಹೆಸರು ಕಾಚ ಮಾಡುವ ಶಿರಸಾಷ್ಟಾಂಗ ಪ್ರಣಾಮಪೂರ್ವಕ ವಿಜ್ಞಪ್ತಿ. ಅದಾಗಿ,

ಈಗ ಎಂಟು ದಿವಸದ ಹಿಂದೆ ಮಹಾಸ್ವಾಮಿ ಇಲ್ಲಿಗೆ ದಯಮಾಡಿಸಿ ನಮಗೂ ನಮ್ಮ ಹೆಗ್ಗಡೆಗಳಿಗೂ ಉಂಟಾಗಿರುವ ವಿವಾದವನ್ನು ಪರಿಹರಿಸಬೇಕೆಂದು ಬೇಡಿ ಒಬ್ಬ ಮನುಷ್ಯನನ್ನು ಕಳುಹಿಸಿಕೊಟ್ಟಿದ್ದೆ. ಈಚೆಗೆ ಈ ವಿವಾದ ನಮ್ಮ ಎರಡು ಪಕ್ಷದವರಿಗೂ ಸಮ್ಮತವಾಗುವಂತೆ ನಮ್ಮ ನಮ್ಮಲ್ಲೇ ವ್ಯವಸ್ಥೆಯಾಗಿದೆ. ಮಹಾಸ್ವಾಮಿಯವರು ಈ ಬಗ್ಯಾಗಿ ಇಲ್ಲಿಗೆ ಬರಕೆಲಸವಿಲ್ಲ. ಬರಬೇಕೆಂದು ಬೇಡಿ ಬಳಿಯಟ್ಟಿದ್ದನ್ನು ಮನ್ನಿಸಿ ಅಡಿಯಾಳನ್ನು ಉದ್ಧಾರ ಮಾಡ

ಬೇಕು. ಪಾದ ಈ ಕಡೆ ಬೆಳೆಯಬೇಕಾದ ಕಾರಣ ಲೇಶ ವಾದರೂ ಇಲ್ಲವೆಂದು ಮತ್ತೆ ವಿನಯಪೂರ್ವಕವಾಗಿ ಬಿನ್ನವಿಸುತ್ತೇನೆ. ಇಂತೀ ಶಿರಸಾಷ್ಟಾಂಗ ಪ್ರಣಾಮಪೂರ್ವಕ ವಿಜ್ಞಾಪ್ತಿ."

(ಕಾಚನು ಕರಣೀಕನನ್ನು ಆಶ್ಚರ್ಯದಿಂದ ನೋಡುತ್ತಾನೆ.)

ರಣಧೀರ ನೀ ಬೇಡ ಅಂದರೂ ನಾವು ಬಂದಹಾಗಾಯಿತು, ಕಾಕ.

ಕಾಚ ನಾ ಬೇಡ ಅಂತ ಬರೀರಿ ಅನಲಿಲ್ಲ. ನಮ್ಮ ಕರಣೀಕರು ಎಂತ ಆವುಟ ಮಾಡಿದ್ದಾರೆ!

ರಣಧೀರ ಏನು ಕರಣೀಕರೆ, ಅವನೊಂದು ಹೇಳಿದರೆ ನೀವೊಂದು ಬರೆದಿರಾ?

ಕರಣೀಕ ಮಹಾಸ್ವಾಮಿ, ಏನೋ ಒಂದೆರಡು ಮಾತು ಬೇರೆ ಬರೆದೇನಿಜ. ಹೆಗ್ಗಡೇ ಕಾಕನ ಜಗಳಕ್ಕೆ ಅರಸರು ಯಾಕೆ ಇಷ್ಟು ದೂರ ಬರಬೇಕು ಅಂತ ಹಾಗೆ ಬರೆದೆ.

ಗೌಡ ಕರಣೀಕರು ನಿನ್ನೆ ಕಳುವೋ ಮುಂದೆ ಕಾಗದ ಓದಿ ಹೇಳಿದಾಗ, ಬಂದೇ ಬರಬೇಕು, ಬರದಿದ್ದರಾಗೋಲ್ಲ, ಅಂತ ಬರದಿವ್ನಿ ಅಂತ ಓದಿದರೆ!

ರಣಧೀರ ಹಾಗೆ ಓದಿದರೇನು?

ಶಿಂಗ ಒಂದಿರುತಾ ಒಂದೋದನ್ನ ಕರಣೀಕರಿಗೆ ಹೇಳಿಕೊಡಬೇಕೆ?

ಕರಣೀಕ ಮಹಾಸ್ವಾಮಿ, ಮೂರು ದಿನಕ್ಕೆ ಎಂತಿದ್ದರೂ ನಾವು ಪಾಳ್ಯಕ್ಕೆ ಹೋಗೋದು ಅಂತಾಯಿತು. ಇಲ್ಲಿ ಸಿಕ್ಕಿ ನರಳುತ ಚಿಕ್ಕಯ್ಯ ಬೇರೆ ಸೆರೆಯಾಗಿರಬೇಕಾದರೆ, ಬಿಡಿಸಿಕೊಂಡು ಹೋಗಿ ಆಮೇಲೆ ಮಾತಾಡೋಣ ಅನ್ನೋದಕ್ಕಾಗಿ ಹೀಗೆ ಮಾಡಿದ್ದುಂಟು ಮಹಾಸ್ವಾಮಿ. ಹೆಗ್ಗಡೆಗಳ ಮನೆ ಉಳಿಸೋಕೆ ಒಂದು ಸುಳ್ಳು ಹೇಳದಹಾಗೆ ನಾನು ಸತ್ಯದ ವ್ರತ ಹಿಡಿದಿರೋದು ಏನು ಮಹಾಸ್ವಾಮಿ?

ನನಗೆ ಅನ್ನ ಬಟ್ಟೆ ಇಟ್ಟವರು ಬದುಕಲಿ, ನಾನು ಸುಳ್ಳ ನಾದರೆ ಆದೆ, ಅಂದೆ. ಇಷ್ಟು ಮಹಾಸ್ವಾಮಿ ಆದದ್ದು.

ಚಿಕ್ಕಯ್ಯ  ಕರಣೀಕರು ದಿಟವಂತರು. ಈ ಕಾಗದದ ಮಾತು ನಾ ಕಾಣೆ. ಇಲ್ಲಿ ನನ್ನ ಇವರನ್ನ ಸೆರೆತಂದಾಗ ನೀವೇನಾರ ಓಡಿಹೋದರೆ ಹೆಗ್ಗಡೆ ಮಗನ್ನ ಕೊಂದುಬಿಡುತೇವಿ ಅಂದರು. ನೀವು ಓಡಿಹೋಗಿ ಬದುಕಿಕೊಳ್ಳಿ, ನನ್ನ ಇಷ ರೇನೂ ಮಾಡೋಲ್ಲ, ಹಂಗೇನಾದರೂ ಮಾಡಿದರೆ ನೋಡಿ ಕೊಳ್ಳೋಣ, ಅಂತ ನಾನು ಹೇಳಿದೆ. ಇವರು ಹೋಗೊಲ್ಲ ಅಂದರು. ತಾವು ಓಡಿಹೋಗಿ ನನಗೇನಾದರೂ ಆದರೆ ತಮ್ಮ ಜನ್ಮ ವ್ಯರ್ಥ ಅಂದರು.

ಶಿಂಗ  ಹಾಗಾದರೆ ಕರಣೀಕರು ಬರೇ ಸುಳ್ಳಲ್ಲ.

ಕರಣೀಕ  ಅರಸರ ಹಿಂದೆ ಕಾವಲಾದೋರು ನೀವು ಬರೇ ಸತ್ಯವಂತ ರಾದೀರಿ ನಾಯಕರೆ ಜೋಕೆ. ಕಷ್ಟಕಾಲದಲ್ಲಿ ಒಂದಲ್ಲ ಹತ್ತು ಸುಳ್ಳು ಹೇಳಿ ಅವರನ್ನು ಉಳಿಸಿಕೊಳ್ಳಿ.

(ಗೌಡನು ಎರಡು ಮಕ್ಕರಿಯಲ್ಲಿ ಹೂವು ಹಣ್ಣನ್ನು ತರುವನು.)

ಕಾಚ  ಹೋಗು, ಒಂದು ಮಂಕರಿ ಅವರ ಕಾಲಿಗಿಟ್ಟು ಬಾ. (ಗೌಡನು ಹಾಗೆ ಮಾಡುವನು.) ಮಹಾಸ್ವಾಮಿ, ತಾವು ಬಂದದ್ದು ದೇವರು ಬಂದಹಂಗಾಯಿತು. ಬಂದಾರು ಅಂತ ಒಂದು ವಾರ ಹಣ್ಣು ಹೂವು ಇಟ್ಟಿದ್ದಿವಿ, ಬರಲಿಲ್ಲ. ಇಂದು ಬರೋದು ತಿಳೀಲ್ಲ. ಹಿಂಗೆ ಬರುಗೈಯಾಗಿದೀವಿ. ಹೂವಿಲ್ಲ ಹಣ್ಣಿಲ್ಲ, ಎಲವ್ವಾ ಮೊಲ್ಲೆ ಬಾ ಇತ್ತ (ಮೊಲ್ಲೆ ಇವನ ಹತ್ತಿರ ಬರುವಳು.) ಇದೋ ಇದು ಒಂದು ನಂದು ಅಂತ ಅದೆ. ಇದನ್ನ ಒಪ್ಪಿಸಿಕೋಬೇಕು. (ಎಂದು ಮೊಲ್ಲೆ ಯನ್ನು ದೊರೆಯ ಕಾಲಿನ ಮೇಲೆ ಹಾಕುವನು. ಮೊಲ್ಲೆ ಎದ್ದು ಹಿಂದಕ್ಕೆ ಬಂದು ಇವನನ್ನು ಹಿಡಿದುಕೊಂಡು)

ಮೊಲ್ಲೆ  ಅಪ್ಪಾಜಿ ನಾ ಒಲ್ಲಿ, ನಾ ಒಲ್ಲಿ, ನಾ ಒಲ್ಲಿ.

ಕಾಚ ಯಾಕಲೇ ಮಕ್ಕೆ? ಅರಸರ ಕಾಲು ಹಿಡಿಯೋಕೆ ಒಲ್ಲಿ ಒಲ್ಲಿ ಅಂತಿ ?

ಮೋನಿ ಅರಸರ ಕಾಲಲ್ಲ. ಹೆಗ್ಗಡೆ ಮಕ್ಕನ ಕಾಲಹಿಡಿ ಅನ್ನು.

ಕಾಚ ಯಾತರದ ಇವಳ ಮಾತು? ಕೂಡಾಳಿ ಹೆಣ್ಣಿನದು ?

ರಣಧೀರ ತಡಿ, ಕಾಚ. ಆತುರ ಪಡಬೇಡ. ಸ್ವಲ್ಪ ತಡೆದುಕೊ. ನಾವು ಬೆಳಗಾಗ ಇತ್ತ ಬಂದಾಗ ಇವರು ಇಲ್ಲಿ ಕೂತಿದ್ದರು. ನೋಡಿದೆವು. ಈ ಮಗು ಹೆಗ್ಗಡೆ ಮಗನನ್ನ ಮದುವೆಯಾಗೋಕೆ ಒಪ್ಪುತಾಳಂತ ಕಾಣುತ್ತದೆ. ಈ ಮದುವೆಯಾಗೋದಾದರೆ ನಮಗೆ ಬಹಳ ಸಂತೋಷ. ನಿಮಗೆ ಇದು ಇಷ್ಟವೆ ಹೆಗ್ಗಡೆಗಳೆ ?

ಹೆಗ್ಗಡೆ ಕುಲದವರು ಒಪ್ಪಬೇಕೆ? ಏನು ಕರಣೀಕರೆ ?

ಕರಣೀಕ ಇಂಥ ಸಂಬಂಧ ಆದದ್ದು ಹಿಂದೆ ಉಂಟು ಮಹಾಸ್ವಾಮಿ. ಇಬ್ಬರೂ ಒಂದೇ ಕುಲ. ಇವರು ಊರುಗಳಲ್ಲಿದ್ದೂ, ಇವರು ಕಾಡುಗಳಲ್ಲಿದ್ದೂ ಬೇರೆಬೇರೆ ಅನ್ನೋಹಾಗೆ ನಡೆದುಕೊಳ್ಳುತಾರೆ. ಮಹಾಸ್ವಾಮಿ ಆಗಬೇಕು ಅಂದರೆ ಸಂಬಂಧ ಆಗಬಹುದು.

ರಣಧೀರ ಏನು ಕಾಚ ?

ಕಾಚ ನಾ ಬೇರೆ ಏನೂ ಕೊಡಲ್ಲ, ಮಹಾಸ್ವಾಮಿಗೆ.

ರಣಧೀರ ನೀ ಒಂದು ಕಾಲದಲ್ಲಿ ನಮಗೆ ಜೀವಕೊಟ್ಟದ್ದು ಸಾಕು. ಇನ್ನೇನೂ ಬೇಡ. ಈ ಮಗು ನಮ್ಮ ಮಗಳಹಾಗೆ. ಹೆಗ್ಗಡೆ ಮಗನಿಗೆ ಕೊಟ್ಟು ಮದುವೆಮಾಡೋಣ. ನಿಮ್ಮ ನಿಮ್ಮ ವಿವಾದವೂ ಇದರಿಂದ ತೀರಿತು.

ಕಾಚ ಅಪ್ಪಣೆ ಮಹಾಸ್ವಾಮಿ.

ಮೋನಿ ಮೊಲ್ಲೀ, ನನ್ನ ಮೊಲ್ಲೀ (ಎಂದು ಬಂದು ಅವಳನ್ನು ಸೆಳೆದು ಅಪ್ಪಿಕೊಳ್ಳುವಳು).

ಶಿಂಗಾ ಎಲ್ಲರನೂ ಕೇಳಿ ಆಯಿತು, ಹುಡುಗನ್ನ ಹುಡುಗೀನ್ನೇ ಕೇಳಲಿಲ್ಲ.

ರಣಧೀರ ಏನವ್ವಾ ಮೊಲ್ಲೆ, ನೀನು ಇವರನ್ನ ಮದುವೆ ಆದೀಯಾ? (ಅವಳು ಏನೂ ಹೇಳುವುದಿಲ್ಲ, ನಗುತ್ತ ತಲೆಬಾಗಿ ನಿಲ್ಲುವಳು.) ಇದು ನೋಡು, ಶಿಂಗಾ, ಹೆಣ್ಣೆಲ್ಲ ಹೀಗೆಯೇ. ಅಕೊ ನೋಡು, ಹಾಗೆ ನಿಂತರೆ ಆಗುತೇನೆ ಅಂತ ಅರ್ಥ.

ಶಿಂಗಾ ಮಹಾಸ್ವಾಮಿಯ ಅನುಭವಕ್ಕೆ ತಿಳಿಯದ ವಿಚಾರವೆ?

ರಣಧೀರ (ನಕ್ಕು) ನಮ್ಮ ಮಾನ ಕಳೆಯುತೀಯೇನೋ ಎಲ್ಲರೆದುರಿಗೆ? (ಎಂದು ಚಿಕ್ಕಯ್ಯನಿಗೆ) ನೀವು ಈ ಹುಡುಗಿಯನ್ನ ಮದುವೆಯಾಗುತ್ತೀರಾಯ್ಯ?

ಚಿಕ್ಕಯ್ಯ ಅಪ್ಪಣೆ, ಮಹಾಸ್ವಾಮಿ.

ರಣಧೀರ ನೀವು ಯಾರು ಕೇಳೋಕೆ ಅಂತ ಆಗ ಕೇಳಿದಹಾಗೆ ಕೇಳುವುದಿಲ್ಲವಲ್ಲ?

ಚಿಕ್ಕಯ್ಯ ಅರಸರಂದಿದ್ದರೆ ಆಗಲೂ ಕೇಳುತಿರಲಿಲ್ಲ, ಮಹಾಸ್ವಾಮಿ.

ರಣಧೀರ ಸರಿಯಾಗಿ ಮಾತನಾಡತಾರೆ ನಮ್ಮ ಹೆಗ್ಗಡೇ ಮಕ್ಕಳು. ಹೆಗ್ಗಡೆಗಳೆ, ಈ ಮದುವೆ ನಾಳೆ ಇಲ್ಲಿ ಆಗಲಿ. ಇಲ್ಲಿಂದ ಹೋಗಿ ನಿಮ್ಮೂರಲ್ಲಿ ವಿಜೃಂಭಣೆಯಿಂದ ನಡೆಸಿ. ಈ ಹಾಡಿಗಳ ಸೀಮೆ ಇನ್ನು ಮೇಲೆ ನಮ್ಮ ಸ್ವಂತದ್ದು ಅಂತ ಇಟ್ಟುಕೊಳ್ಳುತ್ತೇವೆ. ಇದಕ್ಕೆ ನಮ್ಮ ಕಾಚ ಕಾಕ ಅಂತ ಇರಲಿ.

ಕಾಚ ಮಹಾಸ್ವಾಮಿ, ನನಗೆ ಕಾಕತನ ಬ್ಯಾಡ. ಇವರೆಲ್ಲ ನನ್ನ ಕಾಕ ಕಾಕ ಅಂದರು. ನಾ ಕಾಕ ಅಲ್ಲ, ಬೇರೆ ಅದಾನೆ ಅಂದಿ. ದಿಕ್ಕಿಲ್ಲದ ಈ ಮಂದಿಗೆ ನೀವೇ ಕಾಕ. ನಾ ಕಾಕನಾಗಿ ಇವರನ್ನ ಏನು ಕಾದು ಕೊಂಡೇನು? ನೀವು ಇದಕ್ಕೆ ಕಾಕನಾಗಿರಬೇಕು.

ರಣಧೀರ ಹಾಗಾದರೆ ಈ ಸೀಮೆಯನ್ನ ನಿನ್ನ ಮಗಳಿಗೆ ಉಂಬಳಿ ಹಾಕಿ ಕೊಡುತೇವೆ. ಇಲ್ಲಿಗೆ ಅವಳ ಗಂಡ ಹೆಗ್ಗಡೆ ಯಾಗಿರಲಿ, ಅವಳು ಹೆಗ್ಗಡಿತಿ. ಇವರ ಕಂದಾಯ ಸಂದಾಯ ಇನ್ನು ಮುಂದೆ ನಾವೇ ವಿಚಾರಿಸಿಕೊಳ್ಳತಕ್ಕ ವರು. ತಿಳೀತೇ ಹೆಗ್ಗಡೆಗಳೆ?

ಹೆಗ್ಗಡೆ ತಿಳೀತು ಮಹಾಸ್ವಾಮಿ. ಕರಣೀಕರೆ ತಿಳುಕೊಳ್ಳಿ.

ಕರಣೀಕ ತಿಳಿದೆ ಹೆಗ್ಗಡೆಗಳೆ.

ರಣಧೀರ ಈ ಪ್ರಾಂತವನ್ನು ಇನ್ನು ಮೇಲೆ ಕಾಕನಕೋಟೆ ಎಂದು ಕರೆಯತಕ್ಕದ್ದು. ಈಗ ಹೆಗ್ಗಡೆಗಳ ಪಾಳೆಯ ಇರುವ ಕಡೆ ಒಂದು ಕೋಟೆ ಕಟ್ಟಿಸಬೇಕು ಕಾಚ.

ಕಾಚ ನನ್ನೊಡೆಯ, ದಣಿಗಳು ಕಾಕನಾಗಿರಲಾಗಿ ಕೋಟೆ ಯಾಕೆ ಬೇಕು? ಅಲ್ಲದೀರ ಹಿರಿಯರು ಅಂದಿದಾರೆ ಕಾಡು ನಾಡಾಗ ಬೇಡ ನಾಡು ಬಯಲಾಗಬೇಡ ಅಂತ. ಕಾಡು ದೇವರು ಒಲಿದಿರೋಮುಂದಿ ಊರ ಕಟ್ಟತೀವಿ ಅನಬಾರದಂತೆ.

ರಣಧೀರ ಹಾಗೆ?

ಕಾಚ ಏನು ಗೌಡಣ್ಣ?

ಗೌಡ ಹೌದು ನನ್ನ ದೇವರೆ, ಈಗ ನಮ್ಮ ಹಕ್ಕಳು ಕಾಡಾಗೆ ನಡೀತಿರಲೀಕೆ ಹರಿದಾರೀಲಿರೋ ಆನೆ ಕಂಪು ಮೂಗಿಗೆ ತಿಳೀತದೆ. ತರಗಿನೊಳಗೆ ತೆಕ್ಕೆ ಬಿದ್ದಿರೋ ಸರಪಾ ಕಣ್ಣಿಗೆ ಕಾಣುತದೆ. ಜಿಂಕೆ ಹಿಂದೆ ನಡಿಯೋ ಹುಲಿ ಹೆಜ್ಜೆ ಸಪ್ಪಳ ಕೊಂಬಿನ ದೂರದಲ್ಲಿ ಕಿವೀಗೆ ಕೇಳತದೆ. ಜೇನ ಹುಡುಕುತಾ ಹೋಗತಿದ್ರೆ ನೊಣ ಬಂದು ದಾರೀ ತೋರತದೆ. ಊರು ಕಟ್ಟೆ ನಿಂತಿವಿ, ಇದೊಂದೂ ಆಗಲ್ಲ.

ರಣಧೀರ ಶಿಂಗಾ, ಈ ವಿಚಿತ್ರವನ್ನ ಕೇಳಿದೆಯಾ?

ಶಿಂಗಾ ಕೇಳಿದೆ ಮಹಾಪ್ರಭು. ಕಾಡಿನಲ್ಲೇ ಇರುತೇವೆ ಅನ್ನೋ ರಿಗೆ ಇದೂ ಇಲ್ಲದೆ ಇದ್ದರೆ ಬದುಕುವುದು ಸಾಧ್ಯವೆ?

ಕಾಚ ಗೋಡೇಲಿ ಮಾಡಿದ ಕೋಟೆ ಏಸುದಿನ ತಡೆದಾತು ನನ್ನೊಡೆಯ? ಈ ಕಾಡಿಗೆ ಕೋಟೆ ನಮ್ಮ ದಣೀ ಹೆಸರು.

ರಣಧೀರ ಶಿಂಗ ಇವನ ಮಾತು ಸ್ವಲ್ಪ ನಮ್ಮ ಕಬ್ಬದಯ್ಯನ ಮಾತಿನ ಹಾಗೆ ಇದೆ ಅಲ್ಲವೆ?

ಶಿಂಗಾ ಹೌದು ಮಹಾಸ್ವಾಮಿ. ಇವನೂ ಅದೇಜಾತಿ ಮನುಷ್ಯ. ಅವರ ಹತ್ತಿರ ಹೋಗುತಾ ಬರುತಾಲೂ ಇದ್ದ. ಇಂತವರ ಮಾತೆಲ್ಲ ಒಂದೇರೀತಿ.

ರಣಧೀರ ಒಂದೇರೀತಿ ಅಂದರೆ?

ಶಿಂಗಾ ಕೇಳೋಹೊತ್ತಿಗೆ ಚೆನ್ನಾಗಿರುತ್ತದೆ; ಮೂರು ಪಾಲು ನಿಜವಲ್ಲ.

ರಣಧೀರ ಅಷ್ಟೇ ಅಂತೀಯಾ?

ಶಿಂಗಾ ಅಷ್ಟೇ ಮಹಾಸ್ವಾಮಿ, ರಟ್ಟೇಲಿ ಬಲ ಇಲ್ಲದೋನು ರಾಮ ನಾಮ ಹೇಳಿ ಜಟ್ಟಿ ಆಗತಾನೆಯೇ ಪ್ರಭುವೆ?

ರಣಧೀರ ಅದು ನಿಜ. ಅಂದರೆ ಇವನು ಹೇಳಿದ್ದು ಬೇರೆ ಮಾತು ಎಂತ ಕಾಣುತ್ತದೆ. ಒಳ್ಳೇದು ಕಾಚ, ನಿನ್ನ ಇಷ್ಟದಂತೆ ಆಗಲಿ.

ಕಾಚ ಅಪ್ಪಣೆ ನನ್ನೊಡೆಯ.

ರಣಧೀರ ನಡೆಯಿರಿ, ಇನ್ನು ಹೋಗೋಣ. ಈ ಮದುವೆ ಏರ್ಪಾಡು ಮಾಡಿ.

ಕಾಚ ಅಪ್ಪಣೆ ನನ್ನೊಡೆಯ. ನನ್ನ ದೇವರು ಬಂದಾರು ಅಂತ ಒಂದು ಪದ ಮಾಡಿಸಿವ್ನಿ. ಆಗಬಹುದಂದರೆ ಅದನ ಹೇಳಿ ಎಲ್ಲಾ ಕುಣೀತೀವಿ.

ರಣಧೀರ ಆಗಬಹುದು.

(ಕಾಚ ಹಾಡುವನು. ಉಳಿದವರು ಜೊತೆಗೆ ಕರೆಯುತ್ತ ಕುಣಿಯುವರು.)

ಗೆಲ್ಲೋ ರಣಧೀರ
ಗೆಲ್ಲೊ ಕಂಠೀರವ ;
ಗೆಲು ನರಸರಾಜ
ಹಗೆಗಳಿಗೆ ಭೈರವ.

ಗೆಲ್ಲು ವೈಸೂರೊಡೆಯು
ಗೆಲ್ಲು ನಮ್ಮರಸ ;
ಆಳೀ ಬಾಳೀ
ನೂರೊಂದು ವರುಸ.

ಬಹುಕಾಲ ಆಳಲಿ
ನಮ್ಮ ನಾಡೊಡೆಯು ;
ಹರಡಿ ಹೆಚ್ಚಲಿ ನೆರಳು
ಅವನ ಬಿಳಿಕೊಡೆಯು.

ಕಾಯೋ ವಾದೇಶ
ಕಾಯಿ ನಮ ದೊರೆಯು ;
ಹರಿಸು ನಾಡಲಿ ಕೃಪೆಯು
ಇನಿಹಾಲ ತೊರೆಯು.

ಗೆಲ್ಲೋ ಗೆಲ್ಲೋ
ಗೆಲ್ಲೋ ಗೆಲ್ಲೋ
ಗೆಲ್ಲೋ ಗೆಲ್ಲೋ
ಗೆಲ್ಲೋ ಗೆಲ್ಲೋ

(ತೆರೆ ಬೀಳುವುದು.)

---

Printed by U. Narasimha Mallya, Proprietor, B. B. D. Power Press,
Cottonpet, Bangalore City.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾನ್ತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ನಾಟಕ)
ಜನಪದ ಸಾಹಿತ್ಯ (ಉಪನ್ಯಾಸ)
ಕಾಕನಕೋಟೆ (ನಾಟಕ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )
ತಾಯ್ನುಡಿಯ ತಮ್ಮಡಿ
ನವರಾತ್ರಿ ೨
ನವರಾತ್ರಿ ೪

ಚಿತ್ರಾಂಗದಾ

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (in four volumes)
Subbanna

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಾಂಡಾರ, ಕೋಟೆ, ಬೆಂಗಳೂರು ಸಿಟಿ.
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ.
ಜೀವನ ಕಾರ್ಯಾಲಯ, 43–44, ಗವಿಪುರದ ವಿಸ್ತರಣ,
ಬಸವನಗುಡಿ ಅಂಚೆ.

# ಮುನ್ನುಡಿ

ಮಾಸ್ತಿ, ಮಾಸ್ತಿಕಲ್ಲು, ವೀರಮಾಸ್ತಿ, ಈ ಶಬ್ದಗಳು ಕನ್ನಡ ಜನಜೀವನದಲ್ಲಿ ಬಹು ಬಳಕೆಯಾಗಿರುವ ಶಬ್ದಗಳು. ಸಂಸ್ಕೃತದ ಮಹಾಸತಿ ಮಾಸತಿಯಾಗಿ ಜನರ ಬಾಯಲ್ಲಿ ಮಾಸ್ತಿ ಆಗಿದೆ. ಮಾಸ್ತಿ ಶಬ್ದ ಬಂದಲ್ಲೆಲ್ಲಾ ಒಂದು ಕಾಲದಲ್ಲಿ ನಮ್ಮ ಮಹಿಳೆ ಒಬ್ಬಾಕೆ ಸಹಗಮನ ಮಾಡಿ ಮಹಾಸತಿಯಾದ ಸಂದರ್ಭ ಒಂದು ಇರುತ್ತದೆ.

ನಮ್ಮ ಊರು ಮಾಸ್ತಿ ಇಂಥ ಒಂದು ಸಂದರ್ಭದಲ್ಲಿ ನಿರ್ಮಿತವಾದದ್ದು. ನಮ್ಮ ಮನೆತನದ ಕಥೆಯಲ್ಲಿ ನಮ್ಮ ಮುತ್ತಜ್ಜಿಯ ಅಜ್ಜಿ ಸಹಗಮನ ಮಾಡಿದರೆಂದೂ ಮನೆಯಲ್ಲಿ ಸ್ವಲ್ಪ ದಿಟ್ಟರಾದ ಹೆಣ್ಣುಮಕ್ಕಳನ್ನು ವೀರಮಾಸ್ತಿ ಎಂದು ಕರೆಯುವುದು ಪದ್ಧತಿಯೆಂದೂ ನಮ್ಮ ಸೋದರತ್ತೆ ಹೇಳುತ್ತಿದ್ದರು.

ಆ ನಮ್ಮ ವಂಶಮಾತೆಯ ಕಥೆಯನ್ನು ಒಂದು ಸಣ್ಣ ದೃಶ್ಯವಾಗಿ ರಚಿಸಬೇಕೆಂದು ನನಗೆ ಬಹುಕಾಲದಿಂದ ಆಸೆಯುಂಟು. ಆ ಆಸೆ ಈಗ ಸಂದಿದೆ. ಮಾಸತಿ ಜೋಮಾಲೆ ಕಂಠೀಸರವನ್ನು ತೌರಿಗೆ ಕೊಟ್ಟುಬಿಟ್ಟಳೆಂದು ಆಕೆಯ ಅತ್ತೆ ಕೂಗಾಡಿದರೆಂಬ ಮಾತೂ, ಅತ್ತೆ ಬಹು ದರ್ಪದ ಹೆಂಗಸು ಅವರಿಗೆ ಸೊಸೆಗೆ ತುಂಬ ಮಾತುಕತೆ ನಡೆಯಿತು ಎಂಬ ಮಾತೂ, ತನ್ನ ಎರಡು ಮಕ್ಕಳನ್ನು ಎದುರಿಗೆ ತಂದಾಗ ಮಾಸತಿಯಾಗಲಿದ್ದ ತಾಯಿ ಅವನ್ನು ಎರಡು ಕಡೆಗೆ ತೆಗೆದೆಸೆದು ಮುಂದೆ ಹೋದಳೆಂಬ ಮಾತೂ ಸಂಪ್ರದಾಯದಿಂದ ಬಂದ ಮಾತುಗಳು. ದೃಶ್ಯದ ಇನ್ನೆಲ್ಲ ಸಂಗತಿ ಈ ಮಾತುಗಳನ್ನು ಬಳಸಿಕೊಂಡು ಕಟ್ಟಿರುವ ಕಟ್ಟಡ.

ಸಹಗಮನ ಪದ್ಧತಿ ಮೂಲತಃ ದೈವ ಧರ್ಮ ಸದ್ಗತಿಗಳನ್ನು ಕುರಿತ ಒಂದು ದೃಢವಾದ ವಿಶ್ವಾಸದಿಂದ ರೂಪುಗೊಂಡದ್ದು. ಅದು ಆಮೇಲೆ ರೂಪು ಕೆಟ್ಟಿತು ಎನ್ನುವುದೇನೋ ನಿಜ. ಆದರೆ ಹತ್ತರಲ್ಲಿ ಒಂದು ಸಲವಾದರೂ ಅದು ಮೂಲ ರೂಪದಲ್ಲೇ ನಡೆಯಿತೆಂದು ನಾವು ಊಹಿಸಬಹುದು. ಇದಕ್ಕೆ ಆಧಾರವಾಗಿ ಎರಡು ಉದಾಹರಣೆಯನ್ನು ಕೊಡುವುದು ಅಪ್ರಕೃತ ಆಗಲಾರದು.

ನುಗುನಾಡ ದೇಕಬ್ಬೆ ಸಹಗಮನ ಮಾಡಿದ ಸಂಗತಿಯನ್ನು ನಮ್ಮ ಒಂದು ಶಾಸನ ಹೊಗಳುತ್ತದೆ. ಶಾಸನದ ಈ ಪದ್ಯಗಳಲ್ಲಿ ದೇಕಬ್ಬೆಯ ಆತ್ಮಯಜ್ಞದ ವರ್ಣನೆ ದೊರೆಯುತ್ತದೆ.

ಚಾರು ಚಾರಿತ್ರೆ ನಯ ವಿನಯಾಕರೆ ಗೋತ್ರಪವಿತ್ರೆ ಸುಶೀಲಯುಕ್ತೆ
ಸಾರೀಜನರನ್ನಮೆನಿಪ ಪೊನ್ನಬ್ಬೆಗಂ ರವಿಗಂಗಂ ಪುಟ್ಟಿದ ದೇಕಬ್ಬೆಯಂ
[ವೀ]ರಂ ನವಲೆ ನಾಡಧಿಪತಿ ಕುಱುವಂದಗುಲದ ಪೆರ್ಮಯಲಾತ
ನೇಚಂಗೀಯೆ
ವಾರಿಜಾನನೆ ವಿನಯ ಚಿಂತಾಮಣಿ ಪತಿಹಿತೆಯೊಡಗೂಡಿ ಸುಖದಿನಿಱ್ಪ

ಜೆಟ್ಟಿಗನೆನೆ ನೆಗಱ್ದ ಹಿತಘ
ರಟ್ಟಂ ಸುಖಮಿಱ್ದು ತನ್ನ ದಾಯಿಗರಂ ತ
ಳ್ತೊಟ್ಟಜೆಯಿನಿಱಿದಡವನಂ
ನೆಟ್ಟನೆ ತಲೆಕಾಡಲುಯ್ದು ಕೊಂದಂ ನರಪಂ

ಕಲಿಕಾಲವೇಳನೆನಿಸಿದ
ಕಲಿ ಚಾಗಿಯನಿಱಿದು ಕೊಂದರೆಂಬುದು ಮಾತಂ
ಲಲಿತಾಂಗಿ ಕೇಳ್ದು ರವಿಗನ
ಕುಲದೀಪಕಿ ಸಾಯಲೆಂದು ಕೊಂಡಕೆ ನಡೆದಳ್

ತಂದೆಯುಮಬ್ಬೆಯುಮೊಡನೆಯೆ
ಬಂಧುಗಳುಂ ಬಂದು ಮಗಳೆ ಸಾಯದೆ ಮಾಣ್ ನೀ
ನೆಂದೆಲ್ಲಂ ಕಾಲ್ವಿಡಿದಡ
ನಿಂದಿತೆ ದೇಕಬ್ಬೆ ಮುನಿದು ಬಗ್ಗಿಸಿ ನುಡಿದಳ್

ನುಗುನಾಡಧಿಪತಿ ರವಿಗನ
ಮಗಳಾಗಿಯುಮಂತೆ ನವಿಲೆನಾಡಧಿಪತಿಗಾಂ
ನೆಗೞ್ದ ಸತಿಯಾಗಿ ಬಾೞ್ವುದು
ಬಗೆದರ್ಪ್ಪಿನೆ ಕೊಟ್ಟ ಕೊಂಡ ಮನೆಯುಸಮಱಿಯಲ್

ಎಂದು ಪರಿಚ್ಛೇದಿಸಿ ನಯ
ದಿಂದಂ ದೇವಂಗೆ ತೋಂಟಖಂಡದ ಮಣ್ಣಂ
ನಂದಾದೀವಿಗೆಗಿತ್ತರ
ವಿಂದಾನನೆ ಸಲೆ ನಿವೇದ್ಯಕೆಂದನುನಯದಿಂ

ಮಡದಿ ಸಲೆಗೇಳಿಗಟ್ಟಿದ್ದಯು
ಪಡುವಣ ಕಡೆಯಲ್ಲಿ ತೆಂಕಲಯ್ಗೊಳ ಬೆಳೆಯಂ
ಕಡುಗೂರ್ತು ಕೊಟ್ಟು ನುಗುನಾ
ಡೊಡೆಯನ ಕುಲಪುತ್ರಿ ಪೆಟ್ಟಿ ಮತ್ತಂ ಮತ್ತಂ

ನೆರೆದೆಲ್ಲಂ ಬೇಡ ಮಾಣೆಂದಡೆ ನುಡಿಯದಿರಿಂ ಪೋಗಿಮಾಂ ಮಾಣೆನೆಂದಾ
ದರದಿಂದಂ ಭೂಮಿ ಪೊಂಪುಟ್ಟಗೆ ಪಸುಧನಮಂ ನೀಡುತುಂ. . . . ದೇ
ವರ ದೇವಂಗಟ್ಟಿಯಿಂ ಕಯ್ಮುಗಿದುರಿವುರಿಯಂ ಪೊಕ್ಕು ದೇಕಬ್ಬೆ ತನ್ನಂ
ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗಟಿ ನೆಗಟುತುಂ ದೇವಲೋಕಕ್ಕೆ ಪೋದಳ್

ಶ್ರೀರಮಣಿ ಗೌರಿ ಶಚಿ ಧಾರಿಣಿಯ ಪುತ್ರಿ ರತಿ ಭೂರಮಣಿಯಂದದ
ಸರೂಪವಱಿವೊಳ್ಪಾ
ದಾರೆ ಜಯಧಾರೆ ಜಸಧಾರೆ ನಯಧಾರೆ ಭಯಹಾರೆ ಪತಿಭಕ್ತಿ
ಧೃತಶಕ್ತಿಯೆನೆ ಸಂದೀ
ವೀರನಿಧಿಯಂ ಚಲದ ವಾರಿನಿಧಿಯಂ ಗುಣದ ಚಾರುನಿಧಿಯಂ
ನೆಗಟ್ದಿದೇ ಕಲಿಯನಿಂತೀ
ನಾರಿಜನರನ್ನ ಮನದಾರೊ ಮಱಿವರ್ ಸಕಳ ಧಾರಿಣಿಯೊಳಿಂತು
ವರಕಾಂತೆ ದೊರೆಯಾವಳ್

ಪಂಡಿತಾಶ್ರಯಂ ನುಗುನಾಡ ರಾಘವಂ ಮುನಿವರ ಸಿಂಗಮೋಚಕದಾವಳಂ
ಚಂಡವಿಕ್ರಮಂ ಕುಡಿಯರವಲ್ಲಭಂ ಕಲಿಕಾಲಕರ್ಣಂ ಮಚ್ಚರಿಪವರ
ಗಂಡಂ ವಂದಿ ಚಿಂತಾಮಣಿ ಶಿವಪಾದ ಶೇಖರಂ ನಿಜಸುತೆಗನುರಾಗದಿಂ
ಮಂಡಲಕ್ಕೆಲ್ಲಂ ಪಡಿಛಂದಮಾಗೆ ಶಿಲಾಸ್ತಂಭಂ ಶಾಸನಮಾಗೆ ನಟ್ಟಂ

ಸಿಖ್ ಜನರ ಪ್ರಸಿದ್ಧ ಮಹಾರಾಜ ರಣಜಿತ್ ಸಿಂಗ್ ತೀರಿಕೊಂಡಾಗ ನಡೆದ ಸಂಗತಿಯನ್ನು ವರ್ಣಿಸಿರುವ ಈ ವಾಕ್ಯಗಳು ಇಂಥದೇ ಒಂದು ನಿಶ್ಚಯವನ್ನು ಚಿತ್ರಿಸುತ್ತವೆ.

Ranjit Singh was cremated on the morning of the 28th of June on the banks of the Ravi, at a spot where now a Mausoleum stands in his memory. The corpse was washed in Ganges water and placed on a bier of sandalwood. Rani Guddan, daughter of Raja Sansar Chand of Katoch, who had decided to burn herself made Raja Dhian Singh, Kunwar Kharak Singh and Kunwar Nao Nihal Singh put their hands on Ranjit Singh's chest and swear that they would remain loyal to the State.

Rani Guddan placed the dead Maharaja's head in her lap while three other Ranis with several slave girls all dressed in their best clothes and loaded with jewels sat around "with every mark of satisfaction on their countenances."

At 10 o'clock Kunwar Kharak Singh set fire to the pile and the Ruler of the Punjab with four Ranis and several slave girls were reduced to ashes.

ಗವೀಪುರ ವಿಸ್ತರಣ, ಬಸವನಗುಡಿ
ವಿಜಯ ಸಂ.
ಆಶ್ವೀಜ ಬಹುಳ ಚತುರ್ಥಿ
ಸೋಮವಾರ
೨೬–೧೦–೧೯೫೩

ಶ್ರೀನಿವಾಸ

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ಸುಬ್ಬಣ್ಣ (ಕತೆ)
ವಿಮರ್ಶೆ ೧, ೨, ೩, ೪ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೪, ೫, ೬
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯಿನುಡಿಯು ತಮ್ಮಡಿ (ಭಾಷಣ)
ನವರಾತ್ರಿ ೧, ೨, ೩, ೪, ೫ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವನಾಯಕ (ಕಾದಂಬರಿ)
ಮನವಿ (ಗೀತೆಗಳು)
ಪೂಜನ (ಮುನ್ನುಡಿಗಳ ಸಂಕಲನ)
ಚಿಂತನ (ವಿಚಾರ)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು
ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಮಾಸತಿ

(ಅರುಳಾಳದ ದೊಡ್ಡ ಮನೆಯ ಪಡಸಾಲೆ; ಮನೆಯ ಸೊಸೆ, ಸುಮಾರು ಮೂವತ್ತು ವರ್ಷ ವಯಸ್ಸಿನ ತಿರುಮಳಾ ಕೈಸಾಲೆಯಿಂದ ಬರುವಳು.)

**ತಿರುಮಳಾ**

ಶ್ರೀನಿವಾಸಾ ವೆಂಕಟಾಚಲಪತೀ ನೀನೆ
ಕಾಪಾಡು; ಅರುಳಾಳನಾಥ ನೀ ಕಾಪಾಡು.
ಆ ಉಸಿರು ಪಡುತಿರುವ ಕಷ್ಟವನು ನೋಡಿ ನಾ
ಸಹಿಸಲಾರೇ: ವೆಂಕಟರಮಣ ಕಾಪಾಡು.
ಮನೆಯದೇವರು ನೀನು ಕೈಬಿಡಲು ಗತಿಯೇನು?
ದಿವಸ ತಪ್ಪದೆ ನಿನ್ನ ಪೂಜಿಸಿದ ಜೀವವದು:
ಅದನು ರಕ್ಷಿಸು; ನೋವ ಹರಿಸು; ಆಯುಷ್ಯವನು
ನೀಡು; ಕಾಪಾಡು. ಅವರೇ ಎಲ್ಲ ಸೌಭಾಗ್ಯ
ಎಂದು ನಂಬಿಹ ನಾನು ನಿನ್ನ ಕಾಲನು ಹಿಡಿದು
ಬೇಡಿಕೊಂಬೆನು ತಂದೆ: ನನ್ನ ಮಾಂಗಲ್ಯವನು
ಭದ್ರವಾಗಿರಿಸು; ಕಾಪಾಡು.

(ಮನೆಯ ಮಗಳು: ಮನೆತಪ್ಪಿದವಳು, ಸುಮಾರು ಅದೇ ವಯಸ್ಸು; ಒಳಗಿಂದ ಬಂದು)

**ಅಲಮೇಲು**

ಬಾ, ತಿರುಮಳಾ.
ನೀನೆಲ್ಲಿ ಎಂದು ಕೇಳಿದ ನೋಡು; ಬೇಗ ಬಾ.
ಹತ್ತಿರಿರು; ಕುರುಳ ನೇವರಿಸು; ಕಣ್ಣನು ಮುಚ್ಚು.
ಎಷ್ಟೋ ಸಮಾಧಾನ ಜೀವಕ್ಕೆ.

**ತಿರುಮಳಾ**

(ನಿರಾಶೆಯ ಮುಖದಿಂದ)

ಅವರಮ್ಮ

ಅದನೆಲ್ಲ ಮಾಡುವರು ಅಮ್ಮಲ್ಲು; ಒಳಗಿದ್ದು
ಎಲ್ಲವನು ನೋಡಿಕೊ. ನನಗಿಲ್ಲಿ ಕೆಲಸವಿದೆ.

(ಎಂದು ಮನೆಯ ಬೇರೆಯ ಕಡೆಗೆ ಹೋಗುವಳು.)

**ಅತ್ತೆ**

(ಕೋಣೆಯೊಳಗಿಂದ ಬರುತ್ತ)

ಇವಳೆಲ್ಲಿ ಹೋದಳೇ ಅಮ್ಮಲ್ಲು? ದೇವರು
ನನ್ನ ಹಣೆಯಲಿ ಎಲ್ಲ ದುಃಖವನು ಬರೆದಿಟ್ಟ.
ನಾರಾಯಣಾ, ತನ್ನ ಗಂಡ ಹೀಗಾಗುತಿರೆ
ಪಕ್ಕದಲಿ ಕುಳಿತಿರಲು ಮನಸಿಲ್ಲ ಇವಳಿಗೆ.
ಎಂಥ ಸೊಸೆ ಸೇರಿದಳು ಮನೆಗೆ!

**ತಿರುಮಳಾ**

(ಹಿಂತಿರುಗಿ ಬರುತ್ತ)

ಸೊಸೆಯನು ಈಗ

ಮೆಚ್ಚಿಕೊಂಡಿರ ಅತ್ತೆ? ಅಂತೆಯೇ ನೋಡುತಿರಿ;
ಇನ್ನಷ್ಟು ಮೆಚ್ಚಿಕೊಳ್ಳುವಿರಿ.

(ಮಡಲಿಂದ ಎರಡು ಬೊಗಸೆ ಅರಿಸಿನದ ಕೊಂಬನ್ನು ತೆಗೆದು ಅಲ್ಲಿರುವ ಒರಳ ಬಳಿ ಹಾಕುವಳು. ನೀರು ತುಂಬಿದ ಚೊಂಬನ್ನು ಕೆಳಗಿರಿಸುವಳು.)

**ಅಲಮೇಲು**

ಇದು ಏನಮ್ಮ

ತಿರುಮಳಾ? ಉಸಿರು ಹೋಗುವ ವೇಳೆ ಹತ್ತಿರಿರು
ಬಾರಕ್ಕ

(ಒಳಗಿಂದ ದುಃಖದ ಧ್ವನಿ)

ಅಯ್ಯೊ ಏನಾಯಿತೋ

(ಒಳಗೆ ಹೋಗುವಳು)

**ಅತ್ತೆ**

ಕೈಹಿಡಿದ

ಗಂಡನಿಗೆ ತೇಲುಸಿರು ಮೇಲುಸಿರು ಆಗಿದೆ;
ನೀನಿಲ್ಲಿ ಯಾವುದೋ ಆಟವನು ತೆಗೆದಿರುವೆ;
ಏನೆ ಇದು?

**ತಿರುಮುಳಾ**

ನೀವೆ ಹೇಳಿದಿರಲ್ಲ: ಇದು ಆಟ.
ನಾನಾಡುವುದನು ನಾನಾಡುವೆನು; ನಿಮ್ಮದನು
ನೀವು ಆಡಿರಿ ಹೋಗಿ.

**ಅತ್ತೆ**

ಒಳ್ಳೆ ದಿಟ್ಟಕೆ ಬಂದೆ
ಮನೆಯ ಸೊಸೆ.

**ತಿರುಮುಳಾ**

ನೀವು ದಿನವೆಲ್ಲ ಹರಸಿದ ದಿಟ್ಟ
ಈಗ ಕೈಗೂಡುತಿದೆ.

**ಅತ್ತೆ**

ಅಯ್ಯೊ ತಾಟಕಿ, ನಾನು
ಮಗ ಸಾಯಲೆಂದು ಹರಸಿದೆನೆ?

**ತಿರುಮುಳಾ**

ಸೊಸೆ ಸಾಯಲಿ
ಎಂದು ಹರಿಸಿದಿರಲ್ಲ? ಅದು ಈಗ ನಡೆಯುವುದು.

ಅತ್ತೆ

ಸೊಸೆ ಸಾಯಲೆಂದು ಎಂದೇ ನಾನು ಹರಸಿದೆ?

ತಿರುಮಳಾ

ಸೊಸೆ ಬಾಳು ಎಂದು ಎಂದಾದರೂ ಹರಸಿದಿರ?

ಅತ್ತೆ

ಹರಸಿದರೆ ಒಪ್ಪಿಕೊಳ್ಳುವಳೆ ನೀ ಸೊಸೆ? ನಿನ್ನ
ಪೊಗರಿನೆದುರಲಿ ನಾನು ಅತ್ತೆಯೋ?

ತಿರುಮಳಾ

ನೀವಿರುತ
ಬೇರೆಯುವರದು ಪೊಗರೆ? ನಡೆಯಿರಿ; ಕಾಡದಿರಿ;
ನನಗೆ ಬೇರೆಯು ಕೆಲಸವಿದೆ.

(ಎಂದು ಒರಳ ಬಳಿ ಕುಳಿತುಕೊಳ್ಳುವಳು.)

ಅತ್ತೆ

ಏನಹಂಕಾರ!
ಏನು ಕಥೆ! ಕೈಹಿಡಿದ ಗಂಡ ಅಂತಾಗುತಿರೆ
ತಗ್ಗಿ ನಡೆಯುವ ಎಂದು ತೋರದೇ ನಿನಗೆ?

ತಿರುಮಳಾ

ಮಗ
ಸತ್ತರೂ ಸಮನೆ; ಸೊಸೆ ತಗ್ಗಿ ನಡೆದಳೆ ಸಾಕು.

ಅಲಮೇಲು

(ಹೊರಕ್ಕೆ ತಲೆಯಿಟ್ಟು)

ಬಾ ತಿರುಮಳಾ; ಬಾಮ್ಮ ಬೇಗ; ನೀನೂ ಬಾಮ್ಮ
(ಎಂದು ಒಳಕ್ಕೆ ಮರೆಯುವಳು. ಅತ್ತೆಯೂ ಒಳಕ್ಕೆ ಹೋಗುವಳು.)

**ತಿರುಮಳಾ**

(ಒರಳಬದಿಯಲ್ಲಿ ಕುಳಿತು ಅರಿಸಿನದ ಕೊಂಬನ್ನು ಪುಡಿಮಾಡುತ್ತ)

ಉಲಗಮುಣ್ಡ ಪೆರುವಾಯಾ ಉಲಪ್ಪಿಲ್ ಕೀರ್ತಿಯಮ್ಮಾನೇ
ನಿಲವುನ್ ಶುಡರ್ಶೂಟ್ ಒಳಿಮೂರ್ತಿ, ನೆಡಿಯಾಯುಡಿಯೋ
ನಾರುಯಿರೇ,
ತಿಲದಮುಲಗುಕ್ಕಾಯ್‌ನಿನ್ನ ತಿರುವೇಂಗಡದತ್ತೆನ್ ಪೆರುಮಾನೇ,
ಕುಲತೊಲಡಿಯೇನುನಪಾದಂ ಕೂಡುಮಾಱುಕೂಱಾಯೇ.

ಅರುಳಾಳನಾಥ ನೀನೇ ನನ್ನ ಕಾಪಾಡು.
ಅವರನುಳಿಸುವುದಾಗಲಿಲ್ಲವೇ ನನ್ನನೂ
ಅವರೊಡನೆ ನಿನ್ನಡಿಗೆ ಕರೆದುಕೊ.

(ಒಳಗಿಂದ ಬಂದು ಅಲಮೇಲು ಕೈಗಳನ್ನಾಡಿಸಿ ಎಲ್ಲ ಆಗಿಹೋಯಿತೆಂದು ಸನ್ನೆಮಾಡುವಳು.)

ಒಳ್ಳಿತು
ಶ್ರೀನಿವಾಸಾ ವೆಂಕಟಾಚಲಪತೀ ನನಗೆ
ಇದೆ ಬುದ್ಧಿಯನು ಕೊಟ್ಟು ಕಾಪಾಡು; ಧೈರ್ಯದಲಿ
ನಿನ್ನಡಿಯ ಸಾರುವಂದದಿ ಮಾಡು; ಮಾಂಗಲ್ಯ
ಕೆಡದಿರಲಿ, ಇದನನುಗ್ರಹಿಸು.

**ಅಲಮೇಲು**

(ಮುಂದರಿದು ಬಂದು)

ಮಾಂಗಲ್ಯವನು
ನಿನ್ನ ಅರುಳಾಳನಾಥನೆ ಕೆಡಿಸಿ ಮುಗಿಸಿದನು.
ಅದನಿನ್ನು ಅವನು ಉಳಿಸುವನೆಂತು?

**ತಿರುಮಳಾ**

ಉಳಿಸುವನು,
ನೋಡುತಿರು, ಅಮ್ಮಲ್ಲು; ಉಳಿಸುವನು ನೋಡುತಿರು.

(ಅತ್ತೆ ಒಳಗಿಂದ ಬರುವಳು.)

**ಅತ್ತೆ**

ನನ್ನ ಮಗನನು ನುಂಗಿಕೊಳ್ಳಲೆಂದೇ ಬಂದ
ಮಾರಿ, ಬಾ. ನೀ ಮನೆಗೆ ತಂದ ಸೌಭಾಗ್ಯವನು
ನೋಡಿ ಸಂತೋಷಪಡು ಬಾ. ಗಂಡ ಸಾಯುತಿರೆ
ಪಕ್ಕದಲಿ ಕುಳಿತು ಒಳ್ಳೆಯ ಎರಡು ಮಾತಾಡಿ
ನೋಡಿಕೊಳ್ಳದೆ ಇಲ್ಲಿ ಏನು ಮಾಡುತಲಿದ್ದೆ
ರಾಕ್ಷಸಿ?

**ತಿರುಮಳಾ**

ಮಾರಿ; ರಾಕ್ಷಸಿ; ಬೇರೆ ಏನೇನು
ಎಲ್ಲವನು ಹೇಳಿ ಮುಗಿಸಿ: ಇದೇ ಕೊನೆಯ ದಿನ.
ಎದುರಿನಲಿ ಕುಳ್ಳಿರಿಸಿಕೊಂಡು ಬೈಯುವ ಎನಲು
ನಾಳೆ ನಾನಿಲ್ಲಿಲ್ಲ; ಈಗಲೇ ಮುಗಿಸಿರಿ.

**ಅತ್ತೆ**

ತೌರಿಗೋಡುವೆಯೇನು? ಒಡವೆ ವಸ್ತುವನೆಲ್ಲ
ಮೈಮೇಲೆ ಹಾಕಿಕೊಂಡಿರುವೆ. ಅಣ್ಣನ ಮಗಳ
ಮದುವೆ, ಗಂಡನ ಜೊತೆಗೆ ಹೋಗಿ ಬರುತೇನೆಂದು
ಹೋದವಳು ನನ್ನ ಜೋಮಾಲೆ ಕಂಠೀಸರವ
ಕೊಟ್ಟು ಬಂದೆಯೆ. ಈಗ ಗಂಡ ಸತ್ತದೆ ಸಾಕು
ಎಂದು ನೆಪಮಾಡಿ ತೌರಿಗೆ ಹೋಗಿ ಇನ್ನೆಲ್ಲ
ಒಡವೆಯನು ದಾನಮಾಡುವೆಯೇನೊ? ನಿಮ್ಮಪ್ಪ
ನಿನಗೆ ಕೊಟ್ಟದ್ದು ಯಾವುದು ಅದನು....

**ತಿರುಮಳಾ**

ನಮ್ಮಪ್ಪ
ನನಗೆ ಕೊಟ್ಟದ್ದು, ನಿಮ್ಮಪ್ಪ ನಿಮ ನಿಮಗೆಂದು
ಬಿಟ್ಟಿದ್ದು, ಎಲ್ಲವೂ ಈ ಒಂದು ಒಪ್ಪೊತ್ತು
ನನಗಿರಲಿ ಆಮೇಲೆ ಎಲ್ಲ ನಿಮಗಿರುವುದು.

**ಅತ್ತೆ**

ನಮ್ಮಪ್ಪ ನನಗೆಂದು ಕೊಟ್ಟ ಆ ಜೋಮಾಲೆ
ಎಲ್ಲಿಯೇ? ಎಲ್ಲಿಯೇ ನನ್ನ ಕಂಠೀಸರ?

**ಮಾವ**

(ಹೊರಕ್ಕೆ ಬಂದು)

ಏನು? ಜೋಮಾಲೆ ಕಂಠೀಸರದ ಜಗಳ ಇದು
ಮಗ ತೀರಿಕೊಂಡ ದಿನ ಮರಳಿ ತಲೆಯೆತ್ತಿತೆ?

**ಅತ್ತೆ**

ಏನ ಮಾಡೆಂದು ಹೇಳುವಿರಿ? ಈ ನಮ್ಮ ಸೊಸೆ
ಗಂಡ ಸಾಯುವ ಹೊತ್ತಿನಲಿ ಎಲ್ಲ ಒಡವೆಯನು
ಮೈಮೇಲೆ ಹೇರಿಕೊಂಡಿರುವಳೆ? ತೌರಿಗೆ
ಹೊರಡುತೇನೆನ್ನುತಿರುವಳೆ? ನನ್ನ ಜೋಮಾಲೆ
ಕಂಠೀಸರವನು ಆ ಸಲ ತೌರುಮನೆಯಲೇ
ಬಿಟ್ಟುಬಂದಳು. ಈಗ ಎಲ್ಲ ಒಡವೆಯ ಹೊತ್ತು
ತೌರಿಗೋಡುವಳಂತೆ. ಕೇಳಿ ಸುಮ್ಮನೆ ಇರಲೆ?

**ಮಾವ**

ಇದು ಏನು ನೀನು ಆಡುವಮಾತು? ಅಮ್ಮಯ್ಯ,
ತಿರುಮಳಾ, ಒಳಗೆ ನಡೆಯಮ್ಮ. ಒಳಗಡೆ ಹೋಗಿ
ಅವನ ಕಣ್ಣುಗಳ ಮುಚ್ಚಮ್ಮ. ದೇವರು ನಿನಗೆ
ಕೊಡಬಾರದಂಥ ಕಷ್ಟವನು ಕೊಟ್ಟನು ತಾಯಿ.
ನನಗು ಕಷ್ಟವೆ. ಮುದುಕ. ಕಣ್ಮುಚ್ಚಿಕೊಂಬದಿನ
ಮಗ ಪಕ್ಕದೊಳಗಿದ್ದು ನೋಡಿಕೊಂಬನು ಎಂದು
ಆಸೆಪಟ್ಟಿದ್ದೆ. ಆ ಆಸೆ ಬರಿದಾಯಿತು.
ಮುದುಕಿ ನಿಮ್ಮತ್ತೆಗೂ ಕಡುದುಃಖ ಒದಗಿತು.
ಆಕೆ ದುಃಖದಲಿ ಏನೋ ಹೇಳುತಿರುವರು.
ಅದರಿಂದ ನೀನು ಬೇಸರಗೊಳ್ಳಬೇಡ.

ಅತ್ತೆ

ಬಿಡಿ
ಸಾಕು ಈ ಮಾತು. ಏನೋ ಹೇಳುತಿರುವೆನೇ
ನಾನು? ಸೊಸೆಯನು ನೋಡಿ. ಗಂಡ ಹೋದನು ಎಂದು
ದುಃಖಪಡುತಿರುವಳೇ? ಅಲ್ಲವನು ತೇಲ್ಗಣ್ಣು
ಮೇಲ್ಗಣ್ಣಿನಲಿ ಬೇನೆ ತಿನ್ನುತಿದ್ದರೆ ಇಲ್ಲಿ
ತನ್ನ ಕೋಣೆಗೆ ಹೋಗಿ ಇನ್ನೆಲ್ಲ ಒಡವೆಯನು
ಹೇರಿಕೊಂಡಿರುವಳೇ. ದುಃಖವೇ ಇವಳಿಗೆ?

ತಿರುಮಳಾ

(ಮೆಲ್ಲನೆ) ನನಗೇಕೆ ದುಃಖ? ಜೋಮಾಲೆ ಕಂಠೀಸರವ
ಕಳೆದುಕೊಂಡವರಿಗೇ ದುಃಖ.

ಅತ್ತೆ

ಮುಚ್ಚೇ ಬಾಯಿ.
ಕದ್ದ ನಿನ್ನದು ಎಷ್ಟು ಪೆಡಸರ?

ಮಾವ

ಬಿಡಿರಲ್ಲ!
ಈ ಮಾತಿಗೆಲ್ಲ ಇದು ಹೊತ್ತೆ? ಇಲ್ಲಿಗೆ ಬಿಡಿರಿ.

ಅಲಮೇಲು

(ಬಂದು) ತಿರುಮಳಾ, ಅಣ್ಣಯ್ಯ ಹೋದ ಹೊತ್ತಲಿ ನಿನ್ನ
ಬುದ್ಧಿಯೂ ಹೋಯಿತೆ? ಈಗಲೇ ಈ ವಾದ?

ತಿರುಮಳಾ

(ತನ್ನಲ್ಲಿ) ಇದು ನಿಜ. ನಾನಿನ್ನು ಈ ಮಾತ ಬಿಡಬೇಕು.
ನನ್ನ ಮುಂದಿನ ದಾರಿಯಲಿ ಕಣ್ಣಿಡಬೇಕು.

(ಅಲಮೇಲುವಿಗೆ)

ಓರಿಯರೆದುರಲಿ ಬಾಯುತೆರೆದು ಇಂದಿನವರೆಗೆ
ನಾನು ಮಾತಾಡಿದವಳಲ್ಲ. ಇದು ಕೊನೆಯ ದಿನ.
ಅದರಿಂದ ಧೈರ್ಯಮಾಡುವೆನು ; ಆಶೀರ್ವಾದ
ಮಾಡಿ ಹರಸಿರಿ ಎಂದು ಬೇಡುವೆನು. ಈ ಮಾತ
ಅತ್ತೆಯವರೂ ಸಮಾಧಾನದಲಿ ಕೇಳಿದರೆ
ಸೊಸೆ ತೀರ ದುಷ್ಟ ಹೆಣ್ಣಲ್ಲ ಎಂದರಿಯುವರು,
ನನಗೆ ಆಶೀರ್ವಾದ ಮಾಡುವರು ಹರಸುವರು.

**ಮಾವ**

ಏನು ಮಾತಮ್ಮ ಇದು ತಿರುಮುಳಾ ? ಈ ವೇಳೆ
ಯಾವ ಆಶೀರ್ವಾದ ಹರಕೆ ?

**ಅತ್ತೆ**

ತೌರಿಗೆ ಹೋಗಿ
ನಿಶ್ಚಿಂತೆಯಾಗಿ ಬಾಳೆಂದು ಸೊಸೆಯನು ಹರಸಿ.
ಎಲ್ಲ ಒಡವೆಯನೊಯ್ದು ತನ್ನಿಷ್ಟ ಬಂದಂತೆ
ಶತಪೋಲು ಮಾಡಲಿ.

**ಮಾವ**

ನಾರಾಯಣಾ ನೀನು
ಸುಮ್ಮನಿರಬಾರದೇ ?

**ಅತ್ತೆ**

ಇದೊ ಸುಮ್ಮನಿರುವೆನು ;
ನಿಮ್ಮ ಮುದ್ದಿನ ಸೊಸೆಯ ಬೇಡಿಕೆಯ ಸಲ್ಲಿಸಿರಿ.
(ಎಂದು ಒಳಗೆ ಹೋಗುವಳು.)

**ಮಾವ**

ಬಾರಮ್ಮ ತಿರುಮುಳಾ ; ಬೇಗ ; ಹೊತ್ತಾಯಿತು.
ಇಂಥ ಮಾತಾಡುತಿರಲಿದು ವೇಳೆಯೇ ? ದೈವ
ಬೇರೆ ಕೆಲಸವನೊದಗಿಸಿದೆ.

**(ಒಳಗೆ ಹೋಗುವನು.)**

**ತಿರುಮಳಾ**

ನೋಡು ಅಮ್ಮಲ್ಲು,
ನನ್ನ ಈ ಎರಡು ಮಾತನು ಕೇಳಿ ಆಮೇಲೆ
ಹಿರಿಯರಿಗೆ ತಿಳಿಸಬೇಕು.

**ಅಲಮೇಲು**

ಅದೇಕೆ? ಆ ಕೆಲಸ
ನೀನೆ ಮಾಡಿದರಾಗದೇ?

**ತಿರುಮಳಾ**

ನಾನಿರುವುದಿಲ್ಲ;
ಅದರಿಂದ ನಿನಗೆ ಹೇಳುವೆನು. ಅಣ್ಣನ ಮಗಳ
ಮದುವೆಗೆಂದಾದಿವಸ ನಾನು ನಿಮ್ಮಣ್ಣಯ್ಯ
ಹೊರಟ ದಿನ ನೀನು ಇರಲಿಲ್ಲ. ಮಾವನವರಿಗೆ
ಮೈಯಲ್ಲಿ ಸರಿಯಿಲ್ಲವೆಂದು ಅವರೂ ಅತ್ತೆ
ಬರಲಿಲ್ಲ. ಮದುವೆಗೆ ಯಜಮಾನರೂ ನಾನೆ
ಹೋಗಿ ಬರುವುದು ಎಂದು ನಿಶ್ಚಯಿಸಿದರು. ನನ್ನ
ತೌರುಮನೆ ನಿನ್ನ ತಾತದಿರ ತೌರಿನ ರೀತಿ
ಹಣವುಳ್ಳ ಮನೆಯಲ್ಲ. ನೀಬಲ್ಲೆ. ಅಂಥಕಡೆ
ಪುಣ್ಯವಂತರ ತುಂಬು ಒಡವೆಯನು ಮೆರೆಯುವುದು
ಬೇಡವೆನ್ನುತ ನಾನು ನನ್ನ ಒಡವೆಯನೆಲ್ಲ
ಪೆಟ್ಟಿಗೆಯೊಳಿರಿಸಿ ಒಂದೆರಡು ಒಡವೆಯ ಮಾತ್ರ
ತೊಟ್ಟು ಮದುವೆಗೆ ಪಯಣವಾಗಿಲ್ಲಿ ನಿಂತೆನು.
ಹೊರಟ ಹೊತ್ತಿನಲಿ ಅತ್ತೆಮ್ಮ ತಾವೇ ಬಂದು,
"ಮದುವೆ ಹಂದರದಲ್ಲಿ ಸೊಸೆಯ ಹರಸಲು ಹೊರಟ
ಮುತ್ತೈದೆ, ದೊಡ್ಡಮನೆ ಸೊಸೆ, ಇರುವ ಒಡವೆಯನು
ತೊಟ್ಟು ಸಂತೋಷದಲಿ ಹೋಗುವರೊ? ನಿನ್ನಂತೆ

ಬಡಸುಮಂಗಲಿಯಾಗಿ ಚೀಕು ಬಾಕನು ಹಾಕಿ,
ಅತ್ತೆಯಾದವಳು ನನ್ನನು ಬಾಳಿಸುವುದಿಷ್ಟೆ,
ಎಂದು ನನ್ನನು ಜನರ ಬಾಯಲ್ಲಿ ಹಾಕುವರೊ?''
ಎಂದು ಕೋಪದಲಿ ಹೇಳಿದರು. ನಿಮ್ಮಣ್ಣಯ್ಯ,
ಅಮ್ಮ ಹೇಳಿದ ಹಾಗೆ ಮಾಡು, ಎಂದರು. ಹೋಗಿ
ಒಂದಿದ್ದ ಕಡೆ ಇನ್ನು ಎರಡು ಒಡವೆಯ ತೊಟ್ಟು
ಬಂದೆ. ಜೋಮಾಲೆ ಕಂಠೀಸರವ ಕಾಣದೆ
ಅತ್ತೆಮ್ಮ, "ನನ್ನ ಜೋಮಾಲೆ ಕಂಠೀಸರ
ಮನೆಯ ಸೊಸೆಗಿರಲೆಂದು ಕೊಟ್ಟಿಲ್ಲವೇ? ಅದನು
ಹಾಕಿಕೊ,'' ಎಂದು ಹೇಳಿದರು. ಒಳ್ಳಿತು ಎಂದೆ;
ಮತ್ತೊಮ್ಮೆ ಒಳಗೆ ಹೋದವಳೆ ಕಂಠೀಸರ
ಜೋಮಾಲೆ ಎರಡನೂ ಹಾಕಿಕೊಂಡೇ ಬಂದೆ.

**ಅಲಮೇಲು**

ಹೌದಲ್ಲ. ಇದನೆಲ್ಲ ನನಗಮ್ಮ ಹೇಳಿದರು.

**ತಿರುಮಳಾ**

ಪಯಣವಾಯಿತು. ಮದುವೆಗೆಂದು ಬಂದವರೆಲ್ಲ,
ಜೋಮಾಲೆಯನು ಇವರು, ಕಂಠೀಸರವನವರು,
ನೋಡಿದರು, ಮುಟ್ಟಿದರು, ಕೈಗೆ ಕೊಡು ಎಂದರು;
ಕುಸುರಿ ಕೆಲಸವ ನೋಡಿ ಮೆಚ್ಚಿದರು; "ನಿಮ್ಮತ್ತೆ
ಎಂಥ ಒಳ್ಳೆಯ ಅತ್ತೆ! ಇಂಥ ಕಂಠೀಸರ
ಜೋಮಾಲೆಯನು ಸುಮಂಗಲಿ ತಾನೆ ತೊಡಬಹುದು
ಆದರೂ ಸೊಸೆಗೆ ಕೊಟ್ಟಿರುವರೇ ಪುಣ್ಯಾತ್ಮೆ,''
ಎಂದು ಹೊಗಳಿದರು. ಅತ್ತೆಮ್ಮನವರಿಷ್ಟವೂ
ಅಷ್ಟೆ. ಜನ ತನ್ನ ಐಶ್ವರ್ಯ ಅದು ಎಷ್ಟೆಂದು
ಧಾರಾಳ ಎಷ್ಟೆಂದು ಹೊಗಳಲೆಂದೇ ಅವರು
ಸೊಸೆ ಒಡವೆಯನು ಹೊತ್ತು ನಡೆಯಬೇಕೆನ್ನುವರು.

ಸೊಸೆಯ ಸಂತೋಷ ಅವರಿಗೆ ಬೇಡ. ಸೊಸೆ ಇಲ್ಲ:
ಒಂದು ಕಂಬಕೆ ತಮ್ಮ ಒಡವೆಯೆಲ್ಲವನಿಟ್ಟು
ತೋರಿಸುವ ಮನಸು. ಲಗ್ನದ ಹೊತ್ತು ಮದುವಳಿಗ
ಹುಡುಗಿ ಹಸೆಯೇರುವಳು. ನಮ್ಮ ಅತ್ತಿಗೆ ಬಂದು
ಮುತ್ತೈದೆ ನಿಮ್ಮತ್ತೆ ಬಹುಕಾಲ ತೊಟ್ಟಿದ್ದು
ನೀನೀಗ ತೊಟ್ಟಿರುವ ಮಾಲೆಸರವನು ನಮ್ಮ
ಮಗುವಿಗೀದಿನ ತೊಡಿಸು. ಅವರೇನೊ ಬಂದಿಲ್ಲ.
ಅವರು ತೊಟ್ಟಿದ್ದೊಡವೆ ಸೋಕಿ ಅವರೇ ಬಂದು
ಹರಸಿದಂತಾಗುವುದು ಎಂದರು. ಮದುಮಗಳು,
ನಾನೇನ ಹೇಳುವೆನೊ ಎಂದು, ನನ್ನತ್ತಲೇ
ನೋಡುತಿರುವಳು. ನನಗೆ ಆ ಮಾಲೆ ಆ ಸರವ
ಬೇರೆಯವರಿಗೆ ಕೊಡುವ ಮನಸಿಲ್ಲ. ಅತ್ತೆಮ್ಮ,
ನಿನಗೆ ಕೊಟ್ಟೆನು ಹೊರತು ಬೇರೆಯವರಿಗೆ ಕೊಡಲು
ನಿನಗೇನು ಅಧಿಕಾರ, ಎಂದಾರು. ಹೀಗೆಂದು
ಭಯ. ಹಿಂದು ಮುಂದು ನೋಡಿದೆ. ನಿಮ್ಮ ಅಣ್ಣಯ್ಯ,
ಅಲ್ಲೆ ಇದ್ದವರು, ಕೊಡು ತಪ್ಪೇನು, ಎಂದರು.
ತೆಗೆದು ಹುಡುಗಿಯ ಕರೆದು ತೊಡಿಸಿದೆನು. ಸಂಜೆಯಲಿ
ಒಡವೆಯನು ತಂದು ಕೊಡುವರು ಎಂದು ಕಾದೆನು.
ತರಲಿಲ್ಲ: ಕೇಳಿದೆನು. ಮದುವೆಯೀ ಐದುದಿನ
ನಿನ್ನ ನಿಮ್ಮತ್ತೆಮ್ಮನವರ ಆಶೀರ್ವಾದ
ಹಸಿಮೈಯ ಮೇಲಿರಲಿ ಎಂದರು. ಒಳ್ಳಿತು
ಎಂದು ಸುಮ್ಮನೆ ಇದ್ದೆನಮ್ಮ. ನಾಲ್ಕನೆ ಸಂಜೆ,
ಮಾವನವರಿಗೆ ತುಂಬ ಆಯಾಸವಾಗಿದೆ,
ಎಂದು ಅಲ್ಲಿಗೆ ನಮಗೆ ಸುದ್ದಿಯನು ಕಳುಹಿದರು.
ನಿಮ್ಮ ಅಣ್ಣಯ್ಯ ಊರಿಗೆ ಹೊರಟು ನಿಂತರು.
ಜೋಮಾಲೆ ಸರಕಾಗಿ ನಾನು ಅಲ್ಲೇ ನಿಲಲೆ?
ಏನು ಮಾಡುವುದು ಎಂದರೆ ನಿಮ್ಮ ಅಣ್ಣಯ್ಯ

ನಮ್ಮ ಅಣ್ಣನಿಗೆ, "ಜೋಮಾಲೆ ಕಂಠೀಸರ
ಇಂದು ನಾಳೆಗೆ ಇಲ್ಲಿ ಇರಲಂತೆ. ನಾಳಿದು
ನೀವು ಯಾರಾದರೂ ಅದನು ನಮ್ಮೂರಿಗೆ
ತಂದು ಕೊಡಿ," ಎಂದು ಹೇಳಿದರು. ಆಗಲಿ ಎಂದು
ನಮ್ಮಣ್ಣ ಹೇಳಿದರು. ನಾವಿತ್ತ ಬಂದೆವು.

**ಅಲಮೇಲು**

ಹೌದಂತೆ ಇದ ನನಗೆ ಅಣ್ಣಯ್ಯ ಹೇಳಿದರು.

**ತಿರುಮಳಾ**

ತಾವು ತೌರಿಂದ ತಂದೈಶ್ವರ್ಯ ಇದು ಎಲ್ಲ,
ಇದು ಎಲ್ಲ ತಮ್ಮದು, ತಾವು ಇದ ಎಲ್ಲರಿಗು
ದೊಡ್ಡಮನಸಿಂದ ಕೊಡುತಿರುವವರು, ಮಗ ಸೊಸೆ
ಎಲ್ಲರೂ, ಕೊನೆಗೆ ಯಜಮಾನರೂ, ತಮ್ಮಿಂದ
ಹಿರಿಯರಾದವರು, ಎಂಬದು ನಿಮ್ಮತಾಯವರ
ತಿಳಿವಳಿಕೆ. ಹೀಗೆಂದೆನೆಂದು ಕೋಪಿಸಬೇಡ.
ತೌರುಕೊಟ್ಟೈಶ್ವರ್ಯದೊಳಗೆಲ್ಲ ಜೋಮಾಲೆ
ಕಂಠೀಸರವನವರು ಹೊಗಳುತಲೆ ಇರುವರು.
ಈ ಮಾಲೆ ಕಂಠೀಸರದಮಾತು ರಾದ್ಧಾಂತ
ಆಗುವುದು ಎಂದು ನನಗೇನೊ ಒಳಗೇ ಭಯ.
ಆಗಿಯೇ ಆಯಿತು. ಮನೆಗೆ ಸೇರಲೆ ಇಲ್ಲ,
ಮಾವನವರಿಗೆ ಈಗ ಸೌಖ್ಯವಾಗಿದೆ ಎಂದು
ಕೇಳಿ ತಿಳಿಯುತಿದೇವೆ, ಅತ್ತೆಮ್ಮ, "ತಿರುಮಳಾ,
ಎಲ್ಲಿ ಕೊರಳಿನಲಿ ಜೋಮಾಲೆ ಕಂಠೀಸರ
ಕಾಣಲಿಲ್ಲ," ಎಂದು ಕೇಳಿದರು. ನಾ ನಿಮ್ಮ
ಅಣ್ಣಯ್ಯನನು ನೋಡಿದೆನು. ಅವರು ತಾಯಿಗೆ
"ಪೆಟ್ಟಿಗೆಯಲಿದೆಯಮ್ಮ" ಎಂದರು. ಅತ್ತೆಮ್ಮ
ಸ್ವಲ್ಪ ಸಂದೇಹದಲಿ ನನ್ನತ್ತ ನೋಡಿದರು;

ಆಕ್ಷಣಕೆ ಸುಮ್ಮನಾದರು. ಒಂದು ಅರೆಗಳಿಗೆ
ಬಿಟ್ಟು, ಜೋಮಾಲೆ ಕಂಠೀಸರವ ಕೊರಳಿನಲಿ
ಹಾಕಿಕೊಳ್ಳದೆ ಏಕೆ ಪೆಟ್ಟಿಗೆಗೆ ಸೇರಿಸಿದೆ,
ಎಂದು ಕೇಳಿದರು. ಯಜಮಾನರಾಡಿದ ಮಾತು
ಸುಳ್ಳು ಎನ್ನಲೆ ಒಳ್ಳಿತಲ್ಲ; ನಿಜವೆನ್ನಲೇ
ಬಾಯಿಬರಲಿಲ್ಲ. ನಿಮ್ಮಣ್ಣಯ್ಯ ಅದು ಏಕೆ
ಹಾಗೆ ಹೇಳಿದ್ದರೋ ನಾ ಕಾಣೆ. ಆ ಮಾತು
ಸರಿಯಲ್ಲವೆಂಬುದನು ಅವರೆ ಹೇಳಲಿ, ಎಂದು
ನನಗೆ ಮನಸಿನಲಿ. ಏನೂ ಅರ್ಥವೇ ಇಲ್ಲ,
ಏನೊ ಗೊಣಗಿದ ರೀತಿ ಮಾಡಿ, ಬೇರೆಯಕಡೆಗೆ
ಹೋದೆ. ಬಿಡುವರೆ ಅತ್ತೆ? ಇಲ್ಲಿ ಬಾ ತಿರುಮಳಾ,
ಎಂದು ಕೂಗಿದರು. ನಾ ಹೋಗಿ ಎದುರಲಿ ನಿಂತೆ.
"ನೀನು ನನ್ನೊಡವೆಯನು ನಿಮ್ಮಣ್ಣನಿಗೆ ಕೊಟ್ಟು
ಬರಿಯ ಕೈಯಲಿ ಬಂದಿರುವೆ. ಹೌದೊ ಅಲ್ಲವೋ?"
ಎಂದು ಕೇಳಿದರು. ನಡೆದಿದ್ದ ಸಂಗತಿಯೇನು
ಅದ ನಾನು ತಿಳಿಸಿದೆನು. ಅತ್ತೆಮ್ಮ, "ಇದು ಸುಳ್ಳು.
ತೌರಜನ ಬಡವರು. ಇದೆ ಸಮಯ ಎಂದವಳೆ
ಸರ ಮಾಲೆ ಎರಡನೂ ನಿಮ್ಮಣ್ಣನಿಗೆ ಕೊಟ್ಟು
ಈ ಮಾತ ಮುಚ್ಚಿಡಲು ಗಂಡನಿಗೆ ಕಲಿಸಿರುವೆ.
ತಾ ನನ್ನ ಜೋಮಾಲೆ; ತಾ ಈಗಲೇ ನನ್ನ
ಕಂಠೀಸರ," ಎಂದು ಮೊರೆದರು. ಮಗ ಬಂದು
ಏನೊ ಹೇಳಲು ನೋಡಿದರು. ತಾಯಿ ಬಿಡಲಿಲ್ಲ:
"ನೀನೊಬ್ಬ ಗಂಡಸೆ? ಹೆಂಡತಿಗೆ ಭಯಪಟ್ಟು
ಅವಳು ಕಲಿಸಿದ ಸುಳ್ಳ ಹೇಳಿ ತಾಯಿಗೆ ಮೋಸ
ಮಾಡುವನು? ಹೋಗು ಈ ಪೊಳ್ಳುಮಾತಿಗೆ ಏನು?"
ಎಂದು ಒದರಿದರು. ನಿಮ್ಮಣ್ಣಯ್ಯ ಆಮೇಲೆ
ನನಗೆ, "ಏನಿದ್ದರೂ ಮಾತು ಗಂಡಸಿಗಿರಲಿ,

ನನಗೇಕೆ, ಎನ್ನುವುದಬಿಟ್ಟು ನೀನೇಕಲ್ಲಿ
ಒಡವೆಯನು ಬಿಟ್ಟು ಬಂದೆವು ಎಂದು ಹೇಳಿದೆ?"
ಎಂದು ಕೇಳಿದರು. ಸರಿಯಲ್ಲ! ಒಳಿತಾಯಿತು
ಎಂದು ನಾ ಸುಮ್ಮನಾದೆನು. ಒಡವೆ ಬರುವುದು,
ಆಗ ಎಲ್ಲರಿಗೂ ಸಮಾಧಾನವಾಗುವುದು,
ಎಂದಿರಲು ನಾಲ್ಕುದಿನ ಐದುದಿನ ಆರುದಿನ
ನಮ್ಮಣ್ಣ ಒಡವೆಯನು ತರುವುದನು ಹಾರೈಸಿ
ದಿನದಿನವನೆಣಿಸಿದೆನು; ಒಡವೆಯೋ ಬರಲಿಲ್ಲ.
ಇಲ್ಲಿ ನಿಮ್ಮಣ್ಣಯ್ಯ ಜ್ವರದಿಂದ ಮಲಗಿದರು.
ವಾರದಲಿ ಪಂಡಿತರು, ಜ್ವರ ವಿಷಮಿಸಿದೆ, ಎಂದು
ಬಹು ಚಿಂತೆಪಡುತ ಹೇಳಿದರು. ಅಳಿಯಂದಿರಿಗೆ
ಹೀಗಾಗಿರುವುದು ಎಂಬುದ ತಿಳಿಸಿ ಬೇಗನೆ
ಒಡವೆಗಳ ಕಳುಹೆನ್ನು ಎಂದು ನಾನಾಳನ್ನು
ಅಟ್ಟಿದೆನು. ಮಧ್ಯೆ ನಿನಗೂ ಹೇಳಿ ಕಳುಹಿದೆವು.
ನೀ ಬಂದ ದಿವಸವೇ ಆಳು ಸುದ್ದಿಯ ತಂದ:
ನಮ್ಮಣ್ಣ ಮದುವೆಯೆಲ್ಲವ ಮುಗಿಸಿ ಜ್ವರದಿಂದ
ಮಲಗಿಕೊಂಡರು; ಬೇರೆ ಜನದೊಡನೆ ಒಡವೆಯನು
ಕಳುಹಿಸಲು ಭಯ; ತನಗೆ ಗುಣವಾದ ದಿವಸವೇ
ಹೊರಟು ಬರುವುದು ಎಂದು ಕಾದುಕೊಂಡಿಹರಂತೆ.
ನಾವು ಮದುವೆಗೆ ಹೊರಟ ಹೊತ್ತು ಒಳಿತಲ್ಲೆಂದು
ನನಗೆ ಕಂಡಿದೆ. ಬೇಡವೆಂದ ಕಂಠೀಸರ
ಜೋಮಾಲೆ ಕೊರಳಸೋಕಿದಗಳಿಗೆ ವಿಷಗಳಿಗೆ.
ನಾನು ಕೆಟ್ಟವಳಾದುದಿರಲಿ; ನಿಮ್ಮಣ್ಣಯ್ಯ
ಸುಳ್ಳೊಂದ ನುಡಿದರು, ಜ್ವರದಿಂದ ಮಲಗಿದರು;
ಇದೊ ಈಗ ಕಣ್ಮುಚ್ಚಿಕೊಂಡು ಮುಗಿಸಿರುವರು.
ಅತ್ತೆಮ್ಮ ಹಾಸಿಗೆಯ ಬಳಿ ದಿನಕೆ ಹತ್ತುಸಲ
ಒಡವೆಗಳ ಮಾತೆತ್ತಿ, ಮಗ ಹೇಡಿ ಮುಟ್ಠಾಳ,

ಸೊಸೆಗೆ ತೌರೇ ಹೆಚ್ಚು, ಹೊಕ್ಕಮನೆ ಬೇಕಿಲ್ಲ,
ಎಂದು ನಾಲಿಗೆ ಸೋಲುವಂತೆ ಬೈದರು ತಾಯಿ.
ಒಡವೆಯನು ಕಳೆದುಕೊಂಡವರು ಬೈದರು. ಬಿಡು.
ಅದರಲ್ಲಿ ತಪ್ಪೇನು ? ಯಾರಾದರೂ ಅಷ್ಟೆ !
ನಮ್ಮಣ್ಣ ಈದಿನವೊ ನಾಳೆಯೋ ಒಡವೆಯನು
ತರುವರು. ತರದೆ ನಿಲ್ಲುವುದಿಲ್ಲ. ಮನೆಯಳಿಯ
ಮಲಗಿರುವರೆಂಬುದನು ಬೇರೆ ಕೇಳಿರುವರು.
ಬಂದಾಗ ಒಡವೆಗಳನತ್ತೆಮ್ಮನವರಿಗೆ
ಮರ್ಯಾದೆಯಿಂದ ಒಪ್ಪಿಸಹೇಳು....

ಅಲಮೇಲು

ಈ ಮಾತ
ನೀ ಹೇಳಬಹುದಲ್ಲ ತಿರುಮಳಾ.

ತಿರುಮಳಾ

(ಸ್ವಲ್ಪತಡೆದು ಅವಳನ್ನು ಸೆಟ್ಟ ನೋಟದಿಂದ ನೋಡಿ)

ಅಮ್ಮಲ್ಲು
ನಾನು ನಿಮ್ಮಣ್ಣಯ್ಯನೊಡನೆ ಈ ಕಟ್ಟೆಯನು
ಸುಡಲುಹೋಗುವೆನು.

ಅಲಮೇಲು

ಏನೆಂದೆ ? ಏನೆಂದೆ ?
(ಅವಳ ಮುಖವನ್ನು ನೋಡಿ ಅರ್ಥವನ್ನು ಗ್ರಹಿಸಿ)
ಸಹಗಮನ ಮಾಡುವೆಯ ?
(ತಿರುಮಳಾ ಹೌದು ಎಂದು ಮಾಡಿದ ಸನ್ನೆಯನ್ನು ತಿಳಿದು)

ಅಯ್ಯೊ ಇನ್ನೇನುಗತಿ
ಅಣ್ಣಯ್ಯ ! ಅಯ್ಯೊ, ನನಗಿನ್ನೆಲ್ಲಿ ಅಣ್ಣಯ್ಯ !
ಓ ಅಮ್ಮ, ಅಪ್ಪಾಜಿ, ಬೇಗಬನ್ನಿರಿ ; ಬೇಗ ;

ಅತ್ತಿಗೆಯನುಳಿಸಿ; ಬೇಗನೆ ಬನ್ನಿ; ಅಪ್ಪಾಜಿ,
(ಎಂದು ಮೊರೆಯಿಡುತ್ತಾ ಒಳಕ್ಕೆ ಹೋಗುವಳು.)

**ತಿರುಮಳಾ**

ಶ್ರೀನಿವಾಸಾ ವೆಂಕಟಾಚಲಪತೀ ನೀನೆ
ಧೈರ್ಯವನು ಕೊಡು; ನನ್ನ ಕೈಹಿಡಿದು ಕಾಪಾಡು.
ಅರುಳಾಳನಾಥ, ಜೊತೆಗಿರು, ನನ್ನ ಕಾಪಾಡು.
ಇಚ್ಛೆಯನು ಕೊಟ್ಟವನು ಅದನು ನಡಸಲು ಮನದ
ನಿಶ್ಚಯವ ಕೊಟ್ಟು ರಕ್ಷಿಸು.

**ಮಾವ**

(ಒಳಗಿಂದ ಬಂದು)

ಏನು ತಾಯಿ ಇದು,
ಅಲಮೇಲು ಹೇಳುವುದು ?

**ತಿರುಮಳಾ**

(ಮಾವನ ಕಾಲಿಗೆ ನಮಸ್ಕಾರಮಾಡಿ ಎದ್ದು)

ಹೌದು ಯಜಮಾನರಿಗೆ
ಜ್ವರ ವಿಷಮಿಸಿತು ಎಂದು ಪಂಡಿತರು ಹೇಳಿದರೆ
ಅಂದು ದೇವರಲಿ ಈ ಹರಕೆಯನು ಮಾಡಿದೆನು.
ಅದನು ನಡೆಸಲು ಈಗ ಅಪ್ಪಣೆಯ ಬೇಡುವೆನು.

**ಮಾವ**

ಹರಕೆ ಮಾಡುವ ಮುನ್ನ ಅಪ್ಪಣೆಯ ಬೇಡದೆ
ಈಗ ಅಪ್ಪಣೆಯ ಬೇಡುವುದೇನು ?

**ತಿರುಮಳಾ**

ಆ ದಿವಸ
ದೈವ ಅವರನು ಉಳಿಸಿಕೊಡಬಹುದು ಎಂದೊಂದು

ಆಸೆಯೂ ಇತ್ತು. ಉಳಿಸದೆ ಬಳಿಗೆ ಕೊಂಡರೆ
ಜೊತೆಗೆ ನಾನೂ ಹೋಗಬೇಕೆಂದು ಎಣಿಸಿದೆನು,
ದೇವರಲಿ ಹರಕೆ ಮಾಡಿದೆನು.

ಮಾವ

ನೀ ಸುಲಭದಲಿ
ಹರಕೆ ಮಾಡಿದೆ ತಾಯಿ. ನಾನಷ್ಟು ಸುಲಭದಲಿ
ಅದನೊಪ್ಪಲಾರೆ.

ತಿರುಮಳಾ

ಹೊಟ್ಟೆಯಲಿ ಹುಟ್ಟಿದ ಒಂದು
ಹೆಣ್ಣುಮಗುವೆಂದು ಇಂದಿನವರೆಗೆ ಸಲಹಿದಿರಿ.
ಈ ಒಂದು ದಿವಸವೂ ಅಂತೆ ಸಂರಕ್ಷಿಸಿ
ನನ್ನ ಈ ಜನ್ಮ ಸಾರ್ಥಕವಾಗುವುದು ಎಂತು
ಅಂತು ಆಶೀರ್ವಾದಮಾಡಿ ಉದ್ಧರಿಸಿರಿ.

ಮಾವ

ಏನು ಸಂರಕ್ಷಣೆ, ಏತರದು ಉದ್ಧಾರ?
ಅತ್ತೆಯಾದಾಕೆ ಯಾವುದೊ ಕೋಪದಲಿ ಒಂದೊ
ಎರಡೊ ಸಲ ಗದ್ದರಿಸಿ ಮಾತನಾಡಿದರೆಂದು
ನೀನು ಜೀವವ ತೆಗೆದುಕೊಳ್ಳುವುದೆ? ನಾನದಕೆ
ಅಪ್ಪಣೆಯ ಕೊಡುವುದೆ?

ಅತ್ತೆ

(ಒಳಗಿಂದ ಬಂದು ಈ ಮಾತನ್ನು ಕೇಳುತ್ತ)

ಹೆದರಿಸುತಲಿರುವಳೊ?
ಸಹಗಮನ ಅಷ್ಟು ಸುಲಭವೆ? ಮಾಡು ನೋಡೋಣ.

**ತಿರುಮಳಾ**

(ಅತ್ತೆಯಕಾಲಿಗೆ ನಮಸ್ಕಾರಮಾಡಿ ಎದ್ದು)

ನಿಮ್ಮ ಆಶೀರ್ವಾದ ಒಂದಿರಲಿ; ಸಹಗಮನ
ಕಷ್ಟವಾಗುವುದಿಲ್ಲ; ಮಾಡುವೆನು.

**ಅತ್ತೆ**

ಜೋಮಾಲೆ
ಕಂಠಿ ನಿಮ್ಮಣ್ಣನಿಗೆ ಇರಲಿ ಎಂದರೆ?

**ತಿರುಮಳಾ**

ಅಣ್ಣ
ಇಂದೊ ನಾಳೆಯೊ ಅದನು ತಂದು ಕೊಡುವರು; ನಿಮ್ಮ
ಒಡವೆ ನಿಮಗೇ ಸೇರುವುದು.

**ಅತ್ತೆ**

ಒಡವೆ ಅವರಿಗೇ
ಇದ್ದುಕೊಳ್ಳಲಿ ಎಂದು ಹೇಳಿದರೆ ಸಹಗಮನ
ಬೇಡ ಅಲ್ಲ?

**ತಿರುಮಳಾ**

ನೀವು ಮನಸು ದೊಡ್ಡದು ಮಾಡಿ
ಒಡವೆ ಅವರಿಗೆ ಇರಲಿ ಎನಲು ಅದು ನಿಮ್ಮಿಷ್ಟ······

**ಅತ್ತೆ**

ಇಲ್ಲದಿದ್ದರೆ ನೀನು ಸಹಗಮನ ಮಾಡುವೆ?

**ತಿರುಮಳಾ**

**ಒಡವೆಗಳು ಅಣ್ಣನಿಗೆ ಇರಲೆಂದರೂ ನಾನು
ಸಹಗಮನ ಮಾಡುವಳೆ.**

**ಅತ್ತೆ**

ಮಾಡುವಳೆ ?

**ತಿರುಮಳಾ**

ಆಗಳೇ,
ಮಾಡುನೋಡೋಣ, ಎಂದಿರಿ ; ಮಾಡುವೆನು ; ನೋಡಿ ;
ಜನ್ಮಸಾರ್ಥಕವಾಗಲೆಂದನುಗ್ರಹಮಾಡಿ.

**ಅತ್ತೆ**

ಇವಳೇನೊ ನಿಜವಾಗಿ ಉಸಿರ ನೀಗುವೆನೆಂದು
ದೃಢಮಾಡಿಕೊಂಡಂತೆ ಕಾಣುತಿದೆ. ಮಕ್ಕಳಿಗೆ
ದಿಕ್ಕಿಲ್ಲವಾಗುವುದೊ ? (ಒಳಕ್ಕೆ ಹೋಗುವಳು.)

**ಅಲಮೇಲು**

(ಈ ವೇಳೆಗೆ ಒಳಗಿಂದ ಬಂದಿರುವಳು)

ಮಕ್ಕಳಿಗೆ ದಿಕ್ಕಿಲ್ಲ ;
ಮನೆಗೆ ಅಪಕೀರ್ತಿ ; ಜೋಮಾಲೆ ಕಂಠೀಸರವೆ
ದೊಡ್ಡದಾಯಿತು, ಮಾಲೆ ಸರವ ಕಳೆದುದಕಾಗಿ
ಸೊಸೆಯ ಕೊಂದರು, ಎಂದು ಜನ ಆಡಿಕೊಳ್ಳುವುದು.

**ತಿರುಮಳಾ**

ಇದೊ ಕೇಳು, ಅಮ್ಮಲ್ಲು ; ಮಾಲೆ ಸರಗಳ ಮಾತು
ಗಳಿಗೆ ಹಿಂದಿನಮಾತು ; ಅದ ಈಗ ಹೇಳದಿರು.
ಆಗ ಅತ್ತೆಗೆ ನನಗೆ ಮಾಲೆ ಸರಗಳಿಗಾಗಿ
ಜಗಳ ಆಯಿತು ಉಂಟು. ಅದ ಈಗ ಮರೆತಿಹೆನು.
ಆ ಮಾತು ಸಂಸಾರ. ಆ ಕೋಪತಾಪಗಳು
ಮುಕ್ತಿ ಬೇಡುವ ಮನಕೆ ಸರಿಯಲ್ಲ. ನನಗೀಗ
ಅದು ಒಂದು ಹಳೆಯ ಕಂತೆಪುರಾಣ ; ಯಾವುದೋ

ಪೂರ್ವಜನ್ಮದ ಬಾಳಿನಂತೆ ಮಸಕಾಗಿದೆ.
ಈಗ ಅತ್ತೆಮ್ಮ, ನಾ ಮದುವೆಯಲಿ ಹಸೆಯೇರಿ
ನಿಂದ ಹೊತ್ತಿನಲಿ ಹರಸಿದರಲ್ಲ, ಅದೆ ಅತ್ತೆ.
ಆಗ ಈ ಲೋಕದಲಿ ಮಗನೊಡನೆ ಬಾಳೆಂದು
ಕರೆದುಕೊಂಡರು; ಈಗ ಸ್ವರ್ಗದಲಿ ಮಗನೊಡನೆ
ಬಾಳು ಹೋಗೆಂದು ಕಳುಹುತಲಿಹರು. ಕಂಡೆಯಾ?
ಅಂದು ಸೊಸೆಯಾದ ನಾ ಮತ್ತೊಮ್ಮೆ ಮದುಮಗಳು.

**ಅಲಮೇಲು**

ಸುಡುಗಾಡು ಮದುವೆ ಮನೆ!

**ತಿರುಮಳಾ**

ಅದು ತಪ್ಪು ಮಾತಲ್ಲ.
ನೆಲದಿ ಬಾಳುವ ಜನರ ಸುಡುಗಾಡು ನನ್ನಂಥ
ಜೀವನಕೆ ಮದುವೆ ಮನೆ. ಕೈಹಿಡಿದ ಉಸಿರೊಡನೆ
ದೇವಲೋಕಕೆ ಸಾರಬೇಕಲ್ಲ: ಅದು ಹೊರತು
ಬೇರೆ ಯಾವುದು ದಾರಿ? ಉಳಿದವರ ಸುಡುಗಾಡು
ನನಗೆ ಮದುಮನೆ; ಅಂತೆ ಚಿತೆಯೆ ಹಸೆಮಣೆ; ಗಂಡ
ಒಪ್ಪಿ ಒಡಲನು ಅಪ್ಪಿಕೊಂಬ ಹೊಸ ಹಾಸಿಗೆ;
ನನ್ನ ನಿನ್ನಣ್ಣಯ್ಯನೊಡನೆ ಹರಿಸನ್ನಿಧಿಗೆ
ಒಯ್ಯುವ ವಿಮಾನ. ಛೆ! ಹುಚ್ಚಿ, ಅಳುವೆಯ ಇದಕೆ?
ಅಂದು ಶೋಭನದ ದಿನ ಅಷ್ಟೆಲ್ಲ ನಗೆಯಾಡಿ
ಹಾಸ್ಯಮಾಡಿದ ಹುಡುಗಿ ಈ ಶೋಭನದ ದಿವಸ
ಕಣ್ಣೀರ ಹಾಕುವುದೆ? ಹೋಗು ಅಣ್ಣಯ್ಯನಿಗೆ
ಸ್ನಾನಮಾಡಿಸು; ವಸ್ತ್ರಹೊದಿಸು; ಹೂವನು ಮುಡಿಸು.
ನಾನಿಲ್ಲಿ ಶೃಂಗಾರವಾಗುವೆನು. ಹೋಗಮ್ಮ;
ತಡಮಾಡಬೇಡ; ಲಗ್ನದ ಹೊತ್ತು ಮಿಂಚೀತು.

**ಅಲಮೇಲು**

ಅಣ್ಣಯ್ಯ ಹೋಗಿ ಮನೆ ದುಃಖದಲಿ ಮುಳುಗಿದೆ.
ಈಗ ನೀ ಸರಸ ಆಡುತಲಿರುವೆ ತಿರುಮಳಾ.
ನಾ ಹುಚ್ಚೊ ನೀ ಹುಚ್ಚೊ?

**ತಿರುಮಳಾ**

ಕೇಳು ನನ್ನಮ್ಮಲ್ಲು,
ನಿನಗೆ ಅಣ್ಣಯ್ಯ ಹೋಗಿರುವರು. ಇನ್ನವರು
ನಿನಗಿಲ್ಲ. ನಾನು ಅವರೊಡನೆಯೇ ಹೋಗುವಳು.
ನೀನು ಅಳಬೇಕು ಸರಿ. ನಾನು ನಗುತಿರಬೇಕು.
ಇನ್ನೊಂದು ಮಾತು ಅಮ್ಮಲ್ಲು. ಹರೆಯದ ಹೆಣ್ಣು
ಸತಿಯಾಗಿ ಸಹಗಮನ ಮಾಡಿದರೆ, ಅವಳ ಮನೆ,
ಅವಳ ಹೆತ್ತವರಮನೆ, ಸುತ್ತೆಲ್ಲ ದೇಶವೂ,
ನೂರುವರುಷದ ದಿವಸ ಸುಖದಿ ಬಾಳುವುದಂತೆ.
ಮಳೆ ಕಾಲಕಾಲದಲಿ ಸುರಿದು ಕೆರೆಬಾವಿಯಲಿ
ನೀರು ಇಂಗದೆ ಗದ್ದೆ ಹೊಲ ಎಲ್ಲ ಬೆಳೆಯಾಗಿ
ನೆಲದ ಹಸುರೊಣಗದಿರುವುದು. ಗೋವು ಕರು ಎಲ್ಲ
ಆನಂದದಿಂದಿದ್ದು ಜನರ ಮನೆಯಲಿ ಹಾಲು
ಬೆಣ್ಣೆ ಮೊಸರು ಸಮೃದ್ಧಿಯಾಗುವವು. ಗ್ರಾಮದಲಿ
ರೋಗರುಜಿನಗಳಿಲ್ಲ; ಬೇಸರಾಸರು ಇಲ್ಲ;
ಸರ್ವರೂ ಕ್ಷೇಮದಿಂದಿರುವರು. ಒಂದುಸಿರು
ತಾನು ಮಾಡುವುದ ಮಾಡಿದರೆ ಮನೆ ಮಕ್ಕಳಿಗೆ,
ಅತ್ತೆ ಮಾವನಿಗೆ, ಅತ್ತಿಗೆ ಅಣ್ಣ ಚಿಕ್ಕಪ್ಪ
ಉಳಿದೆಲ್ಲ ಬಂಧು ಜನಗಳಿಗೆ, ದೇಶಕೆ, ಇಷ್ಟು
ಶುಭವಾಗುವುದು ಎಂದು ಶಾಸ್ತ್ರಹೇಳಿದೆಯಲ್ಲ.
ಇಷ್ಟು ಜನರಿಗೆ ಇಷ್ಟು ಶುಭ ನನ್ನ ಕೈಯಿಂದ
ದೊರೆಯಲೆಂದರೆ ಏನು ಹುಚ್ಚು? ಸಾಯದೆ ಇದ್ದೆ:

ಒಂದು ಮನೆಯಲಿ ಎರಡು ಮಕ್ಕಳನು ಸಾಕುವೆನು,
ಹತ್ತು ಜನರಿಗೆ ಅನ್ನಹಾಕುವೆನು. ಸತಿಯಾದೆ:
ಎಲ್ಲ ಮನೆಯಲಿ ಎಲ್ಲ ಮಕ್ಕಳೂ ನನ್ನಿಂದ
ಸುಖವಾಗಿ ಬಾಳುವರು; ಹತ್ತು ಸಾವಿರಮನೆಯು
ಎಷ್ಟೊ ಸಾವಿರಮಂದಿ ಭಾಗ್ಯವನು ಕಾಣುವರು.
ಇದು ಬೇಡವೇ ನಮಗೆ?

**ಅಲಮೇಲು**

ಯಾರಿದನು ಹೇಳಿದರು?

**ಪುರೋಹಿತ**

(ಪ್ರವೇಶಿಸಿ) ಏನಮ್ಮ ತಿರುಮಳಾ ನಾವು ಅಂಜಿದ್ದಂತೆ
ಆಗಿಹೋಯಿತು.

**ತಿರುಮಳಾ**

(ಹೌದು ಎಂದು ತಲೆಯಾಡಿಸಿ)

ಶಾಸ್ತ್ರ ನೋಡಿಕೊಂಡಿರುವಿರಾ?

**ಪುರೋಹಿತ**

ಶಾಸ್ತ್ರ ನೋಡುವುದು ಎಷ್ಟರ ಮಾತು? ಗಳಿಗೆಯಲಿ
ನೋಡಿಕೊಳ್ಳುವೆನು. ದುಃಖದ ಹೊತ್ತಿನಲಿ ನೀನು
ದುಡುಕಬಾರದು ಅಷ್ಟೆ. ಗಂಡನೆನ್ನುವ ವಸ್ತು
ನಿನ್ನಂಥ ಚೇತನಕೆ ದೇವರಿಗೆ ಸಮ ಮಿಗಿಲು.
ನಾ ಬಲ್ಲೆ. ಅದು ಹೋದ ವೇಳೆ ಈ ಜೀವವನು
ನೀಗಿಕೊಳ್ಳುವುದೆ ಸರಿ ಎಂದು ತೋರುವುದು ನಿಜ.
ಆದರೇನಂತೆ? ಮನೆಯಿಲ್ಲವೇ? ಹೊಟ್ಟೆಯಲಿ
ನವಮಾಸ ಹೊತ್ತು ಹಡೆದೆರಡು ಮಗು ಇಲ್ಲವೇ?
ಅಣ್ಣಯ್ಯ ದೇವರಡಿಯನು ಸೇರಿದನು: ಇನ್ನು

ಆ ಆತ್ಮ ಹೆಂಡಿರನು ಬಯಸುವುದೆ? ಅವನೆ ಈ
ಎರಡು ಎಳೆಗೂಸಾಗಿ ಈ ಮನೆಯಲಿಲ್ಲವೆ?
ಇವ ನೋಡಿಕೊಳ್ಳುವುದು ಕೂಡ ಪತಿಸೇವೆಯೇ.
ಆಲೋಚಿಸಮ್ಮ; ದುಡುಕದಿರು; ಆಲೋಚಿಸು.

**ತಿರುಮಳಾ**

ಮಕ್ಕಳಿರೆ ಸಹಗಮನ ಮಾಡಕೂಡದು ಎಂದು
ಹೇಳುವುದೆ ಶಾಸ್ತ್ರ ?

**ಪುರೋಹಿತ**

ಇಲ್ಲ.

**ತಿರುಮಳಾ**

ಮಕ್ಕಳಿದ್ದರೂ
ಸಹಗಮನದಧಿಕಾರ ಇದೆ ?

**ಪುರೋಹಿತ**

ಓಹೊ ಇದೆ.

**ತಿರುಮಳಾ**

ನನಗೆ
ಸಹಗಮನದಲಿ ಆಸೆ. ಶಾಸ್ತ್ರವನು ತೆರೆದೋದಿ
ಅದ ನಡಸಿಕೊಡಿರಿ.

**ಪುರೋಹಿತ**

ಒಳ್ಳಿತು ತಾಯಿ; ನಿನ್ನಿಷ್ಟ.
ದೈವೇಚ್ಛೆ ಅಂತಿರಲು ನಾನದನು ತಡೆಯುವೆನೆ?
ಮಾತಾಯಿ ಯಾವಳೋ ಯಾವುದೋ ಕಾಲದಲಿ
ತನ್ನ ಸೌಮಂಗಲ್ಯ ನಿತ್ಯವಾಗಿರಲೆಂದು

ಸಹಗಮನ ಮಾಡಿದಳು. ಅವಳಂತೆ ಸಾವಿರಕೆ
ಹತ್ತು ಸಾವಿರಕೆ ಒಬ್ಬಳು ಇಲ್ಲಿ ಒಂದೊಮ್ಮೆ
ಅಲ್ಲಿ ಇನ್ನೊಂದೊಮ್ಮೆ ಅದೆ ಧರ್ಮವನು ನಡಸಿ
ಸತಿಯೆನಲು ಇದು ಎಂದು ತೋರಿಸುತ ಬಂದಿಹರು.
ಆ ದಾರಿಯಲಿ ನಡೆವ ಧೈರ್ಯ ಬಹುಜನಕಿಲ್ಲ.
ನಿನಗಿಹುದು. ನೀನು ಅದರಲಿ ನಡೆ; ಮಹಾಸತಿ
ಎಂಬ ಕೀರ್ತಿಯ ತಾಳು. ಇದು ಶಾಸ್ತ್ರ ಸಮ್ಮತ.
ಆದರೀ ಕಾರ್ಯದಲಿ ನಿನ್ನ ನಡಸುವ ಮುನ್ನ
ಒಂದು ಸಂದರ್ಭವನು ದೃಢಪಡಿಸಿಕೊಂಬುದು
ನನ್ನ ಸೇರಿದ ಕೆಲಸ.

(ಮಾತನ್ನು ನಿಲ್ಲಿಸುವನು.)

**ತಿರುಮಳಾ**

(ಅವನು ಉದ್ದೇಶ ಪೂರ್ವಕ ಮಾತು ನಿಲ್ಲಿಸಿರುವುದನ್ನು ಗ್ರಹಿಸಿ)

ಏನು ಅದು, ಹೇಳಿರಿ.

**ಪುರೋಹಿತ**

ಈ ಮಹಾಸತಿ ಕರ್ಮವನು ಮಾಡ ಹೊರಟವರು
ಮಧ್ಯೆ ಹಿಂತೆಗೆಯುವುದು ಬಹು ಅಶುಭ; ಬಹು ಹಾನಿ.
ಹರಿ: ಓಂ ಎಂದು ನೀ ಸಹಗಮನ ಸಂಕಲ್ಪ
ನುಡಿಸಿದಾಕ್ಷಣ ನೀನು ನಿನ್ನ ಈ ಒಡಲಿಂದ
ಬೇರೆಯಾದಂತೆ. ಪತಿಯಾದವನು ತೊರೆದಿರುವ
ಆ ಒಡಲು ಎಂತು ನಿರ್ಜೀವ, ಬರಿದೊಂದು ಶವ,
ಅಂತೆ ಈ ಒಡಲೊಂದು ನಿರ್ಜೀವ ಶವವೆಂದು
ನಡೆಯಬೇಕಲ್ಲ.

**ತಿರುಮಳಾ**

ಆಗಲಿ.

**ಪುರೋಹಿತ**

ಸ್ಮಶಾನವ ಸಾರಿ
ಧೈರ್ಯಗೆಡುವುದು, ಚಿತೆಯನೇರಿ ನಾನಿದನೊಲ್ಲೆ,
ಎನ್ನುವುದು ಸತಿಗೆ ಸಲ್ಲದು.

**ತಿರುಮಳಾ**

ಆಣೆಮಾಡುವೆನು.
ಶ್ರೀನಿವಾಸನ ನೆನೆದುಕೊಂಡು ಗಂಡನನಪ್ಪಿ
ಚಿತೆ ನಮ್ಮ ಮಂಚವೆಂದೇ ತಿಳಿದು ಸಾಯುವೆನು.
ನೀವು ಚಿಂತಿಸಬೇಡಿ. ಮಂತ್ರ ಮಂಗಳ ಹಾಡಿ
ನನ್ನ ಪತಿಯೊಡನೆ ಗರ್ಭಾಧಾನ ಮಂದಿರಕೆ
ಕೂಡಿ. ಒಳಗಿನ ತಾಳ ಹಾಕಿಕೊಂಬೆನು. ಕರ್ಮ
ಸರಿಯಾಗಿ ನಡೆಯಲಿ. ಈ ಜೀವ ಆ ಜೀವ
ಜೊತೆಯಾಗಿ ಹರಿಯ ಪಾದವನು ಸೇರುವ ರೀತಿ
ನಡಸಿಕೊಡಿ.

(ಒಳಗಡೆ ಹೋಗುವಳು.)

**ಮಾವ**

(ಒಳಗಿಂದ ಬಂದು)

ಬಂದೆಯಾ, ಶಾಮಣ್ಣ ? ಹಣೆಬರಹ
ಹೀಗಿತ್ತು ನೋಡಿದೆಯ ? ನಕ್ಷತ್ರನಾಮವನು
ಇವನ ಕಿವಿಯಲಿ ಊದಿ ನುಡಿದಂದು, ಇವನ ಬಾಯ್
ನನ್ನ ಕಿವಿಯಲಿ ನನ್ನ ಉತ್ಕ್ರಮಣ ಸಮಯದಲಿ
ನಾರಾಯಣಾ ಎಂದು ನುಡಿದು ನನ್ನನು ಹರಿಯ
ಸನ್ನಿಧಿಗೆ ಕಳುಹುವುದು ಎಂದು ಆಶಿಸಿದೆನು.
ಮುದುಕರಿಬ್ಬರನುಳಿಸಿ ಮಗ ಬಳಿಗೆ ಬರಲೆಂದು
ಮನೆದೇವರಿಚ್ಛೆಯಾಯಿತು. ಕರ್ಮಫಲ ಇಂತು.
ಏನ ಮಾಡುವುದು ? ಪಡೆದುದನುಂಡು ತಣಿಯುವುದು.

**ಪುರೋಹಿತ**

ಎಣಿಸಬಾರದ ದುಃಖಬಂದಿಹುದು. ಬಲ್ಲವರು
ಸಹಿಸಿಕೊಂಡಿರುವಿರಿ. ಇನ್ನು ನಾ ಹೇಳುವುದು
ಬೇರೆ ಏನಿದೆ ?

**ಮಾವ**

ಸಹಿಸಿಕೊಳಲಿಲ್ಲ, ಮಾಡುವುದು
ಬೇರೆ ಏನಿದೆಯಪ್ಪ ? ವೆಂಕಟಾಚಲಪತಿ
ಈ ಮಗನ ಕೊಟ್ಟದಿನ "ಇದು ನೀನು ಕೃಪೆಮಾಡಿ
ನೀಡಿದ ಪ್ರಸಾದ" ಎಂದಾನಂದ ಪಡಲಿಲ್ಲ ?
ನಿಜದಿ ಬಲ್ಲವರೆಂಬ ಮಂದಿ ಮಗ ಹೋದಂದು
ಅದನೂ ಪ್ರಸಾದವೆಂದೇ ಒಪ್ಪಿ ಸವಿಯುವರು.
ತಿಳಿವು ಸಾಲದ ನಾನು ಇದ ಸವಿಯಲಾರೆನು ;
ಸಹಿಸಿಕೊಂಡಿಹೆನು.

**ಪುರೋಹಿತ**

ಕಷ್ಟವನು ಸುಖದಂತೆ ಸವಿ
ಎಂದು ಎಲ್ಲಿಯು ನೇಮಿಸಿಲ್ಲ. ಸುಖವಾದರೂ
ದುಃಖವೇ ಆದರೂ ಅದಕೆ ಜೀವವ ತೆತ್ತು
ಮೂರ್ಛೆ ಹೋಗುವುದು ಸಲ್ಲದು ಎಂದು ನುಡಿದಿಹುದು.
ಮಗನೆಂಬ ವಸ್ತು ಕೈಯಿಂದ ಜಾರಿದ ವೇಳೆ
ಇನ್ನೊಂದು ಚಿಂತೆ ಒದಗುವ ರೀತಿ ಇದೆ. ಅದನು
ತಿರುಮಳಮ್ಮನ ಜೊತೆಗೆ ಮಾತನಾಡುತಲಿದ್ದೆ.

**ಮಾವ**

ಸಹಗಮನ ?

(ಪುರೋಹಿತ ಹೌದು ಎಂದು ತಲೆ ಆಡಿಸುವನು)

ಇಷ್ಟು ಬೇಗನೆ ನಿನಗೆ ಹೇಳಿದಳೆ ?

**ಪುರೋಹಿತ**

ಈಗಲ್ಲ. ವಾರವಾಯಿತು. ಒಂದು ದಿನ ಬಂದು,
ದೈವ ಅಣ್ಣಯ್ಯನನು ಉಳಿಸಿದರೆ ಸಂತೋಷ,
ಅದರಿಚ್ಛೆ ಬೇರೆಯಾಯಿತೆ ತಾನು ಪತಿಯೊಡನೆ
ಚಿತೆಯನೇರುವಳು, ಮಾಸತಿಯಾಗಲುಳ್ಳವಳು,
ಅದಕೆ ತಾನೇನೇನು ಮಾಡಬೇಕೆಂಬುದನು
ಶಾಸ್ತ್ರದಿಂದೋದಿ ತಿಳಿಸಿರಿ, ಎಂದು ಕೇಳಿದಳು.
ಬೇಡವೆಂದರೆ ಒಪ್ಪಲಿಲ್ಲ. ಹಠಮಾಡಿದಳು.
ಶಾಸ್ತ್ರವನು ತೆರೆದು ಎಲ್ಲವನೋದಿ ಹೇಳಿದೆನು;
ಕಿವಿಗೊಟ್ಟು ಕೇಳಿ ಹಿಂದಿರುಗಿದಳು; ಈ ವೇಳೆ
ಆ ಎಲ್ಲ ಶಾಸ್ತ್ರವನು ನಡೆಸುತಿರುವಳು.

**ಮಾವ**

ಆಹ,
ಇಷ್ಟು ದೂರಕೆ ಹಾಯ್ದಿದೆಯೆ ವಿಷಯ? ಸೊಸೆ ಸೊಸೆ
ಎಂಬ ಕನಿಕರ ಅತ್ತೆಗಿಲ್ಲ. ಸೊಸೆಯಾದರೂ,
ಮುದುಕಿ ತನ್ನತ್ತೆ ಗಂಡನ ಹೆತ್ತ ಹಿರಿಯಾಕೆ,
ಎನ್ನಬಹುದಲ್ಲವೆ? ಅದೂ ಇಲ್ಲವಾಯಿತು.
ಪ್ರಾಪ್ತಿ ಎಷ್ಟೋ ಅಷ್ಟೆ. ಮಕ್ಕಳೆರಡೂ ತೀರ
ಎಳೆಯವೇ! ಇವನು ತಬ್ಬಲಿ ಮಾಡಿ ಹೋಗುವಳೆ!
ಅವಕೆ ದಿನ ಬಹುದೆಂತು? ಬಹು ಘೋರ ಆಯಿತೇ!

(ತಿರುಮಲಾ ಸ್ನಾನಮಾಡಿ ಮಡಿಯುಟ್ಟು ಒಡವೆಗಳನ್ನೆಲ್ಲ* ಧರಿಸಿ ಒರಳ ಬಳಿ ಬಂದು ಸ್ವಲ್ಪ ಗಂಧವನ್ನು ತೇಯಲು ಕುಳಿತುಕೊಳ್ಳುವಳು.)

**ಅಲಮೇಲು**

(ಅವಳ ಹಿಂದೆ ಬಂದು)

ಅಪ್ಪಾಜಿ, ತಿರುಮಲಾ ಮಕ್ಕಳನು ಕೈಬಿಟ್ಟು
ಪ್ರಾಣ ಬಿಡುವುದು ಬೇಡ: ನೀವಿದಕೆ ಒಪ್ಪದಿರಿ.

**ತಿರುಮಳಾ**

(ಎದ್ದು ಹಾರಿ ಬಂದು ಅವಳ ಕಾಲಿಗೆ ಬಿದ್ದು)

ನನ್ನಾಣೆ, ನನ್ನಾಣೆ, ನಿಮ್ಮ ಅಣ್ಣಯ್ಯನನು
ಒಬ್ಬೊಂಟಿಯಾಗಿ ಕಳುಹಿಸಬೇಡ. ಜೊತೆಗಿರಲು
ನಾನು ಹೊರಟರೆ ನೀನು ನನ್ನ ತಡೆಯುವುದುಂಟೆ ?
ತಡೆಯೆಂದು ಹಿರಿಯರಿಗೆ ಹೇಳಿ ಕಲಿಸುವುದುಂಟೆ ?
ನನ್ನಾಣೆ, ಅಮ್ಮಲ್ಲು.

(ಎದ್ದು ನಿಂತು)

ಬಾ, ನನಗೆ ಹೂ ಮುಡಿಸು ;
ಶೃಂಗಾರ ಮಾಡಿ ಗಂಡನ ಜೊತೆಗೆ ಕಳುಹಿಸು ;
ನಮ್ಮನಗಲಿಸಬೇಡ ; ಬರುವ ಜನ್ಮಕೆ ನೀನು
ಚಿರಸುಮಂಗಲಿಯಾಗಿ ಸಂಸಾರ ಮಾಡುವೆ.

**ಅಲಮೇಲು**

ಈ ಜನ್ಮ ಇಂತಾಯಿತಲ್ಲ ; ಮುಂದಿನ ಜನ್ಮ
ಎಂತಾಗಲೆಂದು ನಾನದನು ಅಣಿಮಾಡಲಿ ?
ನಿನ್ನ ಕೊಲ್ಲದೆ ನನಗೆ ಮುಂದೆ ಸೌಮಂಗಲ್ಯ
ಇಲ್ಲವಾದರೆ ಅದೇ ಬೇಡ. ನೀ ಸಹಗಮನ
ಮಾಡುವುದ ನಾನೊಲ್ಲೆ.

(ತಿರುಮಳಾ ಒಳಗೆ ಹೋಗುವಳು.)

**ಪುರೋಹಿತ**

ಅಮ್ಮಲ್ಲು, ಮನೆಯ ಸೊಸೆ
ಮನೆಯ ಮಗನೊಡನೆ ಹೋಗುವೆನೆನಲು ನಿಲ್ಲೆಂದು
ತಡೆಯುವುದು ಸರಿಯಲ್ಲ. ಮಕ್ಕಳಿಗೆ ತಾಯಾಗಿ
ಜೀವಿಸಿರುವೆನು ಎನಲು ಪತಿಯೊಡನೆ ಹೋಗೆಂದು
ಕಳುಹುವುದು ಎಷ್ಟು ದೂಷ್ಯವೊ ಅಷ್ಟೆ ದೂಷ್ಯ ಇದು.

ಒತ್ತಾಯದಿಂದ ಸಹಗಮನ ಮಾಡೆನ್ನುವುದು
ನರಹತ್ಯ ; ತನ್ನಿಚ್ಛೆಯಿಂದ ಸತಿಯಾಗುವುದ
ತಡೆದು ನಿಲಿಸಲು ಭ್ರೂಣ ಹತ್ಯ. ಮಕ್ಕಳ ಮಾತ,
ನಾವು ಬಲ್ಲೆವು, ಹೆತ್ತ ಕರುಳು ಕಾಣದೆ ತಾಯಿ ?
ತಿರುಮಳಾ ಬಲ್ಲಾಕೆ. ಅವಳು ಆಲೋಚಿಸಲಿ ;
ತನ್ನ ದಾರಿಯನು ತಾ ನಿಶ್ಚಯಿಸಿಕೊಳ್ಳಲಿ.
ಇರುವೆನೆನ್ನುವಳೆ ಸಂತೋಷ ; ಒಲ್ಲಳೆ, ಇವಳ
ಪಥ ಸುಗಮವಾಗಲೆಂದರುಳಾಳನಾಥನನು
ಬೇಡಿಕೊ ; ದೇವರೆದುರಲಿ ದೀಪ ಹಚ್ಚಿರಿಸು ;
ಹೋಗು.

**ಅಲಮೇಲು**

ಅಯ್ಯೋ ನಾನು ಯಾವ ಶುಭವನು ಬಯಸಿ
ದೇವರೆದುರಲಿ ದೀಪ ಹಚ್ಚಿಡಲಿ ? ಕೈ ಹಿಡಿದ
ಗಂಡನನು ಚಿಕ್ಕಂದು ನುಂಗಿಕೊಂಡೆನು ; ಈಗ
ಅಣ್ಣಯ್ಯನನು ತಿಂದುದಾಯ್ತು ; ಗಳಿಗೆಯ ಮೇಲೆ
ಅತ್ತಿಗೆಯ ಮುಗಿಸುವುದು. ಈ ಪ್ರಾಣ ಹೋಗದೇ,
ಏನು ಮಾಡಲಿ ? ಹೋಗಲಿಲ್ಲ, ಇದ ನೀಗುವ
ಎಂದಾದರೂ ತೋರಬಾರದೇ ? ತೋರದಿದೆ.
ಯಾರು ಸತ್ತರು ಸಮನೆ, ನಾನು ಈ ಲೋಕವನು
ಬಿಡಲಾರೆ, ಎಂದು ಈ ಜೀವ ನಾಚಿಕೆ ಬಿಟ್ಟು
ಹೆತ್ತ ನೆಲವನು ಕಚ್ಚಿಕೊಂಡಿದೆಯೆ !

**ಪುರೋಹಿತ**

ಕಚ್ಚಿರಲಿ ;
ನೀನಿದಕೆ ಸಂಕೋಚ ಪಡಬೇಡ. ಸಾಯುವುದು
ಎಷ್ಟು ಕಷ್ಟವೊ ಅಷ್ಟೆ ಕೆಲವೊಂದು ಹೊತ್ತಿನಲಿ
ಇರುವುದೂ ಕಷ್ಟವೇ ತಾಯಿ. ಇರುವುದು ಕಷ್ಟ ;

ಆದರೂ ಇರಬೇಕು ; ತಾಯ್ತಂದೆ ಕೈಬಿಟ್ಟ
ಮಕ್ಕಳಿಗೆ ತಾಯುಂ ತಂದೆಯುಂ ಆಗಿ ಅವ ಸಲಹಿ
ಮನುಜರನು ಮಾಡಿ ನಿಲ್ಲಿಸಬೇಕು.

**ಅಲಮೇಲು**

ಹೆತ್ತವಳು
ಮಕ್ಕಳನು ತೊರೆವವಳು : ನಾನವರ ಸಾಕುವಳೆ ?
ತಾಯಿ ಕರುಳಿಗೆ ಕರುಣೆ ಇಲ್ಲ ; ನನಗಿರುವುದೆ ?
ನೀವೆ ಹೇಳಿದಿರಲ್ಲ ?

**ಪುರೋಹಿತ**

ಹೇಳಿದೆನು. ಅದು ಹೊರತು
ಬೇರೆ ಹೇಳುವುದಿಹುದು ಕೇಳಕ್ಕ. ಲೋಕದಲಿ
ಹೆತ್ತೊಡಲು ಮಾತ್ರ ತಾಯಲ್ಲ. ಲೋಕದ ಮಾತೆ
ನೂರು ರೂಪವ ತಾಳಿ ಜೀವರಾಶಿಯೊಳಿರುವ
ಒಂದೊಂದು ಜಂತುವನು ಸಾಕುವಳು. ಆ ನೂರು
ರೂಪವೂ ಅವಳೆ, ಅವಳದೆ. ಯಾವ ಜೀವದಲಿ
ಯಾವ ಹೊತ್ತಲೆ ಇರಲಿ ಒಳಗೆ ಅಯ್ಯೋ ಎಂಬ
ಕನಿಕರದ ಕೂಗು ಮೂಡಿತೊ, ಅದೇ ತಾಯ್ ತಾಯಿ.
ಹೆತ್ತ ತಾಯ್ ಎಂಬ ಒಂದೊಡಲಿನಲಿ ಹೊತ್ತಂಗ
ಹಡೆದಂಗ, ಹಿಡಿದು ಎತ್ತಿದ ಅಂಗ, ಹಾಲೂಡಿ
ಹೊರೆದಂಗ, ಇಲ್ಲವೇ ? ಇದರೊಳೊಂದನು ಮಾತ್ರ
ತಾಯ್ ಎಂದು ಉಳಿದವನು ತಾಯಲ್ಲ ಎನ್ನುವೆಯ ?
ತಿರುಮಳಾ ಬಿಟ್ಟು ಹೋಗುವ ಮಕ್ಕಳಿಬ್ಬರನು
ತಬ್ಬಲಿಗಳೆನ್ನುವುದು ಒಂದು ಲೋಕಾಚಾರ.
ನೀನವರ ತಾಯಾಗಿ ಅವರ ಸಂರಕ್ಷಿಸಿಕೊ.
ಇವಳು ಕೈಬಿಟ್ಟರೂ ಅವರು ತಬ್ಬಲಿಯಲ್ಲ.

**(ಎಂದು ಒಳಗೆ ಹೋಗುವನು.)**

**ಅಲಮೇಲು**

ಶಾಮಣ್ಣನೇಕೆ ಅತ್ತಿಗೆ ಜೀವಬಿಡಲೆಂದು
ಆಶೆಪಡುವುದು ?

**ಮಾವ**

ಅವಳ ಆಸೆಯನು ತಡೆಯುವುದು
ನಮಗೆ ಒಳಿತಲ್ಲ ಎನ್ನುವುದವನ ಯೋಚನೆ.
ದೈವೇಚ್ಛೆಯಂತೆ ಆಗಲಿ. ನೀನು ಸುಮ್ಮನಿರು.

(ಒಳಗಿಂದ ತಿರುಮಳಾ ಬರುವಳು. ಹಿಂದೆಯೇ ಅತ್ತೆ)

**ಅತ್ತೆ**

ನನ್ನಮ್ಮ, ತಿರುಮಳಾ, ಹಠಮಾಡಬೇಡಮ್ಮ.
ಗಂಡನಿಲ್ಲದ ಮಗಳು ಮನೆಯಲಿರುವುದ ನೋಡಿ
ಸಹಿಸಲಾರದೆ ಅವಳನವಳತ್ತೆ ಮನೆಯಲೇ
ಇರಲು ಬಿಟ್ಟಿವೆ ! ಈಗ ತಾಯ್ತಂದೆ ಇಬ್ಬರೂ
ಇಲ್ಲದೀ ಎರಡು ತಬ್ಬಲಿ ಮಕ್ಕಳನು ಸದಾ
ನೋಡುತ್ತ ನಾನು ಜೀವವನೆಂತು ಧರಿಸಲೇ ?
ಜನ ಬೇರೆ ಹೇಳುವರು : ಸೊಸೆಯಾದ ಹುಡುಗಿಯನು
ಇದ್ದಷ್ಟು ದಿನ ಗೋಳು ಹುಯ್ದುಕೊಂಡೀ ಅತ್ತೆ
ಮಗ ಸತ್ತನೆಂದೊಡನೆ ಸುಡುಗಾಡಿಗಟ್ಟಿದಳು
ಎಂದು. ಇದಕಿಂತಲೂ ಅವಮಾನ ಇನ್ನೆಂಟಿ ?
ಅಣ್ಣಯ್ಯ ಹೋದ : ನೀನಾದರೂ ನಿಲ್ಲಮ್ಮ;
ಮಕ್ಕಳಿಗೆ ತಾಯಾಗಿ ನಮ್ಮನೂ ಕಾಪಾಡು.
ಮಗ ನೀನೆ; ಸೊಸೆ ನೀನೆ; ಮನೆಗೆ ನೀನೇ ರಾಣಿ.
ಯಜಮಾನಿಯಾಗಿ ಎಲ್ಲರನು ನೀನಾಳಮ್ಮ.
ತೌರಿನಲಿ ನೀ ಕೊಟ್ಟು ಬಂದಿರುವ ಒಡವೆಗಳು
ಅವರಿಗೇ ಇರಲಿ. ಒಡವೆಯ ಮಾತು ಬಹು ಮಾತೆ ?

ಜೋಮಾಲೆ ಕಂಠಿಯನು ನಾನು ಇನ್ನೆಷ್ಟು ದಿನ
ಹಾಕಿಕೊಂಡೇನು? ಎಲ್ಲಾ ಒಡವೆ ನಿನಗಿರಲಿ
ಎಂದಲ್ಲವೇ ನಾನು ಅಷ್ಟು ಮಾತಾಡಿದೆ?
ನಿನ್ನ ಮನಸೋ ದೊಡ್ಡ ಮನಸು. ದಿನ ಬಂದರೂ
ನನಗೆ ದಾನದ ಬುದ್ಧಿ ಬಂದಿಲ್ಲ. ಪ್ರಾಯದಲಿ
ನಿನಗೆ ಈ ದಾನಮಾಡುವ ಬುದ್ಧಿ ಬಂದಿದೆ.
ಈ ಮೊದಲು ಇದು ತಪ್ಪು ಎಂದು ನಾ ಕೂಗಿದೆನು.
ತಿಳಿವಿಲ್ಲ. ಅದ ಮರೆತುಬಿಡು. ಇನ್ನು ನೀನುಂಟು,
ನಿನ್ನ ಮನೆಯುಂಟು. ನಿನ್ನಿಷ್ಟ ಎಂತೋ ಅಂತೆ
ಎಲ್ಲವನು ನಡಸಿಕೊ, ನೋಡಿಕೊ. ಕೋಪವನು
ಬಿಟ್ಟುಬಿಡು. ನನ್ನಮ್ಮ, ಬಾ, ಸಮಾಧಾನದಲಿ
ನಮ್ಮೆಲ್ಲರನು ನೋಡು. ಮಕ್ಕಳನು ಎತ್ತಿಕೊ.
ಹೋದವನ ಕರ್ಮ ಅದು ಏನು ನಡೆಯುವುದಿದೆ
ಅದು ನಡೆದು ಮುಗಿಯಲಿ. ಉಳಿದವರ ದೇವರು
ತನ್ನಿಚ್ಛೆ ಉಳ್ಳನಕ ಸಂರಕ್ಷಿಸುತ ಬರಲಿ.
ಬಾ ತಾಯಿ.

(ತಿರುಮಳಾ ಮಾತನಾಡುವುದಿಲ್ಲ ಕಣ್ಣೀರು ಹಾಕುತ್ತಾ ನಿಂತಿದ್ದಾಳೆ.)

ಮಾವ

ಮುದುಕಿಯಾಗಿರುವ ಅತ್ತೆಯ ಮಾತ
ಕೇಳಮ್ಮ ತಿರುಮಳಾ. ಒಂದು ಸಂಸಾರದಲಿ
ಸೇರಿ ಬಾಳುವ ಜನರು ಒಂದೊಂದು ಹೊತ್ತಿನಲಿ
ಒಬ್ಬೊರೊಬ್ಬರನು ಗದರಿಸಬಹುದು. ಇದು ಏನು
ಬಹು ದೊಡ್ಡ ಸಂಗತಿಯೆ? ಇದನು ಮನಸಿನಲಿಟ್ಟು
ಮನೆ ಮಕ್ಕಳಾದವರು ಛಲ ಸಾಧಿಸುವುದುಂಟೆ?
ಆದುದಾಯಿತು; ಮರೆತುಬಿಡು. ಇನ್ನು ಈ ಮನೆ
ನಿನ್ನ ಮಕ್ಕಳದು ನಿನ್ನದು: ನೀನೆ ನೋಡಿಕೊ.

ಕೊಡುವುದೋ ಬಿಡುವುದೋ ಯಾವುದೂ ಮನೆವಾರ್ತೆ
ನಿನ್ನ ಕೈಯಾಡಳಿತ. ಚಿತೆಯ ಮಾತನು ಬಿಡು.
ಇರು; ನಿನ್ನ ಮಕ್ಕಳನು ನೋಡಿಕೊ.

(ತಿರುಮಳಾ ಸುಮ್ಮನೆಯೇ ಇರುವಳು.)

**ಅಲಮೇಲು**

ತಿರುಮಳಾ,
ಮಗ ಕಣ್ಣುಮುಚ್ಚಿದನೊ, ಅಮ್ಮ ಎಂದೂ ಇಲ್ಲ
ಅಷ್ಟೊಂದು ಮೆದುವಾಗಿ ಹೋಗಿಹರು. ಅಪ್ಪಾಜಿ
ಮೊದಲೆ ಮೆದು, ಇನ್ನೇನು ಹಣ್ಣು ಹಣ್ಣಾಗುವರು.
ಮನೆಗೆ ಸೊಸೆಯಾಗಿ ಬಂದವಳು ಈ ಮುದುಕರನು
ಕೈಬಿಟ್ಟು ದಿಕ್ಕುಗೆಡಿಸುವುದು ತರವೇ ತಾಯಿ?
ಕಲ್ಲಾಗಿರುವ ಮನಸು ಇನಿಸು ಕರಗಲಿ. ಇಕೋ,
ನನ್ನಾಣೆ, ಅಣ್ಣಯ್ಯನಾಣೆ, ಛಲ ಬೇಡಮ್ಮ.

(ಒಳಗಿಂದ ಧ್ವನಿ. ವ್ಯಕ್ತಿ ಕಾಣಿಸುವುದಿಲ್ಲ.)

**ಪಾಟಿ**

ಅಮ್ಮಲ್ಲು, ಅಮ್ಮಲ್ಲು.

(ಮಾವ ಒಂದು ಪಕ್ಕಕ್ಕೆ, ತಿರುಮಳಾ ಒಂದು ಪಕ್ಕಕ್ಕೆ, ಹೋಗಿ ಮರೆಯಾಗುವರು.)

**ಅತ್ತೆ**

ಬಂತು ಈ ಮುದಿಗೂಬೆ.
ಮೂರು ದಿವಸದ ಹಿಂದೆ ಬಂದು, ಮಲಗಿದ್ದವನ
ನೋಡಿ, "ಮುಖ ಹೇಗಾಗಿ ಹೋಗಿದೆ! ಇನ್ನಿವನು
ಬದುಕುತಾನೆಯೆ" ಎಂದು ಘೂಕು ಹಾಕಿತು. ಈಗ
ಇನ್ನೇನ ಹೇಳಬೇಕೋ!

(ಬೆನ್ನು ಬಾಗಿರುವ ಮುದುಕಿ, ಮಾವನ ಚಿಕ್ಕಮ್ಮ, ಕೋಲೂರಿಕೊಂಡು ಮೆಲ್ಲನೆ ಒಳಗೆ ಬರುವಳು.)

**ಪಾಟ**

ಎಲೇ, ಅಮ್ಮಲ್ಲು,
ಎಲ್ಲಿದೀಯೋ?

**ಅಲಮೇಲು**

ಬನ್ನಿ, ಪಾಟಿ, ಇಲ್ಲೆ ಇದೇನೆ.

**ಪಾಟ**

ನನಗೆ ಕಣ್ಣೇ ಕಾಣಲಿಲ್ಲವ್ಮ. ಅಣ್ಣಯ್ಯ
ಹೋಗಿಯೋ ಬಿಟ್ಟ ನೋಡಿದೆಯ? ನಾ ಹೇಳಿದೆನೆ,
ಜ್ವರ ತೀರ ವಿಪರೀತವಾಗಿ ಹೋಯಿತು, ಹುಡುಗ
ಇನ್ನುಳಿಯುತಾನೆಯೋ, ಎಂತ. ಜವರಾಯನಿಗೆ
ಕಣ್ಣಿಲ್ಲವಮ್ಮ. ಕಣ್ಣಿಲ್ಲ; ಕರುಳೂ ಇಲ್ಲ.
ಪಕ್ಕದಲೆ ಮನೆ; ನಾನೆ ಇದ್ದೆ; ಹಣ್‌ಹಣ್ ಮುದುಕಿ;
ಇವಳು ಇನ್ನೂ ಯಾಕೆ ಇದ್ದಾಳೆ ಎನ್ನುತಿದೆ
ಊರು ಊರೇ. ಇಷ್ಟು ಹತ್ತಿರಕೆ ಬಂದವನು
ನಾನು ಪಕ್ಕದ ಮನೆಯಲಿರುವುದನು ಕಾಣನೇ?
ನೋಡವನ ಮಾಮೂಲ. ಇಂಥ ಮುದುಕಿಯ ಬಿಟ್ಟು
ಹರೆಯದವನನು ಕೊಂಡು ಹೋದನೇ. ಉಂಬವನ
ರುಚಿ. ಎರಡು ಎಲೆಯಲೂ ಬಡಿಸಿದೆ; ಒಂದರಲಿ
ಉಪ್ಪು, ಒಂದರಲಿ ಸೀ; ಯಾವುದಿಷ್ಟವೊ ಅದನು
ತಿನ್ನುವನು, ನಂಜಿಕೊಳ್ಳುವನು. ನನ್ನಂಥವರು
ರುಚಿಯಿಲ್ಲ ಅವನಿಗೆ; ಹರೆಯದವರೇ ಬೇಕು.

**ಅತ್ತೆ**

ಎಂಥ ಹೊತ್ತಲಿ ಬಂದು ಎಂಥ ಮಾತನು ಆಡಿ
ಹೊಟ್ಟೆ ಉರಿಸುತಿದಾಳೆ! ಯಾಕೆ ಬಂದಳು ಇವಳು?
ಬಾಯೆಂದು ಯಾರು ಕರೆದರು?

**ಪಾಟಿ**

ಏನು ಹೇಳುವಳೆ
ನಿಮ್ಮಮ್ಮ? ಪಾಪ. ಯಾರೋ ಮನೆಯ ಹಿರಿಯರು
ಪುಣ್ಯಮಾಡಿದ್ದರು: ನೀನೊಂದು ಹೆಣ್ಣು ಮಗು,
ಇದು ಒಂದು ಗಂಡು, ಎರಡನು ಹೆತ್ತುಕೊಂಡಳು.
ನಿನ್ನ ಪಾಡಾಗಲೇ ಆಯಿತು. ಈಗ ಮಗ
ಕಣ್ಮುಚ್ಚಿಕೊಂಡ. ಹೆತ್ತರೆ ಬಂತೆ? ಮಕ್ಕಳು
ಸುಖವಾಗಿ ನೂರುಕಾಲಕೆ ಬಾಳಿವರೆ ಹೆತ್ತ
ಹೊಟ್ಟೆಗೂ ಸಂತೋಷ. ಕೇಳಿ ಬರಬೇಕಲ್ಲ.

**ಅತ್ತೆ**

ನಾ ಕೇಳಿ ಬರಲಿಲ್ಲ. ಇವಳು ಸೌಭಾಗ್ಯವನು
ಕೇಳಿ ಬಂದಳು, ನೂರು ವರ್ಷಕೂ ಅವಲಕ್ಕಿ
ಉಪ್ಪಿಟ್ಟು ಮುಕ್ಕುವೆನು, ನನ್ನ ಉಳಿಸಿರು, ಎಂದು.
ಕಣ್ಣಿಲ್ಲ, ಕಿವಿಯಿಲ್ಲ, ಕಾಲಿಲ್ಲ, ಬೆನ್ನಿಲ್ಲ;
ಬಾಯಿ ಒಂದಿದೆ, ಕುಲ್ಲು ಕುಲ್ಲು ಮನಸೊಂದಿದೆ;
ತೋರಿದದ ಆಡಿ ಮುಗಿಸುವ ಕಟುಕು ಒಂದಿದೆ.
ಇಂಥವರನಿಟ್ಟು ಮಕ್ಕಳನು ಕೊಂದಿದೆ ದೈವ.
ಏನು ಹೇಳುವುದು! ಈ ಗೂಬೆಯನು ಹೋಗೆನ್ನು
ಅಮ್ಮಲ್ಲು. ಇವಳು ಹೇಳುವ ಮಾತನಿನ್ನೆಷ್ಟು
ಕೇಳಿ ಸಂತೋಷಪಡುವುದು?

**ಅಲಮೇಲು**

ಹೇಳಿಕೊಳ್ಳಲಿ;
ನೀ ಸುಮ್ಮನಿದ್ದು ಬಿಡು ಅಮ್ಮ. ಬಾಯ್ತೆರೆದರೆ ವೋ
ರೊಚ್ಚು. ಬೇಕಾದ ಮಾತನು ಆಡಿಹೋಗಲಿ.
ಮಾತು ಕಿವಿಗೇ ಬೀಳಲಿಲ್ಲ ಎಂದಿದ್ದು ಬಿಡು.

ಪಾಟ

ಏನು ಹೇಳಿದಳೆ ನಿಮ್ಮಮ್ಮ?

(ಅತ್ತೆ ಬೇಸರದಿಂದ ಹೊರಟುಹೋಗುವಳು.)

ಅಯ್ಯೋ ಪಾಪ.
ಹೆತ್ತಹೊಟ್ಟೆಯ ದುಃಖ; ಏನೆಂದು ಸಹಿಸುವುದು?
ಹೆತ್ತವಳ ದುಃಖ, ಕೈ ಹಿಡಿದವಳ ದುಃಖ, ಇವು
ಎರಡಮ್ಮ ಸಹಿಸಬಾರದ ದುಃಖ. ಎಳೆ ಹರೆಯ;
ಒಂದು ಮಗು; ನಾನು ಗಂಡನ ಕಳೆದುಕೊಂಡೆನು.
ಪ್ರಾಣ ಬಿಡಬೇಕು. ಮಗುವಿಗೆ ಗತಿ? ಅದು ಹೇಗೊ
ಸಾಯಲಿಲ್ಲಮ್ಮ. ಸಿಂತೆ. ಸಾಯುವುದು ತಾನೆ
ಸುಲಭವೇ? ಜೋಯಿಸರ ಅಕ್ಕ ವರಲಕ್ಷಮ್ಮ
ತಾನೇ ಮಹಾಪತಿವ್ರತೆಯೆಂದು ಸಹಗಮನ
ಮಾಡುತೇನೆಂದು ಹೋದಳು. ಮಕ್ಕಳಿರಲಿಲ್ಲ.
ಜೀವನಾಂಶನ ಕೇಳಬಹುದಲ್ಲ. ಮೈದುನ
ಈ ಜ್ಯೇಷ್ಠೆ ಹೋಗಲೆಂದೇ ಅವಳ ಉಬ್ಬಿಸಿದ.
ಮಂತ್ರವೋ ತಂತ್ರವೋ ಮಾಯವೋ, ಏನೇನು
ಆಗಬೇಕೋ ಎಲ್ಲ ಆಯಿತು. ವರಲಕ್ಷ್ಮಿ
ಅಷ್ಟು ಹೊತ್ತೂ ಹೇಗೊ ತಡೆದುಕೊಂಡಿದ್ದಳು.
ಚಿತೆಯ ಮೇಲೇರು ಎಂದರು: ಹೇಗೊ ಏರಿದಳು.
ಅಯ್ಯೊ ಅಯ್ಯೋ ಎಂದು ಕೂಗಿಕೊಂಡಲ್ಲಿಂದ
ಧುಮಿಕಿಯೋ ಬಿಟ್ಟಳು. ಇನ್ನು ಮಾಡುವುದೇನು?
ಶಾಸ್ತ್ರ ಹೇಳಿರುವ ಪ್ರಾಯಶ್ಚಿತ್ತ ಯಾವುದೋ
ಇದೆಯಂತೆ, ಅದನು ಮಾಡಿಸಿ ಎಲ್ಲ ಕರ್ಮವನು
ನಡಸಿದರು. ನನ್ನಂತೆ ಅವಳಿಗೂ ಭೂಮಿಯಲಿ
ಅರಳಿಟ್ಟು ಅವಲಕ್ಕಿ ಋಣ ಇದೆ. ಅದ ಮುಗಿಸಿ
ಅಲ್ಲವೇ ಸಾಯುವುದು? ಅಮ್ಮಲ್ಲು, ತಿರುಮಳಾ.

ಸಹಗಮನ ಮಾಡುತಾಳೆಂತ ಯಾರೋ ಈಗ
ಹೇಳಿದಂತಿತ್ತು; ಹೌದೇ?

(ಅಲಮೇಲು ಸುಮ್ಮನಿರುವಳು.)

ಯಾಕೆ? ಮಾತಾಡು
ಮುಚ್ಚುಮರೆಯೇನು?

(ಅಲಮೇಲು ಮುದುಕಿಯ ಬಾಯಿಗೆ **ಕೈ** ಅಡ್ಡ ಇಟ್ಟು **ಮಾತು ಸಾಕು** ಎಂದು ಸನ್ನೆ ಮಾಡುವಳು.)

ಯಾಕೇ? ನಾನು ಹೇಳುವುದು
ತಪ್ಪೇನು? ಊರೆಲ್ಲ ಎದುರೊಂದು ಹಿಂದೊಂದು
ಆಡುವುದು. ನಾನು ಏನಿದ್ದರೂ ಎದುರಿನಲಿ
ಹೇಳಿ ಬಿಡುವಳು. ಇಷ್ಟವಿದ್ದಿತೇ ಕೇಳಿರಿ;
ಇಷ್ಟವಿಲ್ಲವೆ ಬಿಡಿರಿ. ನೆಂಟರಲಿ ಕಪಟವೆ?
"ಗಂಡನಿದ್ದಾಗಲೇ ಈ ಅತ್ತೆ ನನ್ನನ್ನು
ಬಾಳಗೊಡಲಿಲ್ಲ. ಅವನೂ ಕಣ್ಣು ಮುಚ್ಚಿದ.
ಮುಂದೇನುಗತಿ?" ಎಂದು ಎಳೆಯದಿನದಲಿ ನಾನು
ಯೋಚಿಸಿದೆ. ಈಗವಳು ಈ ಮಾತ ಹೇಳಿದರೆ
ಏನಮ್ಮ ಆಶ್ಚರ್ಯ? ನಿಮ್ಮಮ್ಮನಿಗೆ ಹೇಳು.
ಮಗನೆ ಹೋಗಿರುವಾಗ ಸೊಸೆ ಹೋದರೇನಂತೆ
ಹೋಗಲಿ, ಎಂದಾಳು. ಸೊಸೆಯೇನು? ಮಗಳೇನು?
ಹುಡುಗಿ ಕೋಪದಲಿ ಸಹಗಮನಮಾಡುವ ಎಂದು
ಚಿತೆಯೇರಿ ನಮ್ಮ ವರಲಕ್ಷ್ಮಮ್ಮ ಮಾಡಿದಳೆ
ಹಾಗೆಲ್ಲಿಯಾದರೂ ಮಾಡಿದಳೊ ನಗೆಗೇಡು.
ಜಗಳವೇನಿದ್ದರೂ ಸಹಿಸಿಕೊಂಡಿರುವುದೇ
ಚೆನ್ನ. ಸೊಸೆ ಅತ್ತೆ ಎಂದರೆ ಜಗಳವಿಲ್ಲದೆ
ಯಾರಿರುವರಮ್ಮ ಲೋಕದಲಿ? ನಾ ಬರಲೇನೆ?
ದುಃಖ ಒದಗಿತು. ಸಮಾಧಾನ ಹೇಳೋಣೆಂದು
ಕೈಯಲಾಗದೆ ಇದ್ದರೂ ಬಂದೆನೇ ತಾಯಿ.

ನಿನ್ನ ಕೈಯಲಿ ಒಂದು ಮಾತನೂ ಆಡಿಸದೆ
ನಾನೆ ಎಲ್ಲಾ ಮಾತನೂ ಆಡಿ ಮುಗಿಸಿದೆ.
ತಿರುಮಳಮ್ಮನಿಗೆ ಹೇಳಮ್ಮ. ಚಿನ್ನದ ಗೊಂಬೆ
ಎರಡು ಹೊಟ್ಟೆಯಲಿ ಹುಟ್ಟವೆ. ಗಂಡ ಹೋದ, ನಿಜ.
ಮಕ್ಕಳಿಹವಲ್ಲಮ್ಮ. ಅವ ಸಾಕಬೇಕಲ್ಲ.
ನಾನು ಹೇಳಿದೆನೆಂದು ಹೇಳು. ನಾ ಬರಲೇನೆ,
ಅಮ್ಮಲ್ಲು? ಅಯ್ಯೊ ಚಿಕ್ಕಂದೆ ಕಣ್ಮುಚ್ಚಿದ
ಅಣ್ಣಯ್ಯ; ಪಾಪ, ತೀರಾ ಹರೆಯದಲಿ ಹೋದ.

(ಎನ್ನುತ್ತ ಹೊರಟು ಹೋಗುವಳು. ಪುರೋಹಿತ ಬರುವನು, ಅವನ ಹಿಂದೆ ಮಾವ.)

**ಪುರೋಹಿತ**

ಹಿರಿಮಗನ ಕೈಯಿಂದ ದರ್ಭೆಯನು ಮುಟ್ಟಿಸಿ
ಎಲ್ಲವನು ಮಾಡಿಯಾಯಿತು. ಇನ್ನು ಹೊರಡುವುದೆ.
ಅಕ್ಕಿಹಾಕಿರಿ ಬನ್ನಿ. ತಡಮಾಡಬೇಡಿರಿ.

(ಎದುರುಗಡೆಯಿಂದ ತಿರುಮಳಾ ಬರುವಳು.)

**ಅಲಮೇಲು**

(ತಟ್ಟನೆ ಒಳಗೆ ಹೋಗಿ ಎರಡು ಕಂಕುಳಲ್ಲಿ ಇಬ್ಬರು ಮಕ್ಕಳನ್ನು ತಂದು)

ಇವು ನಿನ್ನ ಮಕ್ಕಳೇ ಅಲ್ಲವೇ ತಿರುಮಳಾ?

(ತಿರುಮಳಾ ಕಣ್ಣೆತ್ತಿ ಆವಳ ಕಡೆ ನೋಡಿ ಮಕ್ಕಳನ್ನು ಮುಟ್ಟ ಕೈಯನ್ನು ಬಾಯಿಗಿಟ್ಟುಕೊಂಡು ಅವು ಇನ್ನು ನಿನ್ನವು ಎಂದು ಅಲಮೇಲುವಿಗೆ ಸನ್ನೆಯಿಂದ ತಿಳಿಸುವಳು.)

ಒಂದಿಷ್ಟು ಎತ್ತಿಕೊ.

(ತಿರುಮಳಾ ಒಲ್ಲೆ ಎಂದು ಸನ್ನೆ ಮಾಡುವಳು.)

ಒಲ್ಲೆಯಾ? ನಿಜವಾಗಿ?
ಇದು ಏನು ಕಲ್ಲಿನೆದೆ ನಿನ್ನ ಎದೆ ತಿರುಮಳಾ?

**ತಿರುಮಳಾ**

ಪತಿ ಕಳೇಬರದೊಡನೆ ನಡೆವುದಕೆ, ಅದರೊಡನೆ
ಚಿತೆಯೇರಿ ಅದನಪ್ಪಿಕೊಂಬುದಕೆ, ಹೊರತಾಗಿ

**(ಅತ್ತೆ ಒಳಗೆ ಬರುವಳು)**

ಉಳಿದಂತೆ ಈ ಒಡಲು ಶವವೆಂದು ತಿಳಿಯೆಂದು
ಶಾಸ್ತ್ರ ಹೇಳಿದೆ. ಶಾಸ್ತ್ರದಂತೆ ನಡೆಯುತಲಿಹೆನು.
ವಂಶವನು ನಡಸೆಂದು ಸೊಸೆಯಾಗಿ ತಂದರು.
ಎರಡು ಮಕ್ಕಳ ಹೆತ್ತು ಕೊಟ್ಟಿಹೆನು: ಸಾಕಿರಿ.
ಗಂಡನಿಗೆ ಸಹಧರ್ಮಚರಿಯಾಗು ಎಂದರು.
ಜೊತೆ ತಪ್ಪದಂದ ಅವರೊಡಲೊಡನೆ ಬೇಯುವೆನು.
ಸಂಸಾರದಲಿ ಕೋಪ ತಾಪ: ಗಂಡನ ಜೊತೆಗೆ
ಸ್ವರ್ಗವನು ಸಾರುವಳು ನನಗೆ ಅವು ಸಲ್ಲವು.
ಶವವಾದ ನಾನು ಬಾಯ್ತೆರೆಯಬಾರದು ಎಂದು
ಸುಮ್ಮನಿದ್ದೆನು; ನೀನು ಬಾಯ್ತೆರೆಸಿ ನುಡಿಸಿದೆ.
ಒಳಿತು; ನಾ ಹೋಗಿ ಬರುವೆನು; ನನ್ನ ಕಳುಹಿರಿ.
ಕಾಲ ಮುಟ್ಟುವೆನು; ಆಶೀರ್ವಾದ ಮಾಡಿರಿ.

**(ಎಂದು ಮಾವನಿಗೆ ಅತ್ತೆಗೆ ಮಂಡಿಯೂರಿ ನಮಸ್ಕಾರ ಮಾಡುವಳು.)**

**ಅತ್ತೆ**

**(ಅವಳು ಎದ್ದಾಗ ಮಕ್ಕಳನ್ನು ತಟ್ಟನೆ ಸೆಳೆದುಕೊಂಡು ಅವಳ ಕಂಕುಳಲ್ಲಿರಿಸ ನೋಡುವಳು.)**

**ತಿರುಮಳಾ**

ಮಕ್ಕಳನು ಜೊತೆಗೆ ಕರೆದೊಯ್ ಎಂಬರೇ ಅತ್ತೆ,
ಅಮ್ಮಲ್ಲು? ಕೊನೆಯ ಕ್ಷಣ. ವಿನಯವನು ಮರೆಯಲೆ?

**(ಎಂದು ಆವೇಶದಿಂದ ಅವಳ ಕಡೆ ನೋಡುತ್ತ ಎರಡು ಮಕ್ಕಳನ್ನು ಎರಡು ಕಡೆ ಎಸೆಯುವಂತೆ ಮಾಡುವಳು.)**

ಅತ್ತೆ

ಅಯ್ಯಯ್ಯೊ !

ಅಲಮೇಲು

ಅಯ್ಯೊ, ಇನ್ನೇನುಗತಿ !

ಅತ್ತೆ

ಬೇಡಮ್ಮ.

(ಎನ್ನುತ್ತ ಇಬ್ಬರೂ ಎರಡು ಮಕ್ಕಳನ್ನು ಹಿಡಿದುಕೊಳ್ಳುವರು.)

ತಿರುಮಳಾ

ಶ್ರೀನಿವಾಸಾ ವೆಂಕಟಾಚಲಪತೀ ನೀನೆ
ಕಾಪಾಡು; ಅರುಳಾಳನಾಥ, ನೀ ಕಾಪಾಡು.

ಅತ್ತೆ

ತಿರುಮಳಾ ನಿನ್ನ ಕಾಲನು ಮುಟ್ಟಿ ಬೇಡುವೆನೆ.
(ಎಂದು ಮಗುವನ್ನು ಕೆಳಗೆಬಿಟ್ಟು ಸೊಸೆಯ ಕಾಲಿಗೆ ಬೀಳುವಳು.)

ತಿರುಮಳಾ

ಬೇಡಿ; ಬೇಡಿದ ಸುಖವ ನೀಡುವಳು, ಮಾಸತಿ.

(ಅತ್ತೆ ಎದ್ದು ನಿಲ್ಲುವಳು)

ಗಂಡ ಹೆಂಡತಿ ದೈವದಿಚ್ಛೆ ಇರುವಷ್ಟು ದಿನ
ಆರೋಗ್ಯದಲಿ ಬಾಳಿ ಮೊಮ್ಮಕ್ಕಳನು ಸಾಕಿ
ಹಿರಿಯರನು ಮಾಡಿ ನಿಲಿಸಿರಿ. ಯಾವ ದುಷ್ಕರ್ಮ
ಏನಿದ್ದರೂ ನಿಮ್ಮ ಬಾಳಿಂದ ಮರೆಯಲಿ.
ಈಶ್ವರೇಚ್ಛೆಯಲಿ ನೀವವನೆಡಗೆ ಬರುವಂದು
ನಾವು ದಂಪತಿ ದಾರಿಯಲಿ ನಿಮ್ಮನೆದುರ್ಗೊಂಡು
ಸನ್ನಿಧಿಗೆ ಒಯ್ಯುವೆವು. ಈ ವಂಶ ಎಂದಿಗೂ
ನಡೆವಂತೆ, ಈ ಮನೆಯೊಳೆಂದಿಗೂ ಸೌಭಾಗ್ಯ
ಬೆಳೆವಂತೆ, ಮನೆ ಮಕ್ಕಳಲಿ ಸರ್ವಕಾಲಕೂ

ಸೌಜನ್ಯ ಸೌಶೀಲ್ಯ ನೆರೆವಂತೆ, ದೇವರಲಿ
ನಾವಿಬ್ಬರೂ ಅಲ್ಲಿ ಬೇಡುವೆವು. ಶುಭಮಸ್ತು.

(ಎಂದು ಕೈಯೆತ್ತಿ ಹರಸಿ ಒಳಗೆ ಹೋಗುವಳು. ಪುರೋಹಿತ ಅತ್ತೆ ಮಾವ ಹಿಂದೆ ಹೋಗುವರು. ಅಲಮೇಲು ಮಂಕು ಬಡಿದಂತೆ ಎರಡು ಕ್ಷಣ ಅಲ್ಲಿಯೇ ನಿಂತಿರುವಳು. ಅತ್ತೆ ಕೆಳಗಿಟ್ಟ ಮಗು ಅವಳ ಕಾಲನ್ನು ಸುತ್ತುವುದು.)

ಅಲಮೇಲು

ಶ್ರೀನಿವಾಸಾ ವೆಂಕಟಾಚಲಪತೀ ನೀನೆ
ಕಾಪಾಡು; ಅರುಳಾಳನಾಥ ನೀ ಕಾಪಾಡು

(ಎಂದು ಕುಳಿತು ಮಕ್ಕಳನ್ನು ಕುಳ್ಳಿರಿಸಿಕೊಂಡು ಅವಕ್ಕೆ ಆಟ ತೋರಿಸುವಳು.)

## ನಾಲ್ಕು ಗಳಿಗೆಯ ಅಂತರ

(ಅತ್ತೆ ಒಳಗೆ ಬರುವಳು)

ಅತ್ತೆ

ನೀನು ಇಲ್ಲೆ ಇದೀಯ? ಮಕ್ಕಳನು ಅಲ್ಲಿಯೇ
ಬಿಟ್ಟು ಬಂದೆನೆ ಎನ್ನಿಸಿತು. ಓಡಿ ಬಂದೆನು.
ಅಯ್ಯೊ ಕಂದಗಳೆ, ಅಪ್ಪನ ಕಳೆದುಕೊಂಡವು;
ಅಮ್ಮನೂ ತೊರೆದು ಹೋದಳು; ಆದರೂ ಇವಕೆ
ಆಟದಲಿ ಮನಸಮ್ಮ. ಏನು ದೇವರ ಮಾಯೆ!
ಅಮ್ಮಲ್ಲ, ಅದು ಎಂಥ ಕಲ್ಲೆದೆಯ ಹೆಂಗಸೇ
ತಿರುಮಳಾ! ಕೊನೆಯ ಹೊತ್ತಲಿ ಅವಳ ನೋಟದಲಿ

(ಬಾಗಿಲಲ್ಲಿ ಒಬ್ಬ ಮನುಷ್ಯ ಕಾಣಿಸಿಕೊಳ್ಳುವನು. ತಾಯಿ ಮಗಳು ಇಬ್ಬರೂ ಬೆಚ್ಚುವರು. ಅತ ತಿರುಮಳಾ ಅಣ್ಣ.)

ಅಲಮೇಲು

(ಗುರುತಿಸಿ)

ಈಗ ತಾನೇ ಬಂದಿರಾ ಭಾವ? ಎಲ್ಲವೂ
ಆಗಿಹೋಯಿತು. ಎಲ್ಲ ಹೋಗಿಹರು.

**ಭಾವ**

ಮನೆ ಮುಂದೆ
ಬಂದೆ. ಎದೆ ಝುಗ್ಗೆಂದಿತಮ್ಮ. ಬಾಗಿಲ ಆಳು
ಹೀಗಾಯಿತೆಂದ. ದೈವೇಚ್ಛೆ ! ಮಾಡುವುದೇನು ?

(ಅತ್ತೆ ಒಳಗೆ ಹೋಗುವಳು)

ಒಂದು ದಿನ ಮುಂದಾಗಿ ಬಂದೇನೆ ನನಗೆ ಮೈ
ಸರಿಯಿಲ್ಲ. ಒಡವೆಗಳ ಒಡನೆಯೇ ತರಬೇಕು
ಎಂದು ಆಳನು ಅಟ್ಟಿ ಕಳುಹಿದಳು ತಿರುಮಲಾ.
ಇವನು ನಾನೇ ಮುಟ್ಟಿಸುವುದು ಒಳ್ಳಿತು ; ಜೊತೆಗೆ
ಅಳಿಯಂದಿರನು ನೋಡಿಕೊಂಡು ಬಂದಂತಾಯ್ತು
ಎಂದು ಬಂದೆನು ತಾಯಿ. ಇಕೊ ನಿಮ್ಮ ಜೋಮಾಲೆ
ಕಂಠೀಸರದ ಗಂಟು.

(ಎಂದು ಒಂದು ಗಂಟನ್ನು ಅಲಮೇಲು ಮುಂದೆ ಇರಿಸುವನು)

ಅಳಿಯಂದಿರಿಗೆ ಜ್ವರ
ಎಂದಾಗ ಮನಕೆ ಕಳವಳವಾಯ್ತು. ಆದರೂ,
ನನಗೆ ಬರಲಿಲ್ಲವೇ, ಅದರಂತೆ ಅವರಿಗೂ
ಬಂದಿದೆ, ಏಕೆ ಚಿಂತಿಸಬೇಕು, ಮೂರು ದಿನ
ಕಾಯುವುದು, ವಾಸಿಯಾಗುವುದು, ಎಂದೆಣಿಸಿದೆನು.
ಹೀಗಾಗಿ ಹೋಯಿತೆ ? ತಂಗಿ ದೇವರ ಕೇಳಿ
ತಂದ ಸೌಮಂಗಲ್ಯ ಈ ದಿನಕೆ ಮುಗಿಯಿತು.

**ಅಲಮೇಲು**

ತಿರುಮಲಾ ಕೇಳಿ ತಂದಿದ್ದ ಸೌಮಂಗಲ್ಯ
ಮುಗಿಯಬಾರದ ರೀತಿಯದು. ನಿಮಗೆ ಈ ಮಾತ
ಎಂತು ಹೇಳುವುದೊ ಕಾಣದೆ ಸುಮ್ಮನಿದ್ದೆನು.
ಅಣ್ಣಯ್ಯನೊಡನವಳು ಸಹಗಮನ ಮಾಡಿದಳು.

ಭಾವ

ಸಹಗಮನ ? ಸಹಗಮನ ಮಾಡಿದಳೆ ? ಅಳಿಯನನು
ತಂಗಿಯನು ನಮ್ಮಲ್ಲಿ ನೋಡಿದದೆ ಕೊನೆಯಾಯ್ತೆ ?
ಹೆತ್ತ ವಂಶಕೆ ಕೀರ್ತಿ ; ಹೊಕ್ಕ ವಂಶಕೆ ಕೀರ್ತಿ ;
ಆದರೂ ಮಕ್ಕಳನು ತೊರೆದು ತಬ್ಬಲಿ ಮಾಡಿ
ಒಡಹುಟ್ಟ ಹೊಟ್ಟೆಯಲಿ ಉರಿಯೊಂದನಿಕ್ಕಿದಳೆ ?

ಅಲಮೇಲು

ಮೈಗೆ ಸರಿಯಿಲ್ಲ ; ದಾರಿಯ ನಡೆದು ದಣಿದಿಹಿರಿ ;
ಇಲ್ಲವಾಗಿರೆ ಅಲ್ಲಿ ಹೋಗಿ ಬರಬಹುದಿತ್ತೊ ?

ಭಾವ

ಎಳೆಯುಸಿರು ಮುಗಿಯುತಿರೆ ನೋಡುತಿರುವುದು ಮನಕೆ
ಸಹಿಸಬಾರದ ನೋವು ತಾಯಿ ; ಈ ನಿತ್ರಾಣ
ಇಲ್ಲದಿದ್ದರು ನಾನು ಹೋಗುತಿರಲಿಲ್ಲ, ಬಿಡು.
ಮುಖ ಬೇರೆ ದಕ್ಕಲಾರದು.

ಅಲಮೇಲು

ದಕ್ಕಲಾರದು.

ಮಾವ

(ಬರುವನು)

ಅಮ್ಮಲ್ಲು ನಮ್ಮ ಸೊಸೆ ಒಬ್ಬ ದೇವತೆಯಮ್ಮ.
(ಭಾವನನ್ನು ನೋಡಿ)
ಈಗಳೇ ಬಂದಿರಾ ? ಆರೋಗ್ಯ ಸರಿಯಿಲ್ಲ
ಎಂದರಲ್ಲವೆ ? ಈಗ ಹೇಗಿದೆ ?

ಅಲಮೇಲು

ಜೋಮಾಲೆ

ಕಂಠೀಸರವನು ತಂದಿಹರು. ಅದೆ ಗಂಟು ಇದು.

ಮಾವ

ತಂದೇ ತರುವರೆಂದು ಸೊಸೆ ಹೇಳಲಿಲ್ಲವೆ?
ತಂದಿಹರು, ಒಳಿತು, ಅದ ನಿಮ್ಮ ತಾಯಿಗೆ ಕೊಡು.
ನಿಮ್ಮ ತಂಗಿಯದು ಒಂದೇ ನಿಶ್ಚಯದ ಮನಸು,
ಬೀಗರೇ. ಅಮ್ಮಲ್ಲ್ಲಿ ಹೇಳಿದಳೊ? ಲಕ್ಷದಲಿ
ಕೋಟಿಯಲಿ ಇಂಥ ಹೆಂಗಸು ಒಬ್ಬಳಿರಬಹುದೊ
ಇಲ್ಲವೊ ಹೇಳಲಾಗದು. ಏನು ಆ ಧೈರ್ಯ,
ಆ ಸ್ಥೈರ್ಯ! ಈ ಮನೆಯ ಹೊಗುವ ದಿನ ಓಲಗದ
ತಾಳಮೇಳದ ಮಧ್ಯೆ ಜೊತೆಯ ಚೆಲುವೆಯರೊಡನೆ
ಯಾವ ಬೆಡಗಿನ ದಿಟ್ಟ ನಡೆಯಿಂದ ನಡೆದಳೊ
ಅದೆ ಬೆಡಗು ಅದೆ ದಿಟ್ಟ ಅವಳು ಈ ದಿನ ನಡೆದ
ಹೆಜ್ಜೆಯಲಿ. ಬೀದಿ ದಾಟುವವರೆಗು ನೋಡಿದೆನು.
ತಟ್ಟೆಯನು ಹಿಡಿದು ಹೆಣ್ಮಗು ತನ್ನ ಮದುವೆಗೋ
ಪ್ರಸ್ತಕೋ ಹೋಗುತಿಪ ತೆರದ ಗಂಭೀರ ಮುಖ,
ಧೀರಗತಿ. ಇದ್ದಷ್ಟು ದಿನ ಮನೆಯ ಬೆಳಗಿದಳು;
ಇಂದು ಒಡಲನು ತೊರೆದು ಬರಿದೊಂದು ಹೆಸರಾಗಿ
ಅದೆ ಮನೆಯನೆಂದಿಗೂ ಮಿಗಿಲಾಗಿ ಬೆಳಗುವಳು.

ಪುರೋಹಿತ

(ಈ ಮೊದಲು ಬಾಗಿಲ ಬಳಿ ಬಂದಿದ್ದು ಕೊನೆಯ ಈ ಎರಡು ವಾಕ್ಯಗಳನ್ನು ಕೇಳಿ)

ಬೆಳಗುವಳು. ಮನೆಯೇನು, ನಾಡನೂ ಬೆಳಗುವಳು.
ಮಾನವನ ಜಾತಿಗೇ ಬೆಳಕಾಗಿ ನಡೆಯುವಳು.
ಧರ್ಮವನು ಹಿಡಿದು ಸಾಯುವ ಸಾವು ಸಾವಲ್ಲ,
ಅದ ಬಿಟ್ಟು ಬಾಳುವರ ಬಾಳೊಂದು ಬಾಳಲ್ಲ,
ಎಂದು ಸಾರುತಲಿಹಳು ನಿಂಬೆ ಹಣ್ಣನು ಹಿಡಿದು
ಅಭಯ ಹಸ್ತವನೆತ್ತಿ ವೀರ ಮಾಸತಿ ದೇವಿ.

ಉದ್ವಾಹ ಮಂತ್ರ ಬೆಸೆಯುವುದಾತ್ಮ ಆತ್ಮವನು,
ಒಡಲು ಒಡಲನು ಮಾತ್ರ ಅಲ್ಲ, ಎಂದಳು ಧೀರೆ.
ಪತಿಯ ಬಿಟ್ಟಿರಲಾರೆ, ಜೊತೆ ಸಾರಲೀ ಒಡಲ
ಬಿಡಬೇಕು, ಬಿಟ್ಟು ಅವನೊಡನೆ ಹೋಗುವೆನೆಂದು
ಒಂದೆ ನಿಶ್ಚಯದಿಂದ ನಡೆದು ಹೋದಳು ಬಾಲೆ.
ನಾನೆನ್ನುವುದು ಆತ್ಮ, ಈ ಒಡಲು ಹಳೆ ವಸನ,
ಬಳಸ ಬೇಕೇ ಇರಲಿ, ಬೇಡವೇ ತೆಗೆ ಎಸೆ,
ಎಂದು ಕಿತ್ತೊಗೆದಳದ ಎಳೆಯ ಹರೆಯದ ಚೆಲುವೆ.
ಸುಡುಗಾಡ ಕಡು ಬಿಸಿಲು ಆ ಸತಿಯ ಚೇತನಕೆ
ಮದುವೆ ಹಂದರದ ನೆರಳಾಗಿತ್ತು. ಚಿತೆ ತನ್ನ
ಪತಿ ಶಯ್ಯೆ ಎಂದು ಬಾಯಲಿ ಎಂತು ಹೇಳಿದಳು,
ಅಂತೆ ಮನದಲಿ ತಿಳಿದು ಅದನೇರಿ ಕುಳಿತಳು.
ಬಾಯಿ ತೊದಲದೆ ಮಂತ್ರಗಳ ನುಡಿದು, ನಾನಿನ್ನು
ಹೋಗಿ ಬರುವೆನು ಎಂದು ಹೇಳಿ, ನಾಲ್ಕು ಕಡೆಗೆ
ಕೈಮುಗಿದು ತಲೆಬಾಗಿ, ಸೂರ್ಯದೇವನ ನೋಡಿ
ಕಣ್ಮುಚ್ಚಿ ಕೈಮುಗಿದು ಮತ್ತಷ್ಟು ತಲೆಮಣಿದು,
ಮಲಗಿ ಪತಿಯೊಡಲನಪ್ಪಿದಳು. ಕಟ್ಟುವೆವೆನಲು,
ಬೇಡವೇ ಬೇಡ, ಎಂದಳು. ಬೆಂಕಿ ಸೋಕಿದರೆ
ಎದ್ದು ಬಿಡುವಳೊ ಎಂದು ಜನಕೆ ಭಯ. ಏಳುವುದೆ !
ಮಿಸುಕಿದಳೆ ? ಮಿಡುಕಿದಳೆ ? ಆ ಕಳೇಬರದೊಡನೆ
ಈ ಕಳೇಬರ ಅಂತೆ ಬಿದ್ದಿತ್ತು. ಮಾಸತಿ,
ವೀರ ಮಾಸತಿ, ನಮ್ಮ ತಿರುಮಳಾ. ಕಿಚ್ಚೆದ್ದು
ಸುಟ್ಟುಹಾಕಿತು ಎರಡು ದೇಹವನು. ಎರಡಾತ್ಮ
ವೈಕುಂಠದಲಿ ದೇವಸನ್ನಿಧಿಯ ಸೇರಿದವು.
ಯಸ್ಯ ಭಾಸಾ ಎಂಬ ಉಪನಿಷದ್ವಾಕ್ಯದಲಿ
ಹೊಗಳಿರುವ ದಿವ್ಯ ದೀಪ್ತಿಯ ಒಂದು ಅಂಶವನು
ನಮ್ಮ ಮಾಸತಿಯಾತ್ಮ ಈ ದಿವಸ ತೋರಿಸಿತು.

ಅಲಮೇಲು

ಹೋದವಳ ಹೆಮ್ಮೆ; ಹೊಗಳುವ ಜನಕೆ ಸಂತೋಷ;
ಸಾಯಲಾರದ ನನ್ನ ಹೇಡಿ ಜೀವಕೆ ಹೇವ.
ಮುಂದೆ ಮಾಡುವ ಕರ್ಮ ಏನಿಹುದು ಅದ ನೋಡಿ
ಹೇಳಿರಿ. ಬನ್ನಿ ಕಂದಾ, ಒಳಗೆ ಹೋಗುವ.

(ಎಂದು ಮಕ್ಕಳನ್ನು ಎತ್ತಿಕೊಂಡು ಒಡವೆಯ ಗಂಟನ್ನು ತೆಗೆದುಕೊಂಡು ಒಳಗೆ ಹೋಗುವಳು.)

ಮಾವ

ತನ್ನ ಜೀವನ ನೀಗಿಕೊಳ್ಳೆನಲ್ಲಾ ಎಂದು
ನೋಯುವಳು ಅಮ್ಮಲ್ಲು. ನೀಗಿಕೊಂಡವರ ಸುಖ
ನೆಲದ ಮೇಲಿರುವ ಬಾಳಿಗೆ ಎಂತು ಬರಬಹುದು?
ಅವರವರಪ್ರಾಪ್ತಿ ಅವರವರಿಗೆ. ಒಳ್ಳಿತು.
ಮಾಸತಿಯ ಹೆಸರಿನಲಿ ಅಗ್ರಹಾರವಮಾಡಿ
ಮನೆಯದೇವರದೊಂದು ಮಂದಿರವ ನಿರ್ಮಿಸಿ
ಕೆರೆಯ ಕಟ್ಟಿಸಿ ಸುತ್ತ ಊರೊಂದಬೆಳಸುವುದು
ಉಚಿತವೆಂದಿದೆ ಶಾಸ್ತ್ರ ಎಂದೆಯಲ್ಲವೆ? ಸರಿ.
ಹಿರಿಯರಾರ್ಜಿಸಿದಾಸ್ತಿ ಇದೆಯಲ್ಲ. ಇದಕೇನು
ವಿನಿಯೋಗ?

(ಅತ್ತೆ ಒಳಗಿಂದ ಬಂದು ಆ ಒಡವೆಗಂಟನ್ನು ಗಂಡನ ಕೈಯಲ್ಲಿಡುವಳು.)

ನನ್ನ ಮನೆಯಾಕೆ ತಂದೈಶ್ವರ್ಯ
ಸೊಸೆಯ ಕೀರ್ತಿಯ ಮೆರೆವ ಈ ಧರ್ಮಕಾರ್ಯದಲಿ
ಬೀಯುವಾಗಲಿ. ಸೊಸೆಯ ಎಲ್ಲ ಒಡವೆಯು ಅಷ್ಟೆ.
ವೈಕುಂಠನಾಥನಾರಾಧನೆಯ ದಿವಸವೇ
ಹೊಸ ಊರ ಗಡಿಯ ಕಟ್ಟುವ. ಅಗ್ರಹಾರ, ಕೆರೆ,
ಗುಡಿ, ಪೇಟೆ, ಎಲ್ಲ ಕೇರಿಗಳ ಗುರುತನು ಹಾಕಿ,
ದೇವಾಲಯದ ಅಸ್ತಿವಾರವನು ಹಾಕುವ.

ಬಂಧುಬಳಗಕೆ, ನಂಟರಿಷ್ಟರಿಗೆ, ನಮ್ಮೂರ
ಅಂತೆ ನೆರೆನಾಡ ಹಿರಿಯರಿಗೆಲ್ಲ ಇದ ತಿಳಿಸಿ
ಹೊಸ ಊರ ಉತ್ಸವಕೆ ಬರಮಾಡಿಕೊಂಬ. ಅದೆ
ದಿವಸ ಬಡಜನ ಯಾರು ಮನೆಕಟ್ಟಬಯಸುವರು
ಅಂಥವರಿಗೆಲ್ಲ ಮಾಸತಿಯ ಹೆಸರಲಿ ಆದ
ಸಾಹಾಯ್ಯವನು ಕೊಡುವ. ಪತಿಯೊಡನೆ ಶ್ರೀಹರಿಯ
ಎದುರಿನಲಿ ಆನಂದದಲಿ ನಿಂತ ಸೊಸೆ ಇದನು
ನೋಡಿ ಸಂತೋಷಿಸಲಿ. ಅವಳ ಆ ಸಂತೋಷ
ತನ್ನ ಆ ನೆಲೆಯಿಂದ ಬರುವೆಲ್ಲ ಕಾಲಕೂ
ಅವಳ ಮಕ್ಕಳನು, ಅವಳೆರಡು ಮನೆತನಗಳನು,
ಆವಳ ಹೆಸರಿನ ಊರು ಅದರ ಸುತ್ತಣ ನಾಡು
ಎನಿತ ರಕ್ಷಿಸಲು ಬರುವುದು ಅನಿತು, ಎಲ್ಲವನು
ಹಾಲ ಕಾಲುವೆಯಾಗಿ ಹಾಯ್ದು ತುಂಬಲಿ. ಹರದೆ
ವೀರಮಾಸತಿ ಜನರ ಮನಸಿನಲಿ ನೆನಪಾಗಿ
ನೂರುಸಾವಿರಕಾಲ ಹಿರಿದೆನಿಸಿ ಬಾಳಲಿ.
ಅವಳ ಹೆಸರೊಂದು ನಂದಾದೀಪದಂದದಲಿ
ಮನೆಊರುನಾಡುಗಳ ಬೆಳಕಾಗಿ ಬೆಳಗಲಿ.

---

942–53. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಸಿ. ವಾಸುದೇವರಾಯರವರು ಮುದ್ರಿಸಿರುವರು.

# ಮುನ್ನುಡಿ

ಮನೂಚಿಯ ಮೊಗಲರ ಚರಿತ್ರೆಯ ಪುಸ್ತಕದಲ್ಲಿ 'ಬಾದಷಹನ ನ್ಯಾಯ' ಎಂಬ ಕಥೆಯ ಮೂಲವನ್ನು ಕಂಡ ಸುಮಾರಿನಲ್ಲಿ ನನಗೆ ಅಕ್ಬರನ ಅರಮನೆಯ ದಾಸೀಪುತ್ರಿ ಅನಾರ್ಕಲಿಯ ದುಃಖ ಚರಿತದ ಮೂಲವೂ ಕೈಗೆ ಸಿಕ್ಕಿತು. ಆ ತರುಣದಲ್ಲಿ ನಾನು ಕೋಲಾರಕ್ಕೆ ಹೋದೆನು. ಅಲ್ಲಿದ್ದಾಗ 'ಮಾಡರ್ನ್ ರಿವ್ಯೂ' ಸಂಚಿಕೆ ಒಂದರಲ್ಲಿ ಶ್ರೀಯುತ ಸಮರೇಂದ್ರನಾಥ ಗುಪ್ತರು ಈ ವಸ್ತುವನ್ನು ಹಿಡಿದು ಬರೆದ ಒಂದು ಲೇಖನವನ್ನು ಓದಿದೆನು. ಅದೇನು ವಿವರ ವಿವರವಾಗಿ ಇತಿಹಾಸದಿಂದ ಎತ್ತಿದ ಸಂಗತಿಯೋ, ಇಲ್ಲ ಇತಿಹಾಸದಿಂದ ಆಯ್ದ ವಸ್ತುವಿನ ಮೇಲೆ ಕಟ್ಟಿದ ಕಥೆಯೋ, ಹೇಳುವಂತಿರಲಿಲ್ಲ. ಕಥೆ ಒಂದು ದುಃಖಾಂತ ನಾಟಕಕ್ಕೆ ಬಹು ಒಳ್ಳೆಯ ವಸ್ತು ಆಗುತ್ತದೆ ಎಂದು ನನಗೆ ಆಗಲೆ ಕಂಡಿತು. ವಿಷಯವನ್ನು ಮನಸ್ಸಿನಲ್ಲಿ ತಿರುವಿ ಹಾಕುತ್ತ ಸುಮಾರು 1920ರ ದಿನದಲ್ಲಿ ನಾಟಕವನ್ನು ಬರೆಯಲಾರಂಭಿಸಿ ಮೂರು ದೃಶ್ಯಗಳಷ್ಟನ್ನು ಮುಗಿಸಿದೆನು. ಆಮೇಲೆ ಸ್ಥಳದಿಂದ ಸ್ಥಳಕ್ಕೆ ಹೋಗುವ ಗೊಂದಲದಲ್ಲಿ ಈ ನಾಟಕದ ಈ ಖಂಡ ಕಳೆದು ಹೋಯಿತು. ಆಗ ಅದನ್ನು ಬರೆಯಲು ಮತ್ತೆ ಕೈ ಹಾಕಲಿಲ್ಲ.

ವಿಷಯವನ್ನು ಬರೆಯುವುದಕ್ಕೆ ಎತ್ತಿ ಕೊಳ್ಳಲಿಲ್ಲವಾದರೂ ಅನಾರ್ಕಲಿಯ ಮೂರ್ತಿ, ಅವಳ ತುಂಬು ದುಃಖದ ಕಥೆ, ಮನಸ್ಸಿಗೆ ಮೂವತ್ತು ವರ್ಷದ ಕಾಲ ಆಗಾಗ ಬರುತ್ತಲೇ ಇದ್ದಿವೆ. ಕಾಲ ಹರಿದಂತೆ ಕಥೆಯ ರೂಪ ಮಾರ್ಪಡುವುದು, ವ್ಯಕ್ತಿಗಳನ್ನು ಕುರಿತ ಕಲ್ಪನೆ ಬೆಳೆಯುವುದು, ಇಂಥ ಸಂದರ್ಭದಲ್ಲಿ ಅನಿವಾರ್ಯ. ಮೂವತ್ತು ವರ್ಷ ಹೀಗೆ ಮಾರ್ಪಟ್ಟು ಬೆಳೆದ ಚರಿತ್ರೆಯನ್ನು ಎರಡು ವರ್ಷದ ಹಿಂದೆ ಈ ನಾಟಕವಾಗಿ ರಚಿಸಿದೆನು. ಅದನ್ನು ಈ ಸಲದ 'ಜೀವನ'ದ ವಿಶಿಷ್ಟ ಸಂಚಿಕೆಯಲ್ಲಿ ಪ್ರಕಟಿಸಿ ಈಗ ಈ ಪುಸ್ತಕದ ಆಕಾರದಲ್ಲಿ ಸಹೃದಯರಿಗೆ ಒಪ್ಪಿಸುತ್ತಿದೇನೆ.

ಈ ನಾಟಕವನ್ನು ಮೈಸೂರು ರೇಡಿಯೋ ಸ್ಟೇಷನ್ ಅಧಿಕಾರಿಗಳು ಕಳೆದ ವರ್ಷದ ತಮ್ಮ ವಿಶೇಷ ಕಾರ್ಯಕ್ರಮದಲ್ಲಿ ಸೇರಿಸಿ ನನ್ನನ್ನು ಗೌರವಿಸಿದರು. ಅಲ್ಲಿಯ ಅಧಿಕಾರಿ ವರ್ಗದ ಶ್ರೀ ಶಿವಸ್ವಾಮಿ ಅವರು ನಾಟಕವನ್ನು ಆಡಿದ ನಟರಿಗೆ ಅನುಕೂಲಿಸುವಂತೆ ಬೇರೆ ಬೇರೆಯ ರಾಗಗಳಲ್ಲಿ ಹಾಡುಗಳನ್ನು ಹಾಡಲು ಏರ್ಪಾಡು ಮಾಡಿದರು. ಸೌ|| ರಾಜಮ್ಮ ಕಲ್ಲೋಳಿಮಠ ಇವರು ತುಂಬ ಶ್ರದ್ಧೆಯಿಂದ ನಾಟಕದ ಅಭ್ಯಾಸವನ್ನು ನಿರ್ದೇಶಿಸಿ ನಾಟಕವನ್ನು ಕೇಳ್ಮೆಗೆ ಸಿದ್ಧಪಡಿಸಿದರು. ನಾಟಕದಲ್ಲಿ ಭಾಗವಹಿಸಿದ ಎಲ್ಲ ಹೆಸರುಗಳನ್ನೂ ನಾನಿಲ್ಲಿ ಕೊಡುತ್ತಿಲ್ಲ. ಎಲ್ಲರೂ ಅದನ್ನು ತುಂಬ ಶ್ರದ್ಧೆಯಿಂದ ಅಭ್ಯಾಸಮಾಡಿ ಅದು ಜನರಿಗೆ ಮೆಚ್ಚಿಗೆಯಾಗಲಿ ಎಂಬ ದೃಷ್ಟಿಯಿಂದ ತಮ್ಮ ಹೊಣೆಯನ್ನು ನಿರ್ವಹಿಸಿದರು. ಸ್ಟೇಷನ್ ಮುಖ್ಯಾಧಿಕಾರಿ ಶ್ರೀ ನಾಯರ್ ಮಹನೀಯರಿಗೂ ಈ ಎಲ್ಲ ಮಿತ್ರರಿಗೂ ಈ ಬಗ್ಗೆ ನನ್ನ ವಂದನೆಯನ್ನು ಸಲ್ಲಿಸುತ್ತೇನೆ.

ಈ ನಾಟಕದಲ್ಲಿ ಕಲ್ಪಿಸಿರುವ ಕಥೆಯ ವಿವರ ಬಹುಭಾಗ ಮೂಲದಿಂದ ಬೇರೆಯಾಗಿದೆ. ಇತಿಹಾಸದ ವಸ್ತುವನ್ನು ಆಯ್ದು ಬರೆಯುವ ಕಥೆ ನಾಟಕಗಳಲ್ಲಿ ಈ ವರ್ತನೆ ವಾಡಿಕೆಯಾದದ್ದೆ. ವರ್ಣಿಸುವ ಸಂಗತಿ ಕಥೆಯ ಕಾಲದ ಜೀವನಕ್ಕೆ ಬಹಳ ವಿರುದ್ಧವಾಗದಂತೆ, ಅಂದಿನ ವಸ್ತುಸ್ಥಿತಿಗೆ ಅನುಗುಣವಾಗಿ ಇರುವಂತೆ ಅಥವಾ ಏನಿಲ್ಲವೆಂದರೂ ಹಾಗೆ ಕಾಣುವಂತೆ, ನೋಡಿಕೊಂಡರೆ ಸಾಕು: ಕಲ್ಪನೆಯಿಂದ ಕೂಡಿಸಿಕೊಂಡ, ಬೇರೆ ಮಾಡಿಕೊಂಡ, ವಿವರಗಳು ಸಮರ್ಥನೀಯವಾಗುತ್ತವೆ. ಈ ನಾಟಕದ ವಿವರಗಳೆಲ್ಲ ಹೀಗೆ ಸಮರ್ಥನೀಯ ಆಗಿವೆ ಎನ್ನುವುದು ನನ್ನ ತಿಳಿವಳಿಕೆ.

ಮೂಲ ಹೇಗಿತ್ತು ಎನ್ನುವುದನ್ನು ತಿಳಿಯಲು ನಾನು 'Modern Review' ಪತ್ರಿಕೆಯ ಹಳೆಯ ಸಂಚಿಕೆಯನ್ನು ಈಚೆಗೆ ಹುಡುಕಿದೆನು. ಕಥೆ ಪ್ರಕಟವಾದ ಸಂಚಿಕೆ 1915ರ ಆಗಸ್ಟ್ ತಿಂಗಳದು. ಆ ಮೂಲದ ಸಾರಾಂಶವನ್ನು ಮುಂದೆ ಕೊಟ್ಟಿದ್ದೇನೆ.

"ಅಕ್ಬರನ ಅಂತಃಪುರದ ದಾಸಿಒಬ್ಬಳ ಮಗಳಾದ ನದೀರ ಎಂಬ ಹುಡುಗಿಯನ್ನು 'ಅನಾರ್ಕಲಿ' ಎಂದು ಕರೆಯುತ್ತಿದ್ದರು.

ಅವಳು ಅತ್ಯಂತ ಸುಂದರಿ. ರಾಜಕುಮಾರ ಸೆಲೀಂ ಅವಳನ್ನು ಒಲಿದನು. ಇವರು ಗುಪ್ತವಾಗಿ ಸೇರುತ್ತಿದ್ದರು. ಹುಡುಗಿ ಒಂದು ದಿನ ಬಾದಷಹನ ಎದುರಲ್ಲಿ ಸಭೆಯಲ್ಲಿ ನೃತ್ಯ ಮಾಡುತ್ತಿದ್ದಾಗ, ಬಾದಷಹ ಕನ್ನಡಿಯಲ್ಲಿ ಇವಳ ಸೆಲೀಮನ ಮಧ್ಯೆ ಹಾಯಿದ ನೋಟವನ್ನು ಗಮನಿಸಿದನು. ದಾಸಿಯ ಮಗಳಿಗೆ ಎಷ್ಟು ಅಹಂಕಾರ, ನನ್ನ ಮಗನನ್ನು ಹೀಗೆ ನೋಡುವುದಕ್ಕೆ, ಎಂದು ಅವನಿಗೆ ಕೋಪ ಬಂದಿತು. ಅವನು ಹುಡುಗಿಯನ್ನು ಸೆರೆಯಲ್ಲಿಡಲು ಆಜ್ಞೆ ಮಾಡಿದನು. ಸೆಲೀಂ ರಾತ್ರಿಯಲ್ಲಿ ಅವಳನ್ನು ಕಾಣ ಹೋದನು. ನನ್ನೊಡನೆ ಬಂದು ಬಿಡು, ಓಡಿ ಹೋಗೋಣ ಎಂದು ಪ್ರೇರಿಸಿದನು. ಸಮ್ರಾಟನ ಕೈಗೆ ಸಿಕ್ಕದೆ ತಪ್ಪಿಸಿಕೊಳ್ಳುವುದು ಅಸಾಧ್ಯ ಎಂದು ಅನಾರ್ಕಳಿ ಈ ಮಾತನ್ನು ಒಲ್ಲೆ ಎಂದಳು. ಸೆಲೀಮನ ಪ್ರೇರಣೆ ಅನಾರ್ಕಳಿಯ ಉತ್ತರ ಬಾಗಿಲಲ್ಲಿದ್ದ ಕಾವಲುಗಾರ ರಹಿಮಾನ್ ಖಾನನಿಗೆ ತಿಳಿಯಿತು. ಆ ದಿನದಲ್ಲಿ ಬಾದಷಹನನ್ನು ಉನ್ಮೂಲಿಸಿ ಸೆಲೀಮನನ್ನು ಚಕ್ರವರ್ತಿಯನ್ನಾಗಿ ಮಾಡಬೇಕು ಎಂಬ ಒಂದು ಪಂಗಡ ಅರಮನೆಯಲ್ಲಿತ್ತು. ರಹಿಮಾನ್ ಖಾನ್ ಆ ಪಂಗಡದ ಒಬ್ಬ ವ್ಯಕ್ತಿ. ಅನಾರ್ಕಳಿ ಏನಾದರೂ ಒಪ್ಪಿ ಸೇಲಿಂ ಅವಳೊಂದಿಗೆ ಓಡಿ ಹೋದರೆ ತಮ್ಮ ಉದ್ದೇಶ ಕೆಡುತ್ತದೆ ಎಂದು ರಹಿಮಾನ್ ಖಾನನಿಗೆ ಶಂಕೆ ಆಯಿತು. ಅವನು ಸೆಲೀಮನನ್ನು ಕರೆದು, ಬಾದಷಹರು ಇಲ್ಲಿಗೆ ಬರುತ್ತಿದಾರೆ, ಎಂದು ಹೇಳಿದನು. ಇದು ಸುಳ್ಳು ಮಾತು. ಸೆಲೀಂ ಹೊರಕ್ಕೆ ಬಂದನು. ಸ್ವಲ್ಪ ದೂರದಲ್ಲಿ ಯಾರೊ ನಾಲ್ಕು ಜನ ಪಂಜು ಹಿಡಿದು ಹೋಗುತ್ತಿದ್ದರು. ಅದು ಬಾದಷಹ ಮತ್ತು ಅವನ ಜೊತೆಯ ಜನ ಎಂದು ಅವನು ತಿಳಿದನು. ಒಳಗೆ ಹೋಗಿ ಅನಾರ್ಕಳಿಗೆ, ನಾನು ಮರಳಿ ಬರುತ್ತೇನೆ, ಎಂದು ಆಶ್ವಾಸನ ಕೊಟ್ಟು ಅವನು ಹೊರಗೆ ಬಂದನು. ರಹಿಮಾನ್ ಖಾನ್ ಅವನಿಗೆ ಕುಡಿಯುವುದಕ್ಕೆ ಒಂದು ಪಾನೀಯವನ್ನು ಕೊಟ್ಟನು. ಅದರಲ್ಲಿ ನಿದ್ದೆ ತರುವ ಒಂದು ಔಷಧವನ್ನು ಬೆರಸಿದ್ದನು. ಉದಯವಾಗುತ್ತ ಬಂತು, ಸೆಲೀಂ ಬರಲಿಲ್ಲ. ಅನಾರ್ಕಳಿ ನಿರಾಶಳಾದಳು: ಅರಸನ ಕೋಪಕ್ಕೆ ಸಿಕ್ಕಬಾರದು ಎಂದು ನಿಶ್ಚಯಿಸಿ

ಕೊಂಡಳು. ಇಂಥ ಹೊತ್ತಿನಲ್ಲಿ ಪ್ರಾಣ ಕಳೆದುಕೊಳ್ಳಲು ತನ್ನ ತಾಯಿ ತನಗೆ ಹೇಳಿದ್ದ ಒಂದು ಉಪಾಯವನ್ನು ನೆನೆದಳು ; ತನ್ನ ಕೈ ಬೆರಳ ಉಂಗುರದ ವಜ್ರವನ್ನು ಕುಂದಣದಿಂದ ಬಿಡಿಸಿ ಅದನ್ನು ನುಂಗಿದಳು. ಇವಳ ಜೀವ ತೆಗೆಯಿರಿ, ಎಂಬ ಆಜ್ಞೆಯೊಡನೆ ಅಕ್ಬರ ನತ್ತಣಿಂದ ಬೆಳಗಾಗ ಬಂದ ನಾಲ್ಕು ಜನ ಇವಳ ಶವವನ್ನು ಕಂಡರು.

"ಸೆಲೀಂ ಈ ಪ್ರಸಂಗವನ್ನು ಮರೆತನು. ವರ್ಷಾಂತರ ಕಳೆದ ಮೇಲೆ ತಾನು ಬಾದಷಹನಾಗಿದ್ದ ಕಾಲದಲ್ಲಿ ಅವನು ಅರಮನೆಯ ಉದ್ಯಾನದ ಒಂದು ಸ್ಥಳದಲ್ಲಿ ನಡೆದಾಡುವ ವೇಳೆ ಒಂದು ದಾಳಿಂಬೆ ಗಿಡದ ಅಡಿಯಲ್ಲಿ ಒಂದು ದಿಣ್ಣೆಯಿರುವುದನ್ನು ಕಂಡನು. ಅದು ಒಂದು ಗೋರಿ ಎನ್ನುವುದು ಕಾಣುವಂತಿತ್ತು. ಆ ಮೊದಲು ಅವನು ಅದನ್ನು ನೋಡಿರಲಿಲ್ಲ. ತೋಟಗಾರನನ್ನು, ಇದು ಯಾರ ಗೋರಿ, ಎಂದು ಕೇಳಿದನು. ವೃದ್ಧ ವನಪಾಲ, ತುಂಬ ಹಿಂದೆಗೆದು ಹಿಂದೆಗೆದು, ಅನಾರ್ಕಲಿಯ ಚರಿತ್ರೆಯನ್ನು ಅವನಿಗೆ ಹೇಳಿದನು. ಜಹಾಂಗೀರನಿಗೆ ಚರಿತ ಜ್ಞಾಪಕಕ್ಕೆ ಬಂದಿತು. ಅವನು ಆ ಮಣ್ಣಿನ ಗೋರಿಯ ಸ್ಥಳ ದಲ್ಲಿ ಒಂದು ಕಟ್ಟಡವನ್ನು ಕಟ್ಟಿಸಿದನು. ಸಮಾಧಿ ಶಿಲೆಯ ಮೇಲೆ ರತ್ನಗಳಿಂದ ಒಂದು ಶ್ಲೋಕವನ್ನು ಕೆತ್ತಿಸಿದನು. ಆ ಶ್ಲೋಕ ಹೀಗೆಂದಿದ್ದಿತು.

ತಾ ತ್ಯಾಮತ್ ಷುಕ್ರ್ ಗೋಯೆಂ ಕೀರ್ದ್ಗರೇ ಖೇಷ್‌ರಾ
ಆ ಗೂರ್ ಮನ್ ಬಾಜ್ ಬೇನುಂ ಮುಜೇ ಯಾರೇ ಖ್ವಯೇ ಷ್‌ರಾ
ಮಜೂನ್ ಸೆ ಸೆಲೀಂ ಅಕ್ಬರ್

ಹಾ ! ನನ್ನ ಪ್ರಿಯೆ ನಾನು ನಿನ್ನ ಮುಖವನ್ನು ಮರಳಿ ನೋಡ ಬಹುದಾದರೆ ! ಓ ದೇವರೆ ! ಪುನರುತ್ಥಾನದ ದಿವಸ ನಾನು ನಿನಗೆ ವಂದನೆ ಒಪ್ಪಿಸಿಯೇನು. ಅಕ್ಬರನ ಮಗ ಪ್ರಣಯಿ ಸೇಲಿಂ"

ಅನಾರ್ಕಲಿ ಸತ್ತದ್ದು ಹೀಗಲ್ಲ, ಅಕ್ಬರನ ಆಜ್ಞೆಯಂತೆ ಅವಳನ್ನು ಜೀವಂತವಾಗಿ ಗೋಡೆಗೆ ಒರಗಿಸಿ ನಿಲ್ಲಿಸಿ ಅವಳನ್ನು ಮುಚ್ಚಿ ಒಂದು ಗೋಡೆ ಕಟ್ಟಿ ಕೊಂದರು, ಎಂದೂ ಒಂದು ಪ್ರತೀತಿ ಇದೆ. ಲಾಹೋರಿ

ನಲ್ಲಿ ಅನಾರ್ಕಳಿ ಹೆಸರಿನ ಒಂದು ಬೀದಿ ಇದೆ. ಇದನ್ನು ಕುರಿತು ಜನ ಈ ಕಥೆಯನ್ನು ಹೇಳುತ್ತಾರಂತೆ. ಈ ನಾಟಕದಲ್ಲಿ ಈ ಪ್ರತೀತಿ ಯನ್ನು ಬಳಸಿದೆ. ಈ ರೀತಿಯ ಕೊಲೆಯನ್ನು ಗೋಡೆಸೆರೆ ಎಂದು ಕರೆದಿದೆ. ಅನಾರ್ಕಳಿಯನ್ನು ಕುರಿತ ಸಿನೀಮಾ ಒಂದು ಬಳಕೆಯ ಲ್ಲಿದೆ. ಅದರಲ್ಲಿ ಅನಾರ್ಕಳಿ ಹೀಗೆಯೇ ಸಾಯುತ್ತಾಳೆ.

ಮಾಡರ್ನ್ ರಿವ್ಯೂ ಮೂಲದಿಂದ ಹೇಗೆಹಾಗೆ ಸಿನೀಮಾ ಕತೆಯಿಂ ದಲೂ ಈ ನಾಟಕದ ಕತೆ ತೀರ ಬೇರೆಯಾಗಿದೆ ಎನ್ನುವುದು ಸಿನೀಮಾ ಚಿತ್ರವನ್ನು ನೋಡಿರುವವರಿಗೆ ಕಾಣಬೇಕು.

ಬೆಂಗಳೂರು
ಮನ್ಮಥ ಸಂವತ್ಸರ
ಕೃಷ್ಣಜಯಂತಿ
9-9-1955.

ಶ್ರೀನಿವಾಸ.

## ಸೂತ್ರಧಾರ

ಆದಿಯಲಿ ಜಗದಾದಿದೈವಕಭಿನಮಿಸಿ
ನುಡಿಗೆ ನಾಡಿಗೆ ಶುಭವನೀಡೆಂದು ಬೇಡಿ,
ಪೂರ್ವದಲಿ ಜನಕಾಗಿ ಸಲೆದುಡಿದು ಶ್ರಮಿಸಿ
ಧನ್ಯತೆಯೊಳಾಳ್ದ ಹಿರಿಯರ ಹೆಸರ ಹಾಡಿ,
ನಾಟ್ಯಾದಿ ಕಲೆಯುಪಾಸಕ ಕುಲಕೆ ಮಣಿದು
ಕೇಳುತಿಹ ಆರ್ಯಮಿತ್ರರಿಗೆ ಕೈಮುಗಿದು,
ನಟಿಸ ಲಿರುವೆವು ನಮ್ಮ ಓರ್ವಕವಿ ಹಣೆದ
ಈ ನಾಟಕವನು : ನಮ್ಮಾಶಯುವ ಬಗೆದು
ಗುಣವಿಹುದೆ ಕೊಂಡು ದೋಷವನೆಲ್ಲ ಸಹಿಸಿ
ಬಂಧುಗಳೆ ನಮ್ಮೊಳೀ ದಿನ ಅನುಗ್ರಹಿಸಿ.

ಅಕ್ಬರ್ ಮಹಾಪ್ರಭುವಿನರಮನೆಯ ಚೇಟಿ
ಸುಂದರಿ ಅನಾರ್ಕಳಿಯ ಕತೆಯೊಂದ ಲೋಕ
ಈ ಮೊದಲು ಕೇಳಿಹುದು : ಇಂದು ನಾವಿಲ್ಲಿ
ಕಾಣುತಿರುವುದು ಅದರ ಹೊಸತೊಂದು ಪಾಕ

ಬಾದ್‌ಷಹನ ಕಿರಿಯರಸಿ ಅವನಿಗೊಪ್ಪಿಸಲು
ಇವಳ ಕರೆಸಿದಳು ತನ್ನೂರತ್ತಣಿಂದ ;
ಷಹಜಾದ್ ಸೆಲೀಂ ಇವಳ ಕಂಡು ಮನಸೋತು
ಮನದಿ ನಿಶ್ಚಯಿಸಿಹನು ಮದುವೆಯುಹೆನೆಂದೆ.

ಊರ ಗಾಯಕ ಇವಳ ಗುರು ಮೊದಲ ನಲ್ಲ
ಮರಳಿ ಊರಿಗೆ ಇವಳ ಕರೆದೊಯ್ಯಲೆಂದು
ರಾಜಧಾನಿಗೆ ಬಂದು ಬಾದ್‌ಷಹನ ಕಂಡು
ಬೇಡಿಹನು : ಕತೆಇಲ್ಲಿ ಮೊದಲಹುದು ಇಂದು.

ಅರಸಿಯುದ್ಯಾನದರಳಿಯ ಮರನತಳದಿ
ಜೊತೆಯಲಿ ಜುಲೇಯಿಕ ಅನಾರ್ಕಳಿಯರೀಗ
ಒಡತಿ ಬಹವೇಳೆಗೀ ಜಗಲಿಯಲಿ ಹಾಸು
ದಿಂಬುಗಳ ನಿರಿಸುತಿರುವರು ಬೇಗ ಬೇಗ

# ಅನಾರ್ಕಳಿ

## ದೃಶ್ಯ ೧

ಅಕ್ಬರ್ ಬಾದಷಹನ ಕಿರಿಯ ರಾಣಿಯ ಅರಮನೆಯ ಉದ್ಯಾನ. ದೊಡ್ಡಮರ ಒಂದರ ಅಡಿಯ ಜಗಲಿಯಮೇಲೆ ಇಬ್ಬರು ಎಳೆ ಹರೆಯದ ಹೆಣ್ಮಕ್ಕಳು ಅನಾರ್ಕಳೀ, ಜುಲೇಯಿಕಾ, ಪೀಠಗಳನ್ನು ಸರಿಯಾಗಿರಿಸಿ ಜಮಖಾನ ಹಾಸಿ ದಿಂಬುಗಳನ್ನು ಇತ್ತ ಅತ್ತ ಇಡುತ್ತಿರುವರು.

**ಜುಲೇಯಿಕಾ:** (ಹಾಸ್ಯಕ್ಕೆ ಹಾಡಾಗಿ) ಅನಾರ್ಕಳೀ ನನ್ನ ಗಿಳೀ

**ಅನಾರ್ಕಳಿ:** (ಪ್ರತಿಯಾಗಿ ಹಾಸ್ಯವಾಗಿ) ಏನು ಸಖೀ ಜುಲೇಯಿಕೀ

**ಜುಲೇ:** ಜುಲೇಯಿಕಾ ಕೀ ಆಯ್ತೇಕೇ

**ಅನಾ:** ಸಖೀಯ ಖೀಗೆ ಜೊತೆ ಬೇಕೇ

**ಜುಲೇ:** ನನ್ನ ಸಖಿಗೆ ಜೊತೆ ಷಹಜಾದಾ

**ಅನಾ:** ಈ ತಲೆಯ ಮೇಲೆ ಆ ಪಾದಾ

**ಜುಲೇ:** ಒಲಿದ ಇಬ್ಬರಲಿ ಯಾರ ಪಾದದಲಿ
ಯಾರದೆ ತಲೆ ಇರೆ ತಪ್ಪೇನು
ಮನ ಎರಡೊಂದಾಗಲಿ; ವಾದದಲಿ . . .

**ಅನಾ:** ಜೂಲೀ ಈ ಮಾತನ್ನು ಇಲ್ಲಿಗೆ ನಿಲ್ಲಿಸು. ಇದು ಹಾಸ್ಯಕ್ಕೆ ವಿಷಯವಲ್ಲ.

**ಜುಲೇ:** ಹಾಸ್ಯ ಮಾಡಿದವರು ಯಾರೇ ಗಿಳೀ? ಷಹಜಾದರು ನಿನ್ನೆ ರಾಣಿಯವರನ್ನು ಕೇಳಿದರು. ನಿನಗೆ ತಿಳಿಯದೇ?

**ಅನಾ:** ಇಲ್ಲ. ಏನು ಹೇಳು.

**ಜುಲೇ:** ನಿನ್ನನ್ನು ತನ್ನ ಪರಿವಾರಕ್ಕೆ ಕೊಡಬೇಕು ಎಂತ.

**ಅನಾ:** ಅದಕ್ಕೆ?

**ಜುಲೇ:** ರಾಣಿಯವರು, ಅದು ಹೇಗಾಗುತ್ತೆ, ಇವಳನ್ನ ಬಾದಷಹರಿಗೆ

ಒಪ್ಪಿಸಬೇಕು ಎಂತ ತರಿಸಿದೇನೆ, ಅವರಿಗೆ ಈ ಮಾತನ್ನು ಹೇಳಿದ್ದಾಗಿದೆ, ಈಗ ನಿಮಗೆ ಕೊಟ್ಟರೇನೆಂದಾರು, ಎಂದರು..

ಅನಾ : ಇಲ್ಲ ನನಗೆ ತಿಳಿಯಲಿಲ್ಲ.

ಜುಲೇ : ತಿಳಿಯದೇ ಇದ್ದರೆ ಏನು ಹೋಯ್ತು ? ಇತ್ತ ಬಿದ್ದರೆ ಹಾಲಿನಲ್ಲಿ ಅತ್ತ ಬಿದ್ದರೆ ತುಪ್ಪದಲ್ಲಿ. ರಾಣಿಯಾಗೋದೇ ಯುವರಾಣಿಯಾಗೋದೇ ಅಂತ ಅಲ್ಲವೆ. ಯಾವುದಾದರೂ ಆಗಲೇಳು.

ಅನಾ : ಊಳಿಗಕ್ಕೆ ತಂದ ಹಳ್ಳೀ ಹುಡುಗೀನ ನೀನಾದರೂ ಹಾಸ್ಯ ಮಾಡೋದೆ, ಅಕ್ಕ. ಮಾಡು ಮಾಡು.

ಜುಲೇ : ಲೇ ಹುಚ್ಚಿ, ಹಾಸ್ಯ ಹಾಸ್ಯ ಅನ್ನುತ್ತಾ ತಿಕ್ಕಲಾಟ ಆಡಬೇಡ. ಷಹಜಾದ ಈಗ ಇಲ್ಲಿಗೆ ಬರುತ್ತಾರೆ. ಸ್ವಲ್ಪ ಮುಂದಾಗಿ ನಾನಲ್ಲಿ ಬರುತ್ತೇನೆ ಅನಾರ್ಕಳೀನ ಅಲ್ಲಿ ಬರುವ ಹಾಗೆ ಮಾಡು, ಎಂದರು. ಅದಕ್ಕಾಗಿ ನಾನು ನಿನ್ನ ಕರೆತಂದೆ.

ಅನಾ : ಅಯ್ಯೋ ! ಮೊದಲೇ ಹೇಳಬಾರದಾಗಿತ್ತೆ ಅಕ್ಕಾ ? ಹೀಗೆ ಬಂದು ಬಿಟ್ಟದೇನಲ್ಲಾ !

ಜುಲೇ : ಹೇಗೂ ಬಂದಿಲ್ಲ, ಸರಿಯಾಗಿಯೇ ಬಂದಿದೀಯೆ. ಅವರು ಬಂದಾಗ ಪ್ರೀತಿಯಿಂದ ಮಾತನಾಡಿಸು. ಯಾರೇನಂತಾರೋ ಅಂತ ಭಯ ಇಟ್ಟುಕೋ ಬೇಡ.

ಅನಾ : ನೀನು ಭಯ ಬೇಡಾ ಅಂತೀ ; ನನಗೆ ಭಯ ಆಗುತಾ ಇದೆ..

ಜುಲೇ : ಭಯಾನೂ ಇದೆ. ಇಲ್ಲಿ ಅಲ್ಲ ; ಬೇರೆ ಕಡೆ.

ಅನಾ : ಯಾವ ಕಡೆ ಹೇಳು.

ಜುಲೇ : ಲೇಲಾಗೆ ನಿನ್ನ ಮೇಲೆ ಹೊಟ್ಟೆವುರಿ. ನಿನ್ನ ಕಾಣೋಕೆ ಮೊದಲು ಷಹಜಾದರು ಅವಳನ್ನು ಮೆಚ್ಚಿದ್ದರು. ತನ್ನ ಆಸೆ ಅಳಿಸಿತಲ್ಲ ಎಂತ ಅವಳಿಗೀಗ ದುಃಖ.

ಅನಾ : ಅಯ್ಯೋ ಪಾಪ. ನಿಜವಾಗಿ, ಅವಳು ಯಾರು ? ಇವರ ಹತ್ತಿರೆಲ್ಲಾ ಬಹಳ ಸಲಿಗೆಯಿಂದ ನಡೆಯುತಾಳೆ.

ಜುಲೇ : ಒಬ್ಬ ಸರದಾರನ ಮಗಳು. ನಮ್ಮ ತಂದೆಯುವರೂ ಸರದಾರರು. ಲೇಲಾ ಬಾದಷಹರ ಕೈಯಲ್ಲಿ ಬೆಳೆದವಳು. ಷಹ

ಜಾದರು ಅವಳನ್ನು ಮದುವೆಯಾದರೆ ಬಾದಷಹರಿಗೆ ಬಹಳ ಸಂತೋಷ.

ಅನಾ: ಹಾಗಂತೀಯಾ? ಹಾಗಾದರೆ ನಾನು ಮರೆಯಾಗಿ ಇದ್ದು ಬಿಡುತ್ತೀನೆ.

ಜುಲೇ: ನಿನ್ನಿಚ್ಛೆಯೇ? ಇಷ್ಟಕ್ಕೆ ಇವತ್ತು ಅವಳಿಗಾದದ್ದು ನಾಳೆ ನಿನಗಾಗಬಹುದು. ಇಲ್ಲ ನೀನಿಲ್ಲಿಂದ ಹೊರಟೇ ಹೋಗಬಹುದು.

ಅನಾ: ಎಲ್ಲಿಗೆ ಜೂಲೀ?

ಜುಲೇ: ನಿಮ್ಮೂರ ಗವಾಯಿ ಬಂದಿದಾನಂತೆ. ನಿನ್ನ ಹಿಂದಕ್ಕೆ ಕಳುಹಿಸಬೇಕು ಅಂತ ಬಾದಷಹರನ್ನೇ ಕೇಳಿದಾನಂತೆ. ಅದರ ವಿವರ ಎಲ್ಲಾ ಗೊತ್ತಾಗಲಿಲ್ಲ. ರಾಣಿಯವರಿಗೆ ಸುದ್ದಿಬಂತು. ಅಂತೂ ಹಳ್ಳಿ ಹುಡುಗಿ ಅಂತ ನೀನು ಸಾಮಾನ್ಯ ಆಗಲಿಲ್ಲ. ಬಂದ ವಾರದಲ್ಲಿ ಒಂದರಮನೇನೆಲ್ಲ ತಲೆಕೆಳಗು ಮಾಡುತಾ ಇದೀಯ.

ಅನಾ: ಬಾದಷಹರು ಏನೆಂದರು?

ಜುಲೇ: ಅವರ ಮಾತಿರಲಿ. ನೀನೇನಂತೀ?

ಅನಾ: ಇದರಲ್ಲಿ ನನ್ನ ಮಾತು ಏನು ಲೆಕ್ಕ?

ಜುಲೇ: ಲೆಕ್ಕ ಇಲ್ಲದಿದ್ದರೂ ಮಾತಿರಬಹುದಲ್ಲ.

ಅನಾ: ನನ್ನದಿಲ್ಲಮ್ಮ.

ಜುಲೇ: ಅದೇ ಸರಿ. ಮೊನ್ನೆಯಾಗಿದ್ದರೆ ಊರಿಗೆ ಹೋಗುತೀನೆ ಎನ್ನಬಹುದಾಗಿತ್ತು. ಷಹಜಾದರು ನಿನ್ನೆ ಹಾಗೆ ನೋಡಿದ ಮೇಲೆ?

ಅನಾ: ನೋಡು ತಿರುಗಿ ನಿನ್ನ ಹಾಸ್ಯ.

ಜುಲೇ: ತಿರುಗಿ ಹಾಸ್ಯ ಅಂತೀಯಾ? ಹಾಗಾದರೆ ನಿನ್ನೆ ಆಮೇಲೆ ನಾನೂ ನೀನೂ ಆಡಿಕೊಂಡ ಮಾತೆಲ್ಲ ಕನಸು ಅನ್ನು.

ಅನಾ: ನಿನ್ನೆ ಮೊದಲು ಹಾಗನ್ನಿಸಿತು. ಆಮೇಲೆ ಇಂಥಾ ಭಾಗ್ಯ

ಉಂಟೇ ಅಂತ ಸಂದೇಹ ಆಯಿತು. ನಾನೇನೊ ತಪ್ಪು ತಿಳಿದುಕೊಂಡೆ.

**ಜುಲೇ:** ತಪ್ಪು ತಿಳಿದುಕೊಂಡೇ ಅಂತ ಹುಚ್ಚಾಟ ಮಾಡಬೇಡ ಜಾಣೆ. ನೀನು ತಪ್ಪು ತಿಳುಕೊಂಡಿರಬಹುದು. ನಾನು ತಪ್ಪು ತಿಳುಕೊಳ್ಳಲಿಲ್ಲ. ಹೇಳೋ ಮಾತು ಕೇಳು. ಅದೃಷ್ಟ ತಂದ ಭಾಗ್ಯಾನ ಬಾ ಅಂತ ಹಿಡುಕೋ. ರೂಪುಳ್ಳವಳು ರಾಣಿ ಅರಮನೇಲಿ. (ಅರಮನೆಯುತ್ತಣ ದ್ವಾರದಲ್ಲಿ ಷಾಹಜಾದ ಸೇಲೀಮು ಕಾಣುವನು) ಅಕೋ ಷಹಜಾದರು ಬಂದರು. ದಾಸಿಯಾಗಿ ಬಾ, ಅಂದಾರು: ಯುವರಾಣಿಯಾಗಿ ಕರಕೊಳ್ಳಿ ಅನ್ನು. (ಎಂದು ಮೆಲ್ಲನೆಯ ದನಿಯಲ್ಲಿ ಹೇಳಿ ಒಂದು ಕಡೆಗೆ ಹೊರಟು ಹೋಗುವಳು).

**ಅನಾ:** ಜೂಲೀ ಒಂದು ಕ್ಷಣ ಇರು.

**ಸಲೀಂ:** ಒಬ್ಬಳೇ ಆದೆ ಎಂತ ಭಯವೇ? ಜೊತೆಗೆ ನಾನಿದೇನೆ. (ಎಂದು ಮುಂದಕ್ಕೆ ಒಂದು ಅನಾರ್ಕಲಿಯ ಎದುರು ನಗುಮೊಗದಿಂದ ನಿಲ್ಲುವನು).

**ಅನಾ:** (ಅವನನ್ನು ಒಮ್ಮೆ ನೋಡಿ ಕಣ್ಣು ತಗ್ಗಿಸಿ ಬಾಗಿ ಸಲಾಂ ಮಾಡಿ) ನಿಮ್ಮ, ಕೃಪೆ. ಜಹಾಪನಾ.

**ಸಲೀಂ:** ಹಾಡಿನಷ್ಟೇ ಇಂಪು ಮಾತು. ಏನಾಶ್ಚರ್ಯ? ಹಾಡು ಯಾರೋ ಕಲಿಸಿದ್ದು. ಧ್ವನಿ ದೇವರಿಂದ ಬಂದದ್ದು ನಿಮ್ಮೂರು ಯಾವುದೆಂದರು?

**ಅನಾ:** ವನಮಾಲೀ

**ಸಲೀಂ:** ವನಮಾಲೀ?

**ಅನಾ:** ಹೌದು ಜಹಾಪನಾ.

**ಸಲೀಂ:** ವನಮಾಲಿ ಎನ್ನುವ ಊರಿನ ಗವಾಯ್ ಒಬ್ಬ ನಿನ್ನೆ ಬಂದಿದ್ದ ಎಂದರು (ಅನಾರ್ಕಲಿ ಬೆಚ್ಚುವಳು) ಬಹುಚೆನ್ನಾಗಿ ಹಾಡಿದನಂತೆ.

**ಅನಾ:** ಹೌದು ಜಹಾಪನಾ. ಅವರೇ ನನಗೆ ಹಾಡು ಕಲಿಸಿದವರು.

(ಕಣ್ಣಿನಿಂದ ನೀರು ತೊಟ್ಟು ಬೀಳುವುದು)

**ಸಲೀಂ:** ಏಕೆ ಕಣ್ಣೀರು ಚಿನ್ನಾ?

ಅನಾ : ಊರ ನೆನಪು ಬಂತು.

ಸಲೀಂ : ಓಹೊ ಬರತಕ್ಕದ್ದೆ. ವಾರ ಬಿಟ್ಟು ಅಲ್ಲಿಗೆ ಹೋಗೋಣ. ನೀನು ನಮ್ಮ ಮಹಲ್‌ಗೆ ಬರುತೀಯಾ ?

ಅನಾ : ರಾಣಿಯವರ ಅಪ್ಪಣೆ ಜಹಾಪನಾ ?

ಸಲೀಂ : ರಾಣಿಯವರನ್ನು ನಾನು ಒಪ್ಪಿಸುತ್ತೇನೆ. ನಿನ್ನ ಇಷ್ಟ ಹೇಳು.

ಅನಾ : ಇಷ್ಟ ತಿಳಿದಿದೆ : ಬೇರೆಯಾಗಿ ಹೇಳಬೇಕೇ ?

ಸಲೀಂ : ತಿಳಿಸುವುದಕ್ಕಲ್ಲ. ಕೇಳುವ ಕಿವಿಯ ಸಂತೋಷಕ್ಕೆ.

ಅನಾ : ನೀವು ಮೆಚ್ಚಿ ನಾನೊಂದು ಪದಾರ್ಥ. ನಿಮಗಾಗಿ ನಾನು ಪ್ರಾಣ ಬಿಟ್ಟೇನು.

(ಜುಲೇಯಿಕಾ ತಾನು ಬರುವುದು ತಿಳಿಯುವಂತೆ ಸ್ವಲ್ಪ ಸದ್ದು ಮಾಡುತ್ತಾ ಬರುವಳು).

ಜುಲೇ : ರಾಣಿಯವರು ದಯಮಾಡಿಸಿಯಾರು. ಬೇರೆ ಕಡೆ ಹೋದರೆ ಸ್ವಲ್ಪ ಹೊತ್ತು ನಡೆದಾಡಬಹುದು.

ಸಲೀಂ : ನೀನು ಜಾಣೆ ಜೂಲೀ (ಎಂದು ಅನಾರ್ಕಳಿಯನ್ನು ಕರೆದುಕೊಂಡು ಉದ್ಯಾನದೊಳಗಡೆಗೆ ಹೋಗುವನು. ಕೆಲವು ನಿಮಿಷ ಬಿಟ್ಟು ಮತ್ತೊಬ್ಬ ತರುಣಿ ಅರಮನೆಯತ್ತಣಿಂದ ಬರುವಳು. ಅವಳು ಲೇಲಾ)

ಲೇಲಾ : ಜುಲೇಕಾ

ಜುಲೇ : ಏನು ಲೇಲಾ ? ಸ್ಥಳ ಅಣಿ ಮಾಡ ಬಂದೆಯಾ ? ಬಾ.

ಲೇಲಾ : ಇದೇನು ನೀನು ಒಬ್ಬಳೇ ? ಅನಾರ್ಕಳಿ ಬರಲಿಲ್ಲ ?

ಜುಲೇ : ಬಂದಳು ; ತಿರಿಗಿ ಒಳಗೆ ಹೋದಳು.

ಲೇಲಾ : ಇಲ್ಲಿ ಷಹಜಾದರು ಬರಲಿಲ್ಲ ?

ಜುಲೇ : ಕಾಣಲಿಲ್ಲ.

ಲೇಲಾ : ಇಲ್ಲಿ ಬಂದರು ಅಂತ ಖತೀಜಾ ಹೇಳಿದಳು ?

ಜುಲೇ : ಹಾಗಾದರೆ ಎರಡು ನಿಮಿಷಕ್ಕೆ ಮೊದಲು ಅಲ್ಲಿ ಯಾರೋ ಹೋಗುತ್ತಿದ್ದರು, ಅವರು ಷಹಜಾದರೇ ಇರಬಹುದು..

ಲೇಲಾ : ಎಲ್ಲಿ ?

ಜುಲೇ : (ಸಲೀಂ ಅನಾರ್ಕಳಿ ಹೋದ ದಿಕ್ಕಿಗೆ ಎದುರ ದಿಕ್ಕನ್ನು ತೋರಿಸುತ್ತ) ಅಲ್ಲಿ; ಆ ಮರದ ಹತ್ತಿರ.

ಲೀಲಾ : ಅಲ್ಲೇ ? (ಎಂದು ಅತ್ತ ಹೋಗುವಳು).

ಜುಲೇ : (ತನ್ನಲ್ಲಿ) ನನ್ನ ತಪ್ಪಿಸಿ ತಾನು ಹಿಡಿದಳು; ತನ್ನ ತಪ್ಪಿಸಿ ಇನ್ನೊಬ್ಬಳು ಹಿಡಿದಳು. ತನ್ನ ಪ್ರಾಪ್ತಿ ಇಷ್ಟೇ ಅಂತ ಸುಮ್ಮ ನಿರೋದು ತಿಳೀಬೇಡ ದಡ್ಡೀಗೆ? ಮುಸುಡಿ ಇದ್ದರಾಯಿತೆ, ಮೂಳೆ ಇಲ್ಲದೆ? ಇಷ್ಟರಮೇಲೆ ನಾನು ಇವಳಿಗೆ ಸಹಜಾದ ರಿರೋ ಸ್ಥಳ ತೋರಿಸುತೇನೆ ಎಂತ ತಿಳುಕೊಂಡಿದ್ದಾಳೆ. ನಮ್ಮ ಬುದ್ಧೀನೇ ಇಷ್ಟು. ಹೆಣ್ಣಿಂದಮೇಲೆ ಬುದ್ಧಿ ಮೊಟಕು. ಅದರಿಂದಲೇ ಗಂಡು ಇಷ್ಟೆಲ್ಲಾ ಆಟ ಆಡೋದು.

(ಮತ್ತೊಬ್ಬ ಹೆಣ್ಣು ಅರಮನೆಯಿಂದ ಬರುವಳು. ಅವಳು ಖತೀಜಾ)

ಖತೀ: ಜೂಲೀ

ಜುಲೇ : ಬಾ ಖತೀ

ಖತೀ : ರಾಣಿಯವರು ದಯಮಾಡಿಸುತಿದಾರೆ.

ಜುಲೇ: ದಯಮಾಡಲಲ್ಲ. ಎಲ್ಲ ಅಣಿಯಾಗಿದೆ.

ಖತೀ: ಬಾದಷಹರು ಯಾರೋ ಗವಾಯನ್ನು ಕಳುಹಿಸಿದಾರಂತೆ, ತಾವೂ ದಯಮಾಡುತಾರಂತೆ. ಗವಾಯ್ ಇಲ್ಲಿ ಹಾಡುತಾ ನಂತೆ. ಅನಾರ್ಕಳಿ ಎಲ್ಲಿ? ಇಲ್ಲಿಗೆ ಬಂದಳಲ್ಲ.

(ಒಂದು ಕಡೆಯಿಂದ ಅನಾರ್ಕಳಿ ಬರುವಳು). ಅನಾರ್ಕಳಿ, ರಾಣೀ ಸಾಹೇಬಾ ನಿನ್ನ ಕೇಳಿದರು. ಈಗ ಇಲ್ಲಿ ಬರುತ್ತಾರೆ. ನೀನು ಹಾಡಬೇಕಂತೆ

ಅನಾ : ಆಗಲಕ್ಕ ಹಾಡದೆ ಏನು? ನೀನೋ ಜೂಲೀನೋ ತಂಬೂರ ಹಿಡೀ ಬೇಕು, ಅಷ್ಟೆ.

ಖತೀ: ಅದೇನು ಕಷ್ಟ? ನೀನು ಹಾಡೋ ಹೊತ್ತಿನಲ್ಲಿ ತಾನಸೇನ ತಂಬೂರ ಹಿಡೀಬಹುದು

ಅನಾ : ಅಯ್ಯೋ ಅಕ್ಕ !

ಜುಲೇ: ಖತೀ ಈ ಮಾತು ಗಟ್ಟಿಯಾಗಿ ಹೇಳಬೇಡ. ಅನಾರ್ಕಳೀಗೆ ಏನಾಗುತ್ತೋ ಬಿಡುತ್ತೊ. ನಿನಗನಕ ಗಡೀಪಾರು.

ಖತೀ: ಯಾರು ಗಡೀಪಾರು ಮಾಡೋರು?

ಜುಲೇ: ಬಾದಷಹರು.

ಖತೀ: ಬಾದಷಹರು ಗಡೀಪಾರು ಅಂದರೆ ಷಹಜಾದರ ಕಾಲು ಹಿಡಿಯುತ್ತೇನೆ.

ಜುಲೇ: ನೀ ಕಾಲು ಹಿಡಿದೀ. ಅವರು ಕಾಯಬೇಕಾದ್ದೇನು?

ಖತೀ: ಅನಾರ್ಕಳೀ ಗೆಳತೀ ಅಂತ.

ಅನಾ: ಅಯ್ಯೊ ಅಕ್ಕಾ ಯಾರಾದರೂ ಕೇಳಿಯಾರು!

ಖತೀ: ಕೇಳಲೇಳು. ನಾನು ನಿನ್ನ ಗೆಳತೀ ಅನ್ನೋಕೆ ನನಗೇನು ಭಯ?

ಜುಲೇ: ನನಗೂ ನಿನಗೂ ಭಯ ಯಾತರದು ಖತೀ. ಉಚ್ಚಕ್ಕೆ ಏರಿರೋ ನಕ್ಷತ್ರ ನಮ್ಮದು.

(ಅರಮನೆಯತ್ತಣಿಂದ ರಾಣಿ ಬರುವಳು. ಹಿಂದೆ ಪರಿವಾರ. ಇಲ್ಲಿರುವ ಹೆಣ್ಮಕ್ಕಳು ರಾಣಿಗೆ ಮರ್ಯಾದೆಯಿಂದ ಬಾಗಿ ನಮಸ್ಕರಿಸುವರು).

ರಾಣಿ: ಷಾಹಜಾದರು ಬರುತೇನೆಂದಿದ್ದರು. ಇನ್ನೂ ಬರಲಿಲ್ಲ?

ಜುಲೇ: ಸನ್ನಿಧಾನ ದಯಮಾಡಿಸುವ ಮುನ್ನ ಅವರು ಇತ್ತ ಬರುವು. ದಿಲ್ಲ, ಖುದಾವಂದ್

(ದೂರದಲ್ಲಿ ಮರಗಳ ಮಧ್ಯೆ ಸಲೀಂ ಕಾಣಿಸಿಕೊಳ್ಳುವನು).

ಖತೀ: ಅಲ್ಲಿ ದಯಮಾಡಿಸುತ್ತಿದಾರೆ ಮಾಜೀ.

(ಷಾಹಜಾದನ ಹಿಂದೆ ಲೇಲಾ ಕಾಣುವಳು).

ರಾಣಿ: ಒಳ್ಳೆಯದು. ಅನಾರ್ಕಳೀ, ಷಾಹಜಾದರು ಮರಳಿ ನಿನ್ನ ಹಾಡು ಕೇಳಬೇಕೆಂದರು. ಚೆನ್ನಾಗಿ ಹಾಡು. ಸಂತೋಷ ಪಡಿಸು.

ಅನಾ: ಅಪ್ಪಣೆ ಖುದಾವಂದ್.

(ಸಲೀಂ ಗಂಭೀರವಾಗಿ ಬಳಿಸಾರಿ ಬಾಗಿ ಮರ್ಯಾದೆ ತೋರಿ ನಿಲ್ಲುವನು).

ರಾಣಿ: ಬನ್ನಿರಿ ಷಾಹಜಾದ್. ಈ ಪೀಠದಲ್ಲಿ ಮಂಡಿಸಿರಿ (ಸಲೀಂ ಆಕೆ ತೋರಿಸಿದ ಪೀಠದಮೇಲೆ ಕುಳ್ಳಿರುವನು. ಇಷ್ಟು ಹೊತ್ತಿಗೆ ಲೇಲಾ ಬಂದು ಪರಿವಾರದಲ್ಲಿ ಸೇರಿಕೊಳ್ಳುವಳು).

ಲೇಲಾ: (ಜುಲೇಯಿಕಾಗೆ ಬೇರೆಯಾಗಿ) ನೀನು ನನ್ನ ಬೇಕು ಅಂತ ತಪ್ಪು ಕಡೆಗೆ ಕಳುಹಿಸಿದೆ ಅಲ್ಲ? ನಿನ್ನ ಗೆಳತಿ ಷಹಜಾದರೊಂದಿಗೆ ಇದ್ದದ್ದನ್ನು ನಾನು ನೋಡಿದೆ (ಜುಲೇಯಿಕಾ ಮಾತನಾಡುವುದಿಲ್ಲ)

ರಾಣಿ: (ಷಾಹಜಾದನಿಗೆ) ಅನಾರ್ಕಳೀಗೆ ಹೇಳಿದೇನೆ. ಹಾಡುತಾಳೆ, ಕೇಳೋಣಾಗಲಿ.

ಸಲೀಂ: ಉಪಕಾರವಾಯ್ತು ಮಾಜಿ.

ರಾಣಿ: ಬಾ ಅನಾರ್ಕಳಿ. ಕುಳಿತುಕೊ, ತಂಬೂರ ಯಾರು ಹಿಡಿಯುತೀರೆ? ಖತೀಜಾ, ಜುಲೇಕಾ?

ಖತೀ: ಆಯಿತು ಮಾಜೀ.

(ಎಲ್ಲರೂ ಕುಳಿತುಕೊಳ್ಳುವರು).

ರಾಣಿ: ಸರಿ. ಹಾಡು.

ಅನಾ: (ಹಾಡುವಳು).

ಬೇಹಾಗ್ ಆದಿತಾಳ.

ಎಂತು
ಬಣ್ಣಿಸುವೆನು ಸುಂದರಿಯಾ
ಬಣ್ಣಿಸಲಸದಳ ಎಂಬುದನರಿತೂ
ಎಂತು
ಬಣ್ಣಿಸುವೆನು ಸುಂದರಿಯಾ.

ಅರಳಿದ ಮಲ್ಲಿಗೆ ಮಲರ ಹೊಸ
ಜಸದ ಬೆಡಗಿನ ಕಣ್ಣು
ಅರಳದ ಮೊಲ್ಲೆಯ ಮುಗುಳು ಸಾ
ಲಿರಿಸಿದುವೆನೆ ಸುಲಿ ಹಲ್ಲು.
ಪರುವದ ರಾತ್ರಿ ಪೆರೆಕಳೆತುಂಬಿ

ಸೊರೆದು ಸೂಸೆ ಸುಧೆ ಸುರಿಯುತೆ ಧರೆಗೆ
ಹರಿದೆಲ್ಲೆಡೆಯನು ನಲಿಸುವ ತೆರದೆ
ಮಿರುಗಿ ಮೆರೆವ ಮೆಯ್ಸಿರಿಯೀ ಪರಿಯ
ಎಂತು
ಬಣ್ಣಿಸುವೆನು ಸುಂದರಿಯಾ

ವಸಂತಸ್ಸೈದಿದನೆಂದು ತಳಿತ
ಮಾವಿನ ತಳಿರೊಲು ಬೆರಳು
ಸಾಗರದಾಳದೊಳಾಳಿ ತಂದ
ಶಂಖದ ಬೆಡಗಿನ ಕೊರಳು.
ಅರಗಿಳಿ ಮರಿಕೋಗಿಲೆ ಗೊರವಂಕ
ಸುರಪದಿಶಾಸುತೆ ಉಷೆಯ್ಯೆತರವ
ಭರದೆ ಸಾರಲೆತ್ತಿದ ದನಿಬಿಂಕ
ಇರಲೆನ್ನುತಿರುವ ಇಪಳಿಂಚರವ
ಎಂತು
ಬಣ್ಣಿಸುವೆನು ಸುಂದರಿಯಾ

ಎಡಬಲ ಕೀಳ್ಮೇಲೆಂದು ಹೋರಟೆ
ಆಡುವ ಅಂಗನ್ಯಾಸ
ಇದು ಅದು ಉದು ಮತ್ತೊಂದು ಸೇರುತ
ಮೂಡಿಹ ಚೆಲುವ ಸಮಾಸ.
ಈ ಮೊದಲು ಮಾಡಿದೆಲ್ಲ ಮಾಟ
ಸಾಮಾನ್ಯವಾಯಿತೆನ್ನುವ ಛಲದಲಿ
ನೇಮದಿಂದಿವಳ ನಿರ್ಮಿಸಿ ಬೊಮ್ಮ
ಭಾಮೆಯರೋಳಿಗೆ ತಲೆಮಣಿ ಎಂದಿರೆ
ಎಂತು
ಬಣ್ಣಿಸುವೆನು ಸುಂದರಿಯಾ

ರಾಣಿ: ಚೊಕ್ಕವಾಗಿ ಹಾಡುತೀಯೆ ಅಕ್ಕ. ಏನೆನ್ನುತ್ತೀರಿ ಷಾಹಜಾದ್?

ಸಲೀಂ: ಹೌದು. ಏನದ್ದಿ? ಇದನ್ನು ಕಟ್ಟಿದವರು ಯಾರೊ?

ರಾಣಿ: ಯಾರು ಅನಾರ್ಕಳೀ?

ಅನಾ: ನಮ್ಮೂರ ಗವಾಯ್ ಖುದಾವಂದ್.

ರಾಣಿ: ತಾನೇ ಕಟ್ಟಿ ತಾನೇ ಹಾಡುತಾನೆಯೇ? ಒಳ್ಳೇ ಬುದ್ಧಿವಂತ.

ಅನಾ: ಹೌದು ಖುದಾವಂದ್.

ಸಲೀಂ: ಯಾರನ್ನ ನೋಡಿ ಇದನ್ನು ಬರೆದನೋ!

(ಅನಾರ್ಕಳಿ ತಲೆತಗ್ಗಿಸಿ ಸುಮ್ಮನಿರುವಳು).

ರಾಣಿ: ಇನ್ನು ಯಾರನ್ನೋ ನೋಡಿ ಯಾಕೆ ಬರೆಯಬೇಕು? ಇವಳನ್ನೇ ನೋಡಿ ಬರೆದಿರಬೇಕು. ಹೌದೇನೇ?

ಅನಾ: (ತಲೆಯನ್ನು ತಗ್ಗಿಸಿಕೊಂಡೇ) ಹೌದು ಖುದಾವಂದ್ (ಎನ್ನುವಳು. ಸೆರೆಕಟ್ಟುವುದು. ಕಣ್ಣಿಂದ ನೀರು ಬೀಳುವುದು).

ಲೀಲಾ: (ಜುಲೇಯಿಕಾಗೆ) ನೋಡಿದೆಯಾ ಇವಳ ಜಂಭ!

ಜುಲೇ: (ಮೆಲ್ಲನೆ ಅವಳಿಗೆ) ಜಂಭ ಏನು? ನಿಜವಾಗಿಯೂ ಬರೆದಿರಬಹುದಲ್ಲ!

ರಾಣಿ: ಇವಳಿಗೆ ಅನಾರ್ಕಳೀ ಎಂತ ಹೆಸರು ಕೊಟ್ಟವನೂ ಅವನೇ. ಅಲ್ಲವೇ ಅನಾರ್ಕಳೀ?

ಅನಾ: ಹೌದು ಖುದಾವಂದ್.

ರಾಣಿ: ನಮ್ಮೂರ ಹತ್ತಿರವೇ ಇವರೂರು.

ಸಲೀಂ: ಓ ಈಗ ಗೊತ್ತಾಯಿತು.

ರಾಣಿ: ಏನು?

ಸಲೀಂ: ಇಷ್ಟು ರೂಪು ಹೇಗೆ ಎನ್ನುವುದು.

ರಾಣಿ: ಮಾಜೀನ ಹಾಸ್ಯ ಮಾಡುತೀರೋ ಷಾಹಜಾದ್? ಇವಳ ಮಾತನ್ನು ಯಾರೋ ಹೇಳಿದರು. ಹೇಳಿ ಕಳುಹಿಸಿ ಕರೆಸಿದೆ.

ಸಲೀಂ: ತುಂಬ ಒಳ್ಳೆಯದು ಮಾಡಿದಿರಿ. ರಾಜ್ಯದ ಒಳ್ಳೆಯ ವಸ್ತುವೆಲ್ಲ

ರಾಜಧಾನಿಯಲ್ಲಿರಬೇಕು. ರಾಜಧಾನಿಯಲ್ಲಿ ಒಳ್ಳೆಯದೆನ್ನುವುದೆಲ್ಲ ಅರಮನೆಯಲ್ಲಿರಬೇಕು.

ರಾಣಿ: ಮುಂದಿನ ಮಾತು ಹೇಳುವುದಿಲ್ಲ?।

ಸಲೀಂ: ಅಪ್ಪಣೆಯಾಗಬೇಕು.

ರಾಣಿ: ಅರಮನೆಯಲ್ಲಿ ಒಳ್ಳೆಯದು ಎನ್ನುವುದೆಲ್ಲ ಷಾಹಜಾದರಲ್ಲಿರಬೇಕಲ್ಲ?

(ಹೆಣ್ಮಕ್ಕಳೆಲ್ಲ ನಕ್ಕು ತಡೆದುಕೊಳ್ಳುವರು).

ಸಲೀಂ: (ನಕ್ಕು) ನಾನು ಆಸೆಬಾಕ; ಮಾಜೀ ಬಲ್ಲಿರಿ.

ರಾಣಿ: ಅದೇನು ತಪ್ಪು? ಇವಳನ್ನು ಹತ್ತಿರ ಇರಿಸಿಕೊಳ್ಳೋಣ ಎಂತ ನನಗೇ ಆಸೆಯಾಗುತ್ತದೆ. ಬಾ ಅನಾರ್ಕಲೀ, ಇನ್ನೊಂದು ಹಾಡು ಹಾಡೇ.

ಅನಾ: ಅಪ್ಪಣೆ ಖುದಾವಂದ್.

ಜಂಜೂಟ ಆದಿತಾಳ

ನೀಲಲೋಚನೇ ನಿನ್ನ ನೋಟ
ನನ್ನೆದೆಯನು ಕಾಡುವ ಈ ಕಾಟ,
ಏನ ಹೇಳಲೇ, ಇನಿದಾಯ್ತೆನಗೆ:
ಯಾವ ಮಂತ್ರ ಇದು, ಯಾವ ಮಾಟ?
ನೀಲಲೋಚನೇ

ಕಾಮ ನನ್ನ ಮನವ ಕೊರೆವ
ಬಾಣಕೆ ಒಂದು ಬಿಲ್ಲ ತರುವ
ಭರದಲಿ ಅರಸುತ ಕಂಡನೆ ನಿನ್ನ
ಬಾಗಿ ನಿಂತ ಈ ಹುಬ್ಬಿನ ಮುರಿವ.
ನೀಲಲೋಚನೇ

ನಿನ್ನ ಕಣ್ಣು ಇವು ಕೇಳೆ ರಮಾವರ
ಮಿಾಯುವ ಅಮೃತ ದೀಪ್ತಿ ಸರೋವರ:
ಇವು ಬೆಳಗುತಲಿರೆ ಲೋಕಕೆ ಏತಕೆ

ತಾರೆ, ಏತಕೆ ಚಂದ್ರ ದಿವಾಕರ?
ನೀಲಲೋಚನೆ.

ರಾಣಿ: ಈ ಹಾಡೂ ಬಹಳ ಚೆನ್ನಾಗಿದೆ ಅಲ್ಲ, ಷಾಹಜಾದ್?

ಸಲೀಂ: ಹೌದು ಮಾಜಿ. ಗವಾಯ್ ಜಾಣ. ಪಾಠವೂ ಚೆನ್ನಾಗಿ ಆಗಿದೆ.

ರಾಣಿ: ನೀವು ಏನಾದರೂ ಒಂದು ಪದ್ಯ ಹೇಳುತ್ತಿರೋ? ಈಚೆಗೆ ಬರೆದದ್ದು ಇರಬೇಕಲ್ಲ.

ಸಲೀಂ: ಹೆಣ್ಮಕ್ಕಳ ದನಿಯೆದುರಿಗೆ ನಮ್ಮ ದನಿ ಏನು ದನಿ?

ರಾಣಿ: ಗಂಡು ಮಕ್ಕಳಿಗೆ ಹೆಣ್ಮಕ್ಕಳ ದನಿ ಚೆನ್ನ. ಹೆಣ್ಮಕ್ಕಳಿಗೆ ಗಂಡು ಮಕ್ಕಳ ದನಿ ಚೆನ್ನ. ಆ ಚೆನ್ನ ತಾನೆ ಒಂದು ತರವೆ? ನೂರು ತೆರ ಇದೆ. ಹೇಳಿ; ಕೇಳೋಣ.

ಸಲೀಂ: ಆಗಲಿ; ಮಾಜಿ ಕೇಳುವುದಾದರೆ ಒಲ್ಲೆ ಎನ್ನಲಿ ಏಕೆ? ಇದು ನಿನ್ನೆ ಬರೆದ ಪದ್ಯ.

ಮೋಹನ.

ಇದು ಸೊಗಸು ಸೌಂದರ್ಯ,
ಇದು ಸೊಗದ ಬೀಡು;
ಇದು ಜೀವದಾನಂದ
ದುನ್ನತಿಯ ಕೋಡು;
ಇದು ಹಗಲು ರಾತ್ರಿಗಳ
ಯಾಮಗಳ ಪಂಕ್ತಿ
ಬರಿದೆ ಹರಿಹರಿದೊಮ್ಮೆ
ತಂದಿಹ ವದಂತಿ.
ಹಿಂದೆ ಎಂದೂ ಕಾಣ
ದಿದ್ದರೂ ಉಸಿರು
ಕಂಡುದಕು ಮಿಗಿಲು ನೆನೆ
ಯುವ ಚೆಲುವ ಕುಸುರು.

ಇದನು ಬಯುಸಿಯೆ ಜೀವ
ಬಾಳಿಲ್ಲ ಕಾಯ್ದು
ಬರಲಿಲ್ಲವೇ ಎಂದು
ಮರುಗಿದುದು ಸುಯ್ದು.
ಸ್ವರ್ಗದಲಿ ಕಾದಿರುವ
ಆನಂದ ಇಂತು
ಎಂದೆಮಗೆ ತೋರುವುದೆ
ಈ ಬೆಡಗ ಹೊಂತು.
ಎದೆಯ ಅರವಿಂದವನು
ಅರಳಿಸುವೆನೆಂದು
ಹೊರವಟ್ಟ ಸೂರ್ಯ ಮೂ
ಡಲದಿಸೆಯ ಸಂದು
ಉದಯಗಿರಿ ಶಿಖರದಲಿ
ತೊಳತೊಳಗಿ ನಿಂದು
ಪಸರಿಸಿದ ಅರುಣಕಿರ
ಣದರಾಜಿಯೊಂದು
ಹೆಣ್ಣ ರೂಪವನಾಂತು
ಈ ಬಳಿಗೆ ಬಂದು
ಕಣ್ಣ ಮನಗಳಗೆಲುತ
ನಿಂದಿಹುದು ಮುಂದು.

ರಾಣಿ: ಷಾಹಜಾದ್, ರಚನೆ ಚೆನ್ನಾಗಿದೆ, ಬಹಳ ಚೆನ್ನಾಗಿದೆ. (ಹೆಣ್ಮಕ್ಕಳು ತಮ್ಮ ತಮ್ಮಲ್ಲಿ ಏನೋ ಮಾತನಾಡಿಕೊಳ್ಳುವರು). ಏನಿರೇ ಅದು ಮಾತು? ಗಟ್ಟಿಯಾಗಿ ಹೇಳಿ, ಏನು ತಪ್ಪು?

ಲೀಲಾ: ಷಹಜಾದರು ಮಾಡಿದ್ದು ಹಾಡು ಒಂದಿದೆ.

ರಾಣಿ: ಯಾರು ಹಾಡುತೀರಿ ಅದನ್ನ ?

ಲೀಲಾ: ಅದು ನನಗೆ ಬರುತ್ತೆ ಖುದಾವಂದ್.

ರಾಣಿ: ಹಾಡಿಸೋಣವೆ ಷಾಹಜಾದ್ ? ನೀವು ಮಾಡಿದ ಹಾಡಂತೆ.

ಸೆಲೀಂ: ಆಗಬಹುದು ಮಾಜಿ. ಅಥವಾ ಅನಾರ್ಕಳಿಗೆ ಕಲಿಸಿ ಇನ್ನೊಂದು ದಿನ ಹಾಡಿಸಿರಿ.

ರಾಣಿ: ಅದೂ ಆಗಬಹುದು. ಈ ಹೊತ್ತು ಲೀಲಾ ಹಾಡಲಿ- ಮುಂದೆ ಕುಳಿತುಕೊ ಲೀಲಾ, ಹಾಡು.

ಲೀಲಾ: (ಹಾಡುವಳು).

ಹಿಂದೂಸ್ತಾನಿ ತೋಡಿ ಆದಿತಾಳ

ಪ್ರೇಮವೆನ್ನುವುದು ಇದುತಾನೆ ?
ಇದನು ನಾನು ಒಲ್ಲೆನೆ ಜಾಣೆ.

ಓರೆಗಣ್ಣ ಕಣ್ಣಿಯ ಬೀಸಿ
ನನ್ನ ಸಿರನು ನೀ ಸೆರೆಹಿಡಿವೆ ;
ಆಶಿಸಿ ಆಶಿಸಿ ಆಶಿಸಿ ನಾನು
ಜೀವ ಸಹಿತ ಇದ್ದೇ ಮಡಿವೆ.

ತುಟಿ ಹಣೆ ಕಣ್ ಮುಂಗುರುಳುಗಳ
ಬೆಡಗನು ಹೊರಬಾಗಿಲಲಿರಿಸಿ
ಒಳಗೆ ಕೊಂಕುನುಡಿ ಕಲ್ಲೆದೆಯು
ತೋರುವೆ, ಬಂದೆನೆ ಅನುಸರಿಸಿ.

ಮೇಲಕೆರುಚಿಯೋರುಚಿ, ಆಚೆ
ಬೇಡ ಬೇಡ ಆ ವ್ಯತಿರೇಕ ;
ಹೆಸರಿಗೊಡೆಯು, ನಿಜದಲಿ ದಾಸ :
ಒಲ್ಲೆ ನಲ್ಲೆ ಮೋಸದ ಪಾಕ.

ರಾಣಿ: ಚೆನ್ನಾಗಿದೆ. ಚೆನ್ನಾಗಿದೆ.

(ಚೇಟಿಯೊಬ್ಬಳು ಬಂದು)

ಚೇಟಿ: ಖುದಾವಂದ್, ಬಾದಷಾಹರು ಒಬ್ಬ ಗವಾಯನ್ನು ಕಳುಹಿಸಿದಾರೆ. ಆತ ಬಂದಿದಾರೆ.

ರಾಣಿ: ಆತನನ್ನು ಕರೆದುತಾ. (ಚೀಟಿ ಹೋಗುವಳು). ಗವಾಯ್ ಕುಳಿತುಕೊಳ್ಳಲು ಅಲ್ಲಿ ಸ್ಥಳ ಮಾಡು ಖತೀಜಾ (ಎಂದು ಸ್ಥಳ ತೋರಿಸುವಳು)

ಖತೀ: ಅಪ್ಪಣೆ ಖುದಾವಂದ್ (ಎಂದು ಸ್ಥಳವನ್ನು ಸರಿ ಮಾಡುವಳು. ಗವಾಯ್ ದೂರದಲ್ಲಿ ನಿಂತು ಸಲಾಂ ಮಾಡಿ ನಿಲ್ಲುವನು. ರಾಣಿ ಕೈಸನ್ನೆಯಿಂದ ಬರಹೇಳಿ ಕುಳಿತುಕೊಳ್ಳಲು ಸ್ಥಳ ತೋರುವಳು).

ಗವಾಯ್: (ಮತ್ತೆ ಮತ್ತೆ ಸಲಾಂ ಮಾಡುತ್ತ, ತೋರಿಸಿದಸ್ಥಳಕ್ಕೆ ಬಂದು) ಮಾಫ್ ಮಾಡಬೇಕು ರಾಣೀ ಸಾಹೇಬಾ.

ರಾಣಿ: ಕುಳಿತುಕೊಳ್ಳಿರಿ. (ಗವಾಯ್ ಕುಳಿತುಕೊಂಡಮೇಲೆ) ನೀವು ವನಮಾಲಿಯುವರಂತೆ.

ಗವಾಯ್: ಹೌದು ಖುದಾವಂದ್.

ರಾಣಿ: ನಿಮ್ಮ ಶಿಷ್ಯಳನ್ನ ಚೆನ್ನಾಗಿ ತರಪೇತು ಮಾಡಿದೀರಿ. ಅವಳು ಅರಮನೆಯಲ್ಲಿರುವುದಕ್ಕೆ ಲಾಯಖ್ ಆಗಿದಾಳೆ.

ಗವಾಯ್: ಇನ್ನೂ ತರಪೇತು ಮಾಡೋದಿದೆ. ಕಳುಹಿಸಿಕೊಡಿ ಎಂತ ಕೇಳುವುದಕ್ಕೆ ಬಂದಿದೇನೆ.

ರಾಣಿ: ಬಾದಷಹರನ್ನ ಕೇಳಿದಿರಂತೆ, ಅವರು ತಿಳಿಸಿದರು.

ಗವಾಯ್: ಹೌದು ಖುದಾವಂದ್.

ರಾಣಿ: ನಿನ್ನೆ ಹಾಡಿದಿರಂತೆ. ಸೊಗಸಾಗಿ ಹಾಡಿದಿರಿ ಎಂದರು. ಈಗ ಸ್ವಲ್ಪ ಹಾಡಿ ಕೇಳೋಣ. ಷಾಹಜಾದರೂ ಕೇಳುತಾರೆ.

ಗವಾಯ್: ಅಪ್ಪಣೆ ಖುದಾವಂದ್
(ತನ್ನ ಸ್ಥಳದಲ್ಲಿ ಮತ್ತಷ್ಟು ಅಚ್ಚುಕಟ್ಟಾಗಿ ಕುಳಿತು ಬೆನ್ನು ನೇರಮಾಡಿ. ಗೋಣೆತ್ತಿ ರಾಣಿಯ ಕಡೆ ಮುಖ ಮಾಡಿ)

ಕಾನಡ ಆದಿತಾಳ

ಇದುವೇ ಚೆಲುವಂತೇ ಒಲಿದೆಯೊ
ಸೋಲೇ ಗೆಲವಂತೇ.
ಎಲ್ಲಿಯು ಇರುತಿದೆ ಯಾರಿಗು ದೊರೆಯದೆ,
ಕಣ್ಣಿಗೆ ಕಾಣದು ಎದೆಯನು ಕೊರೆಯದೆ,

ಅರಿಯಲು ಬಾರದು ಜೀವವ ತೊರೆಯದೆ,
ಹುಸಿಯಿದು ಚೆಲುವಂತೇ, ಒಲಿದನೆ
ಸೋಲೇ ಗೆಲವಂತೇ

ನನ್ನ ಪಾಡಿಗಿರಲೆದುರಲಿ ಸುಳಿದು
ಒಲ್ಲೆನೆನಲು ಮರುಳೆನ್ನುತ ಮುಳಿದು
ಮೆಚ್ಚಿದ ಜೀವವ ಕಾಲಡಿ ತುಳಿದು,
ಛಲವಿದು ಚೆಲುವಂತೇ, ಒಲಿದೆನೆ
ಸೋಲೇ ಗೆಲವಂತೇ

ಮೋಡವೊಂದೆ ಓಡುವ ಚಂಚಲಿಗೆ ?
ಚಿಟ್ಟೆ ಒಪ್ಪಿತೇ ಒಂದೇ ನೆಲಿಗೆ?
ಓಡದೇ ಬೆಳಕು ಮಲೆಯಿಂದ ಮಲೆಗೆ ?
ಚಪಲವೆ ಚೆಲುವಂತೇ, ಒಲಿದೆಯೊ
ಸೋಲೇ ಗೆಲವಂತೇ

ರಾಣಿ: ತುಂಬಾ ಚೆನ್ನಾಯಿತು ಅಲ್ಲ, ಷಾಹಜಾದ್

ಷಾಹಜಾದ್: ಹೌದು ಮಾಜಿ

ರಾಣಿ: ಇವರು ನಮ್ಮೂರವರು. ನಮ್ಮ ದರಬಾರಿನಲ್ಲಿ ನೇಮಿಸಿಕೊಂಡರೆ ತಾನಸೇನರಿಗೆ ಸಮನಾದಾರು.

ಗವಾಯ್: ಹಾಗೆನ್ನ ಬೇಡಿ ಖುದಾವಂದ್.

ರಾಣಿ: ಯಾಕೆ ?

ಗವಾಯ್: ತಾನಸೇನರು ಬರಿಯ ಗಾಯನ ಮಾಡುತ್ತಾರೆ. ನಾನು ಪದ ಜೋಡಿಸುತ್ತೇನೆ. ನಾನು ಬರಿಯ ಗವಾಯ್ ಅಲ್ಲ, ಕವಿಯೂ ಹೌದು. ನಿನ್ನೆ ಬಿನ್ನವಿಸಿದೆ.

ರಾಣಿ: ಹಾಗೆಯೋ ?

ಗವಾಯ್: ಹೌದು. ತಾನಸೇನರು ಅಲ್ಲ ಎನ್ನಲಿಲ್ಲ, ನಕ್ಕರು.

ರಾಣಿ: ಅಯ್ಯ ಹುಲಿರಾಯ! ಅದು ಏನು ಹೇಳಿದಿರಿ?

ಗವಾಯ್: ಕೇಳೋಣಾಗಲಿ ಖುದಾವಂದ್ (ಹಾಡುವನು).

ಕೇತಾರಗೌಳ

ತಾನಸೇನ ಬಲ್ಲರೇನ ?
ಸ್ವರವಿತಾನ ಸರಳಗಾನ,
ಕಾಲಮಾನ ತಾಲಜ್ಞಾನ,
ಅರ್ಥಹೀನ ವೃಥಾಗಾನ,
ರಸವಿಹೀನ ಸಂವಿಧಾನ.
ಭಾವಹೀನ ಸ್ವರವಿತಾನ
ಪತಿವಿಹೀನ ಸ್ತ್ರೀ ಸಮಾನ;
ಅರ್ಥಹೀನ ಸ್ವರದ ಗಾನ
ಬಹಿರ್ಲೀನ ಆತ್ಮಜ್ಞಾನ;
ರಸವಿಹೀನ ಸುಸಂಧಾನ
ಪ್ರಾಣಹೀನ; ಶವಸಮಾನ.

ನನ್ನ ಗಾನ, ಹೇಳಲೇನ, ಹಾಲು ಜೇನ ಜಾಯಮಾನ.
ಕೇಳುಜಾಣ ಇದು ನಿಹೀನ ಸ್ವಸನ್ಮಾನ ಅಲ್ಲಕಾಣ.
ರಸಾಧೀನ ಸ್ವರಸಂತಾನ ಭಾವಪೂರ್ಣ ಪದಾಧಾನ
ಸುಮ್ಮಾನ ದುಮ್ಮಾನ ರಸನಿಧಾನ, ಸ್ವರವಿಮಾನ ;
ಈ ಗಾನ ವ್ಯೋಮಯಾನ; ನೋಡು ಬಾನ ತಾಕಿತೇನ.
ಸುಸಂಸ್ಥಾನ ಅರ್ಥಪೂರ್ಣ ಸ್ವರನಿಧಾನ ಏರಿಬಾನ,
ದೇವರಾಣ್ಮ, ಈ ಅದೀನ ಸಂಪ್ರದಾನ ಕುತಃಕೇನ,
ಎನ್ನನೇನ ? ಈಗಾನ ಕೇಳಿ ಜಾಣ ಬೊಮ್ಮ ಮೌನ;
ಬೊಮ್ಮ ಮೌನ, ಬೊಮ್ಮ ಮೌನ.

**ರಾಣಿ:** (ನಿಮಿಷ ಸುಮ್ಮನಿದ್ದು) ಇದನ್ನೆ ನಿನ್ನೆ ಹಾಡಿದಿರಾ ?

**ಗವಾಯ್:** ಆಗಲೇ ಜೋಡಿಸಿದ ಮಾತು ಖುದಾವಂದ್. ಒಂದು ಇಲ್ಲಿ ಒಂದು ಅಲ್ಲಿ ಬೇರೆ ಇದ್ದಿರಬಹುದು. ಒಟ್ಟನಲ್ಲಿ ಇದೇ ಅಲ್ಲಿ ಹಾಡಿದ ಹಾಡು.

ರಾಣಿ: ಬಾದಷಹರು ಕೋಪಿಸಲಿಲ್ಲವೆ?

ಗವಾಯ್: ಕೋಪ ಇಲ್ಲ, ಖುದಾವಂದ್. ಅಸಮಾಧಾನ ತೋರಿದರು; ಗೀತದ ನವುರು ಮಾತಲ್ಲಿಲ್ಲ ಎಂದರು. ತಾನಸೇನರು ನಗುತ್ತ, ಗೀತ ಇಷ್ಟು ನವುರಾಗಿರುವಾಗ ಮಾತನ್ನ ಮರೆಯಬೇಕು ಜಹಾಪನಾ, ಎಂದರು.

(ಅರಮನೆಯ ಬಾಗಿಲಲ್ಲಿ ಚಾಮರ ಹಿಡಿದ ಚೇಟಿಯರು ಕಾಣಿಸುವರು. ಇವರೆಲ್ಲ ಏಳುವರು. ಚೇಟಿಯರ ಹಿಂದೆ ಅಕ್ಬರ್ ಬಾದಷಹ. ಮೆಲ್ಲನೆ ಎಲ್ಲ ಇವರಿರುವ ಸ್ಥಳಕ್ಕೆ ಬರುವರು).

ರಾಣಿ: ಬಿಜಮಾಡಬೇಕು ಜಹಾಪನಾ. ದಾಸಿ ಅನುಗ್ರಹ ಬೇಡುತ್ತೇನೆ. ಷಾಹಜಾದರೂ ಕಾದಿದ್ದಾರೆ. (ಸಲೀಂ ಬಾಗಿ ಸಲಾಂ ಮಾಡುತ್ತಾನೆ. ಅಕ್ಬರ್ ಎಲ್ಲರಿಗೂ ಪ್ರತಿ ಮರ್ಯಾದೆ ತೋರಿ ತನ್ನ ಪೀಠದಲ್ಲಿ ಕುಳಿತುಕೊಳ್ಳುತ್ತಾನೆ. ಚೇಟಿಯರು ವಾಡಿಕೆಯಂತೆ ಚಾಮರ ಹಿಡಿದು ಹತ್ತಿರ ನಿಲ್ಲುತ್ತಾರೆ. ಉಳಿದವರು ಕುಳಿತುಕೊಳ್ಳುತ್ತಾರೆ. ಗವಾಯ್ ನಿಂತಿರುತ್ತಾನೆ.)

ಬಾದಷಹ: (ಅವನಿಗೆ ಕೈಯಿಂದ ಸನ್ನೆಮಾಡಿ) ಕುಳ್ಳಿರಿ.

(ಗವಾಯ್ ಮೂರು ಸಲ ನೆಲಮುಟ್ಟಿ ಸಲಾಂ ಮಾಡಿ ಕುಳಿತುಕೊಳ್ಳುತ್ತಾನೆ).

ರಾಣಿ: ನಾವು ಗವಾಯ್ ಸಾಹೇಬರ ಹಾಡನ್ನು ಕೇಳಬೇಕೆಂದು ಜಹಾಪನಾ ಅಪ್ಪಣೆ ಮಾಡಿದಿರಿ. ಇವರು ಆಗಲೇ ಬಂದರು. ಎರಡು ಹಾಡು ಹಾಡಿದರು.

ಬಾದ: ಸಂತೋಷ. ಮತ್ತು ಹಾಡುತಾರೋ?

ರಾಣಿ: ಅವಶ್ಯ ಹಾಡುತಾರೆ. ಜಹಾಪನಾ ಬಿಜಮಾಡಲಿಲ್ಲವಲ್ಲ ಎಂತಲೇ ಕಾದಿದ್ದೆವು. ಗವಾಯ್ ಸಾಹೇಬ್, ಇನ್ನೊಂದು ಗೀತ ಹಾಡಿರಿ. ಒಳ್ಳೆಯದಾಗಿರಬೇಕು.

ಗವಾಯ್: ಅಪ್ಪಣೆ ಖುದಾವಂದ್. (ಹಾಡುವನು)

ಆನಂದಭೈರವಿ ರೂಪಕ

ಯಾವ ಸುಮಾರಾಮದಂತರದಲಿ ಈಗ ನೀನು ಮೆರೆವೆ?
ಯಾವ ಧೀರ ಮಾರುತನ್ಯೆತರವ ಬಯಸಿ ಕಾಯುತಿರುವೆ?

ಯಾವ ದೇವನಾಣೆಯಲ್ಲಿ ಯಾರಿಗೆಂದು ಮನವ ತೆರೆವೆ?
ಯಾವ ಸುಖದ ಸೋಲಭಾರದಿಂದ ಕಣ್ಣುಮುಚ್ಚಿ ಇರುವೆ?
ಹಾ ಪ್ರಿಯೇ ಹಾ ಪ್ರಿಯೇ ಹಾ ಪ್ರಿಯೇ ಪ್ರಿಯೇ

ಎಂದೋ ಒಂದು ದಿವಸ ನೀನು ನನ್ನ ಬಾಳ ಮುಂದೆ ಬಂದೆ;
ಚೆಂದವನ್ನು ಒಪ್ಪಿದೆದೆಯು ಒಡನೆ ನಿನ್ನ ಬಂದಿಯೆಂದೆ;
ಮಂದಿಯೆದುರು ನೀನು ತೋರಿದೊಲವದೇನು ಅರೆಯೆ ಒಂದೆ?
ಇಂದು ನನ್ನ ತೊರೆದಿರುವೆ ಗತಿಯೇನೇ ನನಗೆ ಮುಂದೆ?
ಹಾ ಪ್ರಿಯೇ ಹಾ ಪ್ರಿಯೇ ಹಾ ಪ್ರಿಯೇ ಪ್ರಿಯೇ

ನಿನ್ನ ನಂಬಿ ನಡೆದ ಬಾಳ ತೊರೆವುದೇನೆ ನಿನ್ನ ಚಾಳಿ?
ನನ್ನಿಯುಳಿದು ತನ್ನ ದಾರಿ ತನಗೆಂಬಳು ಗೈಯಾಳಿ.
ನಿನ್ನ ರುಚಿಗೆ ತಗುವುದೇನೊ ಹೆರವರೆದುರವ್ವೈಹಾಳಿ,
ನನ್ನುಸಿರಿಗೆ ರುಚಿಸದು ನಿನ್ನುಸಿರ ಕಂಪ ತರದ ಗಾಳಿ.
ಹಾ ಪ್ರಿಯೇ ಹಾ ಪ್ರಿಯೇ ಹಾ ಪ್ರಿಯೇ ಪ್ರಿಯೇ

ಬಾದ: ಇದೇನು ನಿಮ್ಮ ಮಾತನ್ನೇ ಬರೆದುಕೊಂಡಿದೀರೋ?
ಗವಾಯ್: ಹೌದು ಖುದಾವಂದ್
ಬಾದ: ಸರಿ.
ರಾಣಿ: (ಅವನ ಇಂಗಿತವನ್ನರಿತು) ಇನ್ನೊಂದು ಗೀತ ಹಾಡಿರಿ.
ಗವಾಯ್: ಅಪ್ಪಣೆ ಖುದಾವಂದ್

ರಾಗ ಕಾಪಿ

ಏನೆಂದು ಮರೆಯುವರೇ ಸಖಿಯರು
ಏನೆಂದು ಮರೆಯುವರೇ ನಿನ್ನ
ಏನೆಂದು ಮರೆಯುವರೇ ಸಖೀ ಬಾ
ಬಾಯೆಂದು ಕರೆಯುವರೇ ಸಖೀ
ಏನೆಂದು ಮರೆಯುವರೇ
ನಮ್ಮ ತೊರೆದು ನೀನೆಲ್ಲಿ ಹೋದೆ ಸಖಿ

ಬಾಯೆಂದು ಕರೆಯುವರೇ ನಿನ್ನ
ಜೊತೆಗಾಡಿದವರನಿಂತು ತೊರೆಯೆ ತರ
ವೇಯೆಂದು ಜರೆಯುವರೇ ಸಖೀ ತರ
ವೇಯೆಂದು ಜರೆಯುವರೇ

ವನದಲಿ ಇರುವೆಯೊ ಎಂದರಸುತ ಮಾ
ಮರನಡಿನೆರೆಯುವರೇ ಸಖಿ
ವನದೊಳಿಲ್ಲವೆಂದರಿತು ನೊಂದು ಕಂ
ಬನಿಯನು ಸುರಿಯುವರೇ ಸಖೀ ಕಂ
ಬನಿ ಮಳೆ ಸುರಿಯುವರೇ

ಜೊತೆಗಾಡಿದ ಗೆಳತಿಯರನು ಸಖಿ ನೀ
ನೀ ತೆರ ತೊರೆಯುವರೇ ಅವ
ರೆದೆಗಳ ಕೊರೆಯುವರೇ ಆ
ಪ್ರೇಮವ ಮುರಿಯುವರೇ ಆ
ಟಗಳನು ಮರೆಯುವರೇ ಕೆಳೆ
ಸಾಕೆಂದೊರೆಯುವರೇ ಒಲ
ವೆಲ್ಲವ ಜರೆಯುವರೇ ನ
ಮ್ಮೆಲ್ಲರ ತೊರೆಯುವರೇ ಸಖೀ ನ
ಮ್ಮೆಲ್ಲರ ತೊರೆಯುವರೇ

ಏನೆಂದು ಮರೆಯುವರೇ ಸಖೀ ಬಾ
ಬಾರೆಂದು ಕರೆಯುವರೇ ಸಖೀ
ಬಾರೆಂದು ಕರೆಯುವರೇ

**ಬಾದ:** ಇದೂ ನಿಮ್ಮದೇ ಮಾತೊ?

**ಗವಾಯ್:** ಹೌದು ಖುದಾವಂದ್.

**ರಾಣಿ:** ಬಹುಚೆನ್ನ ಹಾಡುತಾರೆ ಜಹಾಪನಾ.

**ಬಾದ:** ಅದನ್ನು ಆತನಿಗೆ ಹೇಳಬೇಕಾಗಿಲ್ಲ. ತಾನೇ ಬಲ್ಲ.

ಗವಾಯ್ : ಕ್ಷಮಿಸಬೇಕು ಖುದಾವಂದ್, ದೊಡ್ಡವರ ಮಾತಿಗೆ ಅಡ್ಡ ಬರಲಾರೆ.

ಬಾದ : ನಿಮ್ಮ ಹಾಡು ಚೆನ್ನ ಎಂದರೆ ಅಡ್ಡ ಏಕೆ ಬರಬೇಕು ?

ಗವಾಯ್ : ಅದಕ್ಕಲ್ಲ ಖುದಾವಂದ್ ; ನಾ ಬಲ್ಲೆ ಎನ್ನುವ ಮಾತಿಗೆ.

ಬಾದ : ನೀವು ಬಲ್ಲವೂ ಬಲ್ಲಿರಿ ಅಲ್ಲ.

ಗವಾಯ್ : ನಾನು ಬಲ್ಲೆ ಎನ್ನುವುದು ನನಗೆ ತಿಳಿದಷ್ಟು ಚೆನ್ನ ಹಾಡಿದೆ ಎನ್ನುವುದು. ತಮಗೆ ಸಂತೋಷವಾದದ್ದು ನಾ ಬಲ್ಲ ಸಂಗತಿ ಅಲ್ಲ. ಅದನ್ನು ಖುದಾವಂದ್ ಅಪ್ಪಣೆ ಕೊಡಿಸಬೇಕು.

ಬಾದ : ಆಗಲಿಲ್ಲ ಎಂದರೆ ನೀವು ಒಪ್ಪುವುದಿಲ್ಲ.

ಗವಾಯ್ : ಅದು ನಿಜ ಖುದಾವಂದ್. ಈ ನನ್ನ ನಂಬಿಕೆ ನನ್ನ ಹಾಡಿನ ಬೆನ್ನುಮೂಳೆ. ಮೆಚ್ಚಿಗೆಯೆದುರಿಗೆ ವಿನಯವಾಗುತ್ತದೆ, ಅಸೂಯೆ ಎದುರಿಗೆ ಜಂಭ ಆಗುತ್ತದೆ. ಅದಿಲ್ಲದಿದ್ದರೆ ನನಗಾಗದೋರು ನನ್ನ ಬಾಯಿ ಮುಚ್ಚಿಸಿಬಿಡುತ್ತಾರೆ, ಮಹಾಪ್ರಭು.

ಬಾದ : ದುಷ್ಟರು, ಅವರ ಮಾತು ಬಿಡಿ. ನಿಮ್ಮ ಬಾಯಿ ಮುಚ್ಚಬಾರದು. ನೀವು ಹಾಡುವುದು ತುಂಬ ಚೆನ್ನ.

ಗವಾಯ್ : ಖುದಾವಂದ್, ನನ್ನ ಬಾಯಿಮುಚ್ಚದ ಹಾಗೆ ಪ್ರಭುಗಳೇ ನೋಡಿಕೊಳ್ಳಬೇಕು.

ಬಾದ : ಮುಚ್ಚುವ ಪ್ರಸಂಗ ಬಂದಿರುವುದೇನು ?

ಗವಾಯ್ : ಖುದಾವಂದ್, ನಿನ್ನೆಯೆ ಅರಿಕೆ ಮಾಡಿಕೊಂಡೆ. ತಿರುಗಿ ಚಿತ್ತಕ್ಕೆ ಪ್ರಯಾಸ ಕೊಡುವುದು ನನಗಿಷ್ಟ ಇಲ್ಲ. ನಮ್ಮ ಹುಡುಗೀನ ನಮ್ಮೂರಿಗೆ ಹಿಂದಕ್ಕೆ ಕಳುಹಿಸಬೇಕು. ಅದಿಲ್ಲದೆ ನಮ್ಮೂರು ಬದುಕುವ ಹಾಗಿಲ್ಲ.

ಬಾದ : ನಮ್ಮ ಪರಿವಾರದಲ್ಲಿ ಹೊಸಬರು ಯಾರೂ ಇಲ್ಲ. ಇಲ್ಲಿ ದಾರಿಯೇ ನೋಡಬೇಕು. ಅದಕ್ಕಾಗಿಯೇ ಈ ದಿನ ಇಲ್ಲಿ ಬಂದದ್ದು. ನಿಮ್ಮ ಹುಡುಗಿ ಇಲ್ಲಿದಾಳೆಯೇನು ?

ಗವಾಯ್ : ಹೌದು ಖುದಾವಂದ್.

ಬಾದ: ಯಾರು ತೋರಿಸಿ.

ಗವಾಯ್: ಕ್ಷಮಿಸಬೇಕು ಖುದಾವಂದ್. ಹೂವನ್ನ ಉಗುರಿಂದ ಮುಟ್ಟಬೇಡ, ಹುಡುಗೀನ ಬೆರಳಿಂದ ಸುಟ್ಟಬೇಡ, ಅಂತಾರೆ. ಹತ್ತು ಮಂದಿ ಹೆಣ್ಮಕ್ಕಳು ಇರುವ ಕಡೆ ಒಬ್ಬಳನ್ನ ನಾ ಬೆರಳು ಮಾಡಲಾರೆ, ಮಹಾಪ್ರಭು.

ಬಾದ: ಮಾತು ನವುರಿಲ್ಲ ಎಂತ ತಿಳಿದಿದ್ದೆ. ಅದೂ ನವುರಾಗಿದೆ. ರಾಣೀ ಸಾಹೇಬಾ ಬಲ್ಲಿರಿ ಅಲ್ಲ, ಈತ ಬಂದಿರುವುದು ಏಕೆ ಎಂತ ?

ರಾಣಿ: ಬಲ್ಲೆ. ಜಹಾಪನಾ ಹೇಳಿಕಳುಹೋಣಾಯಿತು. ಅನಾರ್ಕಳೀನ ನಾನು ತಮ್ಮ ಪರಿವಾರದಲ್ಲಿರಲಿ ಎಂತ ಕರೆಸಿದೆ. ಅವಳನ್ನ ತಮಗೆ ಒಪ್ಪಿಸುತ್ತೇನೆ. ಹಿಂದಕ್ಕೆ ಕಳುಹಿಸುವುದು ನನಗೆ ಒಪ್ಪಿಗೆ ಇಲ್ಲ.

ಬಾದ: ಯಾರು ಹುಡುಗಿ ಅದು ?

ರಾಣಿ: ಅನಾರ್ಕಳೀ, ಬಾದಷಾಹರಿಗೆ ಕೈಮುಗಿ.

(ಅನಾರ್ಕಳಿ ಒಂದು ಹೆಜ್ಜೆ ಮುಂದೆ ಇರಿಸಿ ಬಾಗಿ ಕೈಮುಗಿಯುವಳು)

ಬಾದಷಾಹರಿಗೆ ಬಿಡುವಿದ್ದರೆ ಒಂದು ಹಾಡು ಹಾಡುತ್ತಾಳೆ.

ಬಾದ: ಆಗಬಹುದು.

(ರಾಣಿ ಅನಾರ್ಕಳಿಗೆ ಸಂಜ್ಞೆಯಿಂದ ಆಜ್ಞೆ ಮಾಡುತ್ತಾಳೆ. ಅನಾರ್ಕಳಿ ಕುಳಿತು ಹಾಡುತ್ತಾಳೆ.)

ಬಿಲಹರಿ

ಅನಾ:
ಯಮುನೆಯ ಹೊಳೆಯು ಸುನೀಲ ಸುನಿರ್ಮಲ
ಜಲ ಗಂಭೀರಗಮನದಿ
ಹರಿದಿದೆ ; ಹರಿದಿದೆ ಮೆಲ್ಲನೆ ಎಲರು
ತೀರದ ತಳಿತಿಹ ವನದಿ ;
ತಳಿರ ಹೂವ ವನದೊಳದಿ ತಾನೇ
ಅರಿಯದ ಯಾವುದೊ ಸುಖವ

ಬಯಸುತ ನಂದಕುಮಾರ ಇರಿಸಿದನು
ಕೊಳಲಿನ ಬಾಯ್ಗೆ ಳಿಮುಖವ.

ನಾದನಾಮಕ್ರಿಯ

ತೀರದವನದಲಿ ತಾನೇ ಅರಿಯದ
ಏನನೋ ಬಯಸಿ ರಾಧಾ
ಏಕಾಕಿನಿ ತಾ ನಡೆಯುತಲಿರುವಳು ;
ಮನದ ದುಗುಡವೊ ಅಗಾಧ ;
ತರುಲತೆ ತಳಿತಿವೆ ಹೂತಿವೆ ನಗುತಿವೆ ;
ನೀನೂ ನಗು ಎನುತಲಿವೆ ;
ನಗೆ ಕಾಣಳು ಕರೆ ಕೇಳಳು ರಾಧಾ :
ಏನಿದು ? ಮನಸಿನ ಕಳವೆ ?

ಬಿಲಹರಿ

ಕೃಷ್ಣನ ಮುಖವನು ನೋಕಿದ ಕೊಳಲಿನ
ಕಣ್ಣರಳಿತು. ಅವನುಸಿರು
ಅದರೆದೆಯನು ತುಂಬಿತು, ಉಬ್ಬಿಸಿತು ;
ಏನೆನಿತಾರಸದೊಸರು !
ಕುಲುಕುಲುನಕ್ಕಿತು ಯಮುನೆಯ ಜಲ; ವನ
ಮತ್ತೂ ತಳಿತೂ ಹೂತೂ
ಕಂಪಲಿ ಸಂತಸ ಸೂಸಿತು ; ಗಾಳಿ
ನಿಂತಿತಲ್ಲೆ ಮನಸೋತು.

ನಾದನಾಮಕ್ರಿಯ

ನಿಂತಳೆಲ್ಲಿ ಅಲ್ಲೇ ಮನಸೋತು,
ಕೊಳಲಗಾನ ನೆಪವಾಗಿ,
ಅರಿತಳು ರಾಧಾ, ತಾನು ಕೃಷ್ಣನ

ಬಯಸಿರುವುದು ಮನತಾಗಿ.
ಕೃಷ್ಣಾ, ನನ್ನ ಕೃಷ್ಣಾ, ನೀನೆ
ಎಂದೂ ನನ್ನ ಪ್ರಾಣ,
ಎಂದು ಮರಮರಳಿ ಹೆಸರುಸುರಿದಳು ;
ನೆರೆಯಿತು ಆತ್ಮಕೆ ತ್ರಾಣ.

ಬಿಲಹರಿ

ತರುಣಿ ಉಸುರಿದಾ ಹೆಸರನು ತರುಲತೆ
ಮರ್ಮರದಲಿ ಮರುನುಡಿಯೆ
ಮರು ನುಡಿಯನು ಮರುನುಡಿಸುತ ಗಾಳಿ
ಮುಂಬರಿಯಿತದಕೆ ತಡೆಯೆ ?
ಸಾರಿತು ಕರೆ ಶ್ರೀಕೃಷ್ಣನ : ರಾಧೆಯ
ಸಾರಿದನಾಕ್ಷಣ ದೇವಾ.
ಒರ್ವರನೊರ್ವರು ನೀನೇ ಎಂದರು ;
ಈರ್ವರದೊಂದೇ ಭಾವ.

ನಾದನಾಮಕ್ರಿಯ

ನಾನು ರಾಧಾ, ಕೇಳು ದೇವಾ ;
ಇರುವೆಡೆ ಯಮುನಾತೀರಾ ;
ನಿನ್ನನರಿಯೆನಾದರು ಈ ಮನದಲಿ
ತೀವಿದೆ ಆಸೆಯ ಭಾರ.
ಸರ್ವವನರಿತವನಿದನೇನರಿಯೆಯ ?
ಬಾರಬೇಗ ಮೊಗದೋರಾ :
ಬಾರೆಯಾ ? ಜೀವಹೋಯಿತು. ಹೋಗಲೆ,
ಕರುಣಾಪಾರಾವಾರಾ ?

ಬಾದ : ನೀವು ಹಿಂದೂಗಳೊ ?

ಗವಾಯ್ : ಹೌದು ಖುದಾವಂದ್. ಆದರೆ ತಮ್ಮ ಪ್ರಭುತ್ವದಲ್ಲಿ ಆ ಭೇದ ಇಲ್ಲ ಎಂತ ಎಲ್ಲಾ ತಿಳಿದಿದಾರೆ.

ಬಾದ : ಬಹಳ ಒಳ್ಳೆಯದು. ಭೇದ ಇಲ್ಲ ನಿಜ. ನಮ್ಮ್ಮ ರಾಣಿ ಸಾಹೇಬಾ ಹಿಂದೂ.

ರಾಣಿ : (ನಗುತ್ತ) ಹೌದು (ಎಂದು ತನ್ನ ಹಣೆಯ ಕುಂಕುಮವನ್ನು ತೋರುವಳು)

ಗವಾಯ್ : ನಿಜ. ಖುದಾವಂದ್ (ಎಂದು ತನ್ನ ಸ್ಥಿತಿಯನ್ನು ಮರೆತು ಅನಾರ್ಕಳೀಗೆ) "ಯಮುನಾತೀರ........"

ಅನಾ : (ವಾಡಿಕೆಯ ಬಲದಿಂದ ಇದರ ಅನೌಚಿತ್ಯವನ್ನು ತಿಳಿಯದೆ)

ರಾಗ ಮಧ್ಯಮಾವತಿ

ಯಮುನಾತೀರ ವನವಿಹಾರ ಲೋಲಾ ಗೋಪಬಾಲಾ
ಕಾಲಮೇಘಸಮ ನೀಲ ಸುಂದರಾಕಾರಾ ಧೃತವನಮಾಲಾ
ಕ್ರೂರಪೂತನಾ ಘೋರ ಧೇನುಕಾದ್ಯಸುರನಿವಹಸಂಹಾರಾ
ನಿಖಿಲಭುವನ ಕಾರಣ ಧಾರಣ ತಾರಣ ಧುರಧರ ಗಂಭೀರ,
ಪಾಲಿಸು ರಾಜನ, ಪಾಲಿಸು ಆತನ
ಪರಿವಾರವನಾತನ ತನುಜಾತನ,
ಪಾಲಿಸು ಜನವ, ಪಾಲಿಸು ದೇಶವ,
ಪಾಲಿಸು ಲೋಕವ, ಯಾದವ ಕೇಶವ.
ಜಯ
ಜಯ ಜಯ ಜಯ

ಗವಾಯ್ : ಜಯ ಜಯ ಜಯ (ಎಂದು ಅವಳೊಂದಿಗೆ ದನಿಗೂಡಿಸುತ್ತಾನೆ).

ಸಲೀಂ : (ಆ ನಡತೆಯ ಅನೌಚಿತ್ಯದಿಂದ ಸ್ವಲ್ಪ, ಅವನು ಅನಾರ್ಕಳಿಯ ವಿಷಯದಲ್ಲಿ ತೋರಿದ ಸ್ವಾಮ್ಯದಿಂದ ಬಹಳವಾಗಿ, ಖತಿಗೊಂಡು) ಏ ಮುಚ್ಛು ಬಾಯನ. ಬಾದಷಹಾ ಇರುವುದು ಜ್ಞಾನ ಇಲ್ಲ?

ಗವಾಯ್ : (ಬೆಚ್ಚಿ) ಖಾವಂದ್, ಮನ್ನಿಸಬೇಕು. ಸ್ವಸ್ತಿ ಎಂತ ಹೇಳಿದೆ. ತಪ್ಪಾಯಿತು.

ಸಲೀಂ : ಮಾಜೀ ಸಾಹೇಬಾ, ಈ ಮನುಷ್ಯನಿಗೆ ಬುದ್ಧಿ ಇಲ್ಲ. ಇವನು ಅರಮನೆ ಕಾಣ, ತಮ್ಮೂರ ಭಜನೆ ಮಂದಿರದಲ್ಲಿ ದೇನೆಂತ. ತಿಳಿದಿದ್ದಾನೆ.

ಗವಾಯ್ : ನ್ಯಾಯ, ಖುದಾವಂದ್. ಎಂಥ ಪುಣ್ಯ ಮಾಡಿರಬೇಕು ಒಂದು ಮನೆ ಭಜನೆ ಮಂದಿರವಾಗೋಕೆ? ಆ ಪುಣ್ಯ ಅರಮನೆಗೆ ಎಲ್ಲಿ ಬರಬೇಕು ?

ಅನಾ : ಅಯ್ಯೋ (ಎಂದು ಎದ್ದು ನಡೆದು ಜೊತೆಯ ಜನರಲ್ಲಿ ಸೇರುವಳು)

ರಾಣಿ : ಛೆ ಏನು ಮಾತಿದು ? ಬಾದಷಾಹರೆದುರಿಗೆ ?

ಗವಾಯ್ : ಖುದಾವಂದ್, ತಪ್ಪಾಯಿತು. (ಕೋಪದಲ್ಲಿ ತನ್ನ ಮಾತಿನ ಮಿತಿ ಮೀರಿತೆನ್ನುವುದು ಮನ ಮುಟ್ಟಿ ಖಿನ್ನನಾಗುತ್ತಾನೆ.)

ಬಾದ : ಅನಾರ್ಕಳೀ ಅಲ್ಲವೆ ಈ ಹುಡುಗಿಯ ಹೆಸರು ?

ರಾಣಿ : ಹಾಗೆಂದೇ ನಾವೆಲ್ಲ ಕರೆಯುತ್ತಿದೇವೆ.

ಬಾದ : ನಮ್ಮ ಪರಿವಾರಕ್ಕೆ ಎಂತ ಕರೆಸಿದೆ ಎಂದಿರಲ್ಲ ?

ರಾಣಿ : ಹೌದು ಜಹಾಪನಾ. ತಮಗೆ ಒಪ್ಪಿಗೆಯೋ ಎಂತ ತಿಳಿಯು ವುದಕ್ಕಾಗಿಯೇ ಈ ದಿನದ ಏರ್ಪಾಡನ್ನು ಮಾಡಿದ್ದೆ.

ಬಾದ : ಮಧ್ಯೆ ಈತ ಬಂದಿದ್ದಾನಲ್ಲ. ಇದರ ಮಾತನ್ನಾಡೋಣ.

ರಾಣಿ : ಅಪ್ಪಣೆ ಜಹಾಪನಾ.

ಬಾದ : ಇವರೆಲ್ಲ ಸ್ವಲ್ಪ ದೂರ ಇದ್ದರೆ ಒಳ್ಳೆಯದು.

ರಾಣಿ : ಅಪ್ಪಣೆ (ಎಂದು) ಖತೀಜಾ ನೀವೆಲ್ಲಾ ಸ್ವಲ್ಪ ದೂರ ಸರಿಯಿರಿ.

ಖತೀ : ಅಪ್ಪಣೆ ಮಾಜೀ (ಎಲ್ಲರಿಗೂ ಸನ್ನೆ ಮಾಡುವಳು ; ಎಲ್ಲರೂ ತಾವು ತಾವಿರುವೆಡೆಯಿಂದ ಸರಿದು ದೂರದಲ್ಲಿ ನಿಲ್ಲುವರು. ಮಧ್ಯೆ ಬಾದಷಾಹ, ಸೇಲಿಂ, ರಾಣಿ ಮೂವರೇ ಇರುವರು.)

ಬಾದ : ಹುಡುಗಿ ಬಹು ಚೆನ್ನಾಗಿದ್ದಾಳೆ. ಇಲ್ಲಿಗೆ ಬರುತಾ ನಾನಂದು ಕೊಂಡೆ, ಈಗ ಯಾಕೆ ನಮಗೆ ಪರಿವಾರದಲ್ಲಿ ಹೊಸ ಜನ,

ಎಂತ. ಇವಳನ್ನು ನೋಡಿದಮೇಲೆ, ಹತ್ತಿರ ಇರಲಿ, ಎನ್ನಿಸುತ್ತಿದೆ.

ಸೆಲೀಂ: ಅಹಂ (ಅಸಮಾಧಾನ ಸೂಚಿಸುವ ಅಸ್ಪಷ್ಟ ಶಬ್ದ ಮಾಡಿ ತಡೆದು ಕೊಳ್ಳುವನು.)

ಬಾದ: ಏನೆಂದೆ ?

ಸೆಲೀಂ: ಏನೂ ಇಲ್ಲ, ಬಾಪ್

ಬಾದ: ಆದ್ದರಿಂದ ಗವಾಯ್‌ಗೆ, ಸದ್ಯ ಅವಳಿಲ್ಲಿರಲಿ, ಕೆಲವು ದಿನ ಬಿಟ್ಟು ಕಳುಹಿಸುತ್ತೇವೆ, ಎಂತ ಹೇಳಬಹುದು.

ರಾಣಿ: ಅದೇ ಸರಿ ದೊರೆ.

ಸೆಲೀಂ: ಮಾಜೀ, ಬಾಬಾ ಅವರಿಗೆ ನನ್ನ ಮಾತು ಹೇಳಿರಿ.

ರಾಣಿ: ಆ ಮಾತು ಈಗ ಬೇಡ ಅಣ್ಣಾ.

ಬಾದ: ಏನು ಮಾತು? ಹೇಳಿ; ತಪ್ಪಿಲ್ಲ.

ಸೆಲೀಂ: ಅನಾರ್ಕಳೀನ ನಿನ್ನೆ ನೋಡಿದಾಗಲೇ ನಾನು ಮಾಜಿಯವರಿಗೆ, ಈ ಹುಡುಗಿಯನ್ನ ನನ್ನ ಪರಿವಾರಕ್ಕೆ ಕೊಡಿ, ಎಂತ ಕೇಳಿದೆ.

ರಾಣಿ: ನಾನು, ಅವಳನ್ನ ನಿಮ್ಮ ಬಾಬಾ ಅವರಿಗಾಗಿ ಕರೆಸಿದೇನೆ, ನಿಮಗೆ ಕೊಡುವುದು ಆಗುವುದಿಲ್ಲ, ಎಂದೆ.

ಬಾದ: ಅದು ಸರಿ ತಾನೇ. ನನಗೆ ಎಂತ ಕರೆತಂದ ಮೇಲೆ ನಾನು ಏನು ಹೇಳುತ್ತೇನೆ ಎಂತ ಮೊದಲು ತಿಳಿಯಬೇಕಲ್ಲ.

ಸೆಲೀಂ: ತಿಳಿಯಬೇಕಾಗಿತ್ತು. ಈಗ ಅನುಚಿತ ಆಗಿಬಿಟ್ಟಿದೆ. ಬೇಕೋ ಬೇಡವೋ ಎಂತ ಬಾಬಾ ಸಂದೇಹದಲ್ಲಿದ್ದೀರಿ ಎಂತ ತಿಳಿದವನು ನಾನು ಈ ಹುಡುಗಿಯನ್ನ ಮಾತನಾಡಿಸಿ ಆಯಿತು.

ಬಾದ: ಮಾತನಾಡಿಸಿ ಆಯಿತು ?

ಸೆಲೀಂ: ಆಯಿತು.

ರಾಣಿ: ಅಣ್ಣಾ ಇದೇನು ಮಾತು ? ನನ್ನ ಪರಿವಾರವನ್ನ ? ನನ್ನನ್ನ ಕೇಳದೆ ?

ಸೆಲೀಂ: ತಪ್ಪಾಯಿತು.

ಬಾದ: ನಾನಿದನ್ನ ತಿಳಿದಿದ್ದೆ. ಈ ಮಗ ಈ ಚಿಕ್ಕಮ್ಮ ಅತಿಸಲಿಗೆ ಮಾಡಿಕೊಳ್ಳುತಿದಾರೆ, ಇದು ಕೇಡಿಗೆ ಬರುತ್ತದೆ, ಎಂತ.

ರಾಣಿ: ಬಾದಷಾಹ ಏನಿದು? ಎಲ್ಲಿಗೆ ಒಯ್ಯುತ್ತೀರಿ ಮಾತನ್ನ? ನನ್ನ ಮರ್ಯಾದೆ ಮೇಲೆ ಚುಕ್ಕೆಮಸಿ ಬಿದ್ದಿಲ್ಲ. ಅದನ್ನ ನಾನು ಕಾಯುವುದು ನಿಮ್ಮ ಸಲುವಾಗಿ ಅಲ್ಲ.

ಬಾದ: ನಿಮ್ಮ ಸಲುವಾಗಿಯೇ ಕಾಯುತೀರಿ. ಅದರಿಂದಲೇ ಹೀಗಾದದ್ದು. ನಮ್ಮ ಸಲುವಾಗಿ ಆಗಿದ್ದರೆ ಇನ್ನಷ್ಟು ಭಯ ಇರುತ್ತಿತ್ತು.

ರಾಣಿ: ಆಹ ನಾನೀಹೊತ್ತು ಕೆಟ್ಟ ಗಳಿಗೆಯಲ್ಲಿ ಎದ್ದೆ: ಈ ಮಾತು ಕೇಳಬೇಕಾಯಿತು. ಇಂಥ ಮಾತು ಕೇಳಿಕೊಂಡು ನಾನಿಲ್ಲಿ ನಿಂತಿರಲಾರೆ. ನಾನಿನ್ನು ಬರುತ್ತೇನೆ. ಅಪ್ಪಣೆ ಕೊಡಬೇಕು.

ಬಾದ: ಏನಡ್ಡಿ ಇಲ್ಲ. ಒಂದು ಕ್ಷಣ ಇರಿ. ಆ ಹುಡುಗಿಯನ್ನ ನಿಮ್ಮೆದುರು ಒಂದು ಮಾತು ಕೇಳೋಣ.

(ರಾಣಿ ಹೊರಡುವಂತೆ ಹೆಜ್ಜೆ ಹಾಕಿದ್ದವಳು ನಿಲ್ಲುತ್ತಾಳೆ. ಅಕ್ಬರ್ ಅನಾರ್ಕಳಿಯನ್ನು ಸಂಜ್ಞೆಯಿಂದ ಕರೆಯುತ್ತಾನೆ. ಅವಳು ಬಂದು ಎದುರು ನಿಂತು ಸಲಾಂ ಮಾಡುತ್ತಾಳೆ.)

ನಿನ್ನ ಇಷ್ಟ ಏನು? ಗವಾಯ್ ಜೊತೆಗೆ ನಿಮ್ಮೂರಿಗೆ ಹೋಗುತ್ತೀಯಾ?

ಅನಾ: (ತಲೆ ತಗ್ಗಿಸಿಕೊಂಡು ಸೀರೆಯ ಸೆರಗನ್ನು ಎರಡು ಕೈಯಲ್ಲಿ ಹಿಡಿದು ಸವರುತ್ತಾ) ಊಃ (ಎಂದು ತಲೆ ಆಡಿಸುವಳು.)

ಬಾದ: ಒಳ್ಳೆ. ಒಳ್ಳೆಯದು ಅರಮನೆಯಲ್ಲೇ ಇರುವೆಯಂತೆ. ನಮ್ಮ ಪರಿವಾರದಲ್ಲಿರಿಸಿಕೊಳ್ಳುತ್ತೇವೆ. (ಅನಾರ್ಕಳಿ ಏನೂ ಹೇಳುವುದಿಲ್ಲ.) ಏನು? (ಅವಳು ಷಾಹಜಾದನ ಕಡೆ ನೋಡುವಳು. ಯಾಕೆ ಷಾಹಜಾದರನ್ನು ನೋಡುತ್ತೀಯೆ? (ಅನಾರ್ಕಳಿ ರಾಣಿಯ ಕಡೆ ನೋಡುವಳು.)

ರಾಣಿ: ಏನೇ, ನನ್ನ ನೋಡುತೀ? ನಿನ್ನಿಷ್ಟ ಏನು ಹೇಳು.

ಅನಾ: (ಮೆಲ್ಲನೆ) ಖುದಾವಂದ್, ನಾನು ಷಾಹಜಾದರಲ್ಲಿ ಇರುತ್ತೇನೆ.

ರಾಣಿ: ಆಃ!

ಬಾದ: ಪರವೇ ಇಲ್ಲ; ಹುಡುಗಿ ಒಳ್ಳೆಯ ಧೈರ್ಯವಂತೆ! ನಮ್ಮಲ್ಲಿಗೆ ಬರುವುದಿಲ್ಲ, ಷಾಹಜಾದರಲ್ಲಿಗೆ ಹೋಗುತ್ತೇನೆ, ಎನ್ನುತಾಳೆ! ಏನು ಅಲ್ಲಿ ವಿಶೇಷ?

ಅನಾ: (ತಟ್ಟನೆ) ಷಾಹಜಾದರು . . . (ಎಂದು ಆ ಮಾತನ್ನು ತಾನು ಹೇಳಲಾಗದೆಂದು ಮನಕಂಡು ಅವನ ಕಡೆ ತಿರುಗಿ) ಅರಿಕೆ ಮಾಡಲಿ? (ಸಲೀಂ ಮಾಡು ಎಂದು ತಲೆ ಆಡಿಸುವನು) ಷಾಹಜಾದರು ನನ್ನನ್ನು ಮದುವೆಯಾಗುತೇನೆ ಎಂತ ಅಪ್ಪಣೆ ಕೊಡಿಸಿದರು.

ಬಾದ: ಮದುವೆ?

ರಾಣಿ: ಮದುವೆ!

ಸಲೀಂ: ಹೌದು ಬಾಪ್, ಹೌದು ಮಾಜೀ.

ಬಾದ: ನಿಜವಾಗಿ ಹೇಳಿದ್ದೆಯಾ? ಇಲ್ಲ, ಈಗ ಇವಳು ಹೇಳಿ ನೀನು ಒಪ್ಪುತಿದೀಯೊ?

ಸಲೀಂ: ಈ ದಿನ ಇಲ್ಲಿ ಕುಳಿತುಕೊಳ್ಳುವ ಮೊದಲು ಇವಳೂ ನಾನೂ ಮಾತನಾಡಿದೆವು. ಆಗ ಇವಳಿಗೆ ಹೇಳಿದೆ. ಈಗ ಈ ಮಾತೆಲ್ಲ ಆಗದಿದ್ದರೆ ಜಲಸಾ ಮುಗಿದ ಒಡನೆ ಅರಿಕೆಮಾಡಿ ಅಪ್ಪಣೆ ಕೇಳುತ್ತಿದ್ದೆ.

ಬಾದ: ಏನು, ಷಾಹಜಾದ್, ನಿಮ್ಮ ನಡತೆ ನಿಮಗೆ ಸರಿಯೆಂತ ಕಾಣುತಾ ಇದೆಯೋ? ನಮ್ಮಪ್ಪಣೆ ಮೊದಲೊ ನಿಮ್ಮೊಪ್ಪಿಗೆ ಮೊದಲೊ? ಯಾವುದು ಕ್ರಮ?

ಸಲೀಂ: ಏನು ತಪ್ಪಿದ್ದರೂ ಮನ್ನಿಸಬೇಕು.

ಬಾದ: ಮೊದಲು ತಪ್ಪು ಹೌದು ಎನ್ನಿ. ಆಮೇಲೆ ಮನ್ನಣೆ ಕೇಳು ವಿರಂತೆ. ಏ ಹುಡುಗಿ, ನೀನೇನು ದೇವಲೋಕದ ಹೌರಿ ಎಂತ ತಿಳಿದಿದೀಯೊ? ಏನು ಸಂಗತಿ?

(ಅನಾರ್ಕಲಿ ಏನು ಹೇಳಲೂ ತೋರದೆ ಸುಮ್ಮನಿರುವಳು.)

ರಾಣಿ: ನಮ್ಮ ಹಳ್ಳಿಯ ಹುಡುಗಿ ಸುಖವಾಗಿ ಊಟ ಮಾಡಿಕೊಂಡಿ

ರಲಿ ಎಂತ ಕರೆಸಿದರೆ ನೀನು ರಾಣಿ ಜೊತೆಗೆ ರಾಣಿಯಾಗೋಣ ಎಂತಲೇ ನೋಡಿದೆಯೇನೇ ?

ಅನಾ : (ಅಳುತ್ತ) ಖುದಾವಂದ್, ನಾನರಿಯದವಳು. ದೊಡ್ಡವರು ಹೇಳಿದರು. ಒಲ್ಲೆ ಅನ್ನೋಕೆ ಧೈರ್ಯವಿಲ್ಲದೆ ಹೋಯಿತು.

ಬಾದ: ಬಾದಷಾಹನ ಮಹಲ್ ಇಷ್ಟು ಹಗುರ ಆದದ್ದು ನಮಗೆ ತಿಳಿಯಲಿಲ್ಲ. ಒಳ್ಳೆಯದು. ಅಲ್ಲಿರು. (ಅನಾರ್ಕಲಿ ತಾನಿದ್ದ ಸ್ಥಾನದಿಂದ ಹೋಗುವಳು) ಗವಾಯ್ ಸಾಹೆಬ್, ಇಲ್ಲಿ ಬನ್ನಿ. (ಗವಾಯ್ ಹತ್ತಿರ ಬರುವನು) ನಾವು ಈ ವಿಷಯ ಇನ್ನು ಸ್ವಲ್ಪ ಯೋಚಿಸಿ ನಮ್ಮ ನಮ್ಮಲ್ಲಿ ಮಾತನಾಡಬೇಕಾಗಿದೆ. ನಾಳೆ ಬೆಳಗ್ಯೆ ಪ್ರಹರವಾದಮೇಲೆ ಇಲ್ಲಿ ಬನ್ನಿ; ಇತ್ಯರ್ಥ ತಿಳಿಸುತ್ತೇವೆ.

ಗವಾಯ್ : ಅಪ್ಪಣೆ ಖುದಾವಂದ್ (ಎಂದು ಹೊರಡುವನು)

ಬಾದ: ಸಲೀಂ ನೀನು ನನ್ನ ಹಿರಿಯ ಮಗ. ದೇವರು ನನ್ನ ಹಣೇಲಿ ಇಷ್ಟು ಆಯುಸ್ಸು ಬರೆಯದೆ ಇದ್ದಿದ್ದರೆ ಈ ವೇಳೆಗೆ ನೀನು ಬಾದಷಾಹನಾಗಬೇಕಾಗಿತ್ತು. ಇಂಥವನು ಹೀಗೆ ಹೊಣೆ ಮರೆತು ನಡೆದಿರುವುದು ತುಂಬ ತಪ್ಪು. ಇದಕ್ಕೆ ತಕ್ಕ ಶಿಕ್ಷೆಯನ್ನು ನೀನು ಒಪ್ಪಿಕೊಳ್ಳಬೇಕು.

ಸಲೀಂ : ತಮ್ಮ ಆಯುಸ್ಸು ಎನ್ನುವುದು ಇನ್ನು ನೂರು ವರ್ಷ ಬೆಳೆಯಲಿ. ಬಾದಷಾಹನಾಗಬೇಕು ಎಂತ ನನಗಾಸೆ ಇಲ್ಲ. ಹೊಣೆ ಮರೆತು ನಾನು ಮಾಡಿದ ತಪ್ಪು ಯಾವುದು ತಿಳಿದರೆ ಕ್ಷಮೆಬೇಡುತ್ತೇನೆ.

ಬಾದ: ವಾರ ವಾರಕ್ಕೆ ಬೇರೆಯ ಹೆಣ್ಣನ್ನ ಕರೆಯುತೀಯಲ್ಲ. ಮನೆತನದ ಮರ್ಯಾದೆ ಹೇಗೆ ಉಳಿಯಬೇಕು ?

ಸಲೀಂ : ಇನ್ನೂ ನನ್ನ ತಪ್ಪು ತಿಳಿಯಲಿಲ್ಲ.

ಬಾದ: ಎರಡು ತಿಂಗಳ ಹಿಂದೆ ಜುಲೇಯಿಕಾ, ತಿಂಗಳ ಹಿಂದೆ ಲೇಲಾ, ಈಗ ಈ ಅನಾರ್ಕಲಿ. ನಿನಗಿದು ಸರಿ ಎನ್ನಿಸಬಹುದು ; ನೋಡಿದವರು ಏನೆಂದಾರು ?

ಸಲೀಂ : (ರಾಣಿಯ ಕಡೆ ನೋಡುತ್ತ) ಯಾರೋ ನನ್ನ ನಡತೆಯನ್ನು ಬಹು ಸೂಕ್ಷ್ಮವಾಗಿ ನೋಡಿ ವರದಿಮಾಡಿದಾರೆ. ಜುಲೇಯಿಕಾನ ಲೇಲಾನ ನಾನು ಸರಸವಾಗಿ ಮಾತನಾಡಿಸಿದ್ದುಂಟು. ಒಂದು ರವೆಯಷ್ಟು ಅವರಿಗೆ ಅಪಮರ್‍ಯಾದೆ ಮಾಡಿಲ್ಲ. ಅನಾರ್ಕಲಿಯನ್ನ ನಿನ್ನೆ ನೋಡಿದೆ. ಈ ಹೊತ್ತು ಮದುವೆಯಾಗುತ್ತೇನೆ ಎಂದೆ. ಜೇರಿ ಹೇಗೆ ನಡೆಯಬೇಕು ಅಪ್ಪಣೆಯಾದರೆ ಹಾಗೆ ನಡೆಯುತೇನೆ.

ಬಾದ : ಸಂತೋಷ, ಸಲೀಂ. ವಾರದ ಹಿಂದೆ ಬಂಗಾಳಕ್ಕೆ ಸೈನ್ಯ ಹೊರಟಾಗ ಅದನ್ನು ನಿನ್ನ ಕೈಯ ಕೆಳಗೆ ಕಳುಹಿಸಬೇಕೆಂದು ಯೋಚಿಸಿದ್ದೆ. ನೀನು ಈಗಲೇ ಹೊರಡಬೇಕು, ವಂಗದೇಶದ ಪರಿಸ್ಥಿತಿಯನ್ನು ಸರಿಪಡಿಸುವವರೆಗೆ ಹಿಂದಿರುಗಿ ಬರಬಾರದು.

ಸಲೀಂ : ಅಪ್ಪಣೆಯಾದರೆ ಅನಾರ್ಕಲಿಯನ್ನು ಮದುವೆಯಾಗಿ ಜೊತೆಗೆ ಕರೆಯ್ಯೊಯ್ಯುತ್ತೇನೆ.

ಬಾದ : ತಿರುಗಿ ಆ ಮಾತನ್ನೆತ್ತಬೇಡ. ನೀನು ಈಗಲೇ ಹೊರಡಬೇಕು. ಈ ರಾತ್ರಿ ನೀನು ದಾರಿಯ ಬೀಡಾರದಲ್ಲಿ ಮಲಗಬೇಕು. ನಗರದಲ್ಲಿರಕೂಡದು.

ಸಲೀಂ : ಅಪ್ಪಣೆ ಜಹಾಪನಾ. ಈಗಲೇ ಹೊರಡುತ್ತೇನೆ. ಹಿಂದಿರುಗಿ ಬಂದು ಅನಾರ್ಕಲಿಯನ್ನು ಮದುವೆಯಾಗಲು ಅಪ್ಪಣೆ ಬೇಡುತ್ತೇನೆ.

ಬಾದ : ಆ ಮಾತು ಆ ದಿನ. ಈಗ ಹೊರಡು.

**(ಸಲೀಂ ಅಸಹಾಯನಾಗಿ ಒಮ್ಮೆ ಅನಾರ್ಕಲಿ ಇರುವ ಕಡೆ ನೋಡಿ ಅಕ್ಬರನಿಗೆ ರಾಣಿಗೆ ಸಲಾಂ ಮಾಡಿ ಹೊರಟುಹೋಗುತ್ತಾನೆ).**

ರಾಣಿ : ಇನ್ನು ಅಪ್ಪಣೆಯೆ ?

ಬಾದ : **(ಅವಳಿಗೆ ಇರಲು ಸೂಚಿಸಿ ಲೇಲಾ ಅನಾರ್ಕಲಿಯರನ್ನು ಸನ್ನೆಯಿಂದ ಕರೆದು)** ಲೇಲಾ

ಲೇಲಾ : ಖುದಾವಂದ್

ಬಾದ : ಈ ಉಂಗುರ ತೆಗೆದುಕೊ. ಇವಳನ್ನು ಕೊತ್ವಾಲನಲ್ಲಿ ಕರೆದು ಕೊಂಡು ಹೋಗು. ಇವಳನ್ನು ಸೆರೆಯಲ್ಲಿಡಬೇಕೆಂದು ಅಪ್ಪಣೆ ಮಾಡಿದೇವೆಂದು ಅವನಿಗೆ ತಿಳಿಸು. ಅಪ್ಪಣೆ ತಿಳಿಸಿ ಉಂಗುರ ತೋರಿಸಿ ಅದನ್ನು ಮತ್ತೆ ನಮ್ಮಲ್ಲಿತಾ. (ಅನಾರ್ಕಳಿಗೆ) ಅವಳ ಜೊತೆಗೆ ಹೋಗು.

ಲೇಲಾ : (ಉಂಗುರವನ್ನು ತೆಗೆದುಕೊಂಡು) ಅಪ್ಪಣೆ ಖುದಾವಂದ್ (ಹೋಗುವಳು. ಅನಾರ್ಕಳಿ ಜೊತೆಯಲ್ಲಿ ಹೋಗುವಳು).

ರಾಣಿ : ಜಹಾಪನಾ . . . .

ಬಾದ : ಈಗ ಮಾತನಾಡಬೇಡಿ. ನಾಳೆ ಬೆಳಗ್ಗೆ ಇಲ್ಲೆ ತಿರುಗಿ ಮಾತ ನಾಡೋಣ.

ರಾಣಿ : ಪ್ರಭುವಿನ ಇಚ್ಛೆ.

(ಅಕ್ಬರ್ ಹೊರಡುವನು. ರಾಣಿ ತನ್ನ ಅರಮನೆಗೆ ಹೋಗುವಳು. ಜುಲೇಯಿಕಾ ಖತೀಜಾ ಮರದಡಿ ಬಂದು ಸರಿಗೆ ಕಿಂಕಾಬಿನ ಒರೆ ಚೌಕಗಳನ್ನು ತೆಗೆದುಕೊಂಡು ಅವಳ ಹಿಂದೆ ಹೋಗುವರು).

## ದೃಶ್ಯ ೨

(ಅದೇ ಸ್ಥಳ; ಮರುದಿನ ಬೆಳಗ್ಗೆ ಒಂದು ಪ್ರಹರ ಆಗುವ ಹೊತ್ತು. ಜುಲೇಯಿಕಾ ಖತೀಜಾ ಪೀಠಗಳನ್ನು ಅಣಿಮಾಡುತ್ತಿದಾರೆ).

ಜುಲೇ : ಅನಾರ್ಕಳಿ ರಾತ್ರಿಯೆಲ್ಲ ಸೆರೆಯಲ್ಲಿದ್ದಳೆಂತ ಕಾಣುತ್ತದೆ. ಹೇಗೆ ನಗುತಾ ಮೊದಲಾದ ದಿನ ಹೇಗೆ ಅಳುತಾ ಕೊನೆ ಯಾಯಿತು!

ಖತೀ : ಅಯ್ಯೋ ನನ್ನ ತಾಯಿ, ಅದಕ್ಕೇ ಬಲ್ಲವರು ಹೇಳೋದು, ಅತೀ ಒಳ್ಳೇದು ಆಗೋದು ಬೇಡ ಅಂತ. ಇತ್ತ ಬೆಟ್ಟ ಎಷ್ಟು ಎತ್ತರ ಇತ್ತ ತಪ್ಪಲು ಅಷ್ಟೇ ತಗ್ಗು. ತಿಳಿಯದ ಹುಡುಗಿ ಒಂಟಿಯಾಗಿ ಏನು ಭಯಪಟ್ಟಿತೋ!

ಜುಲೇ : ಏನಾದರೂ ಹೇಳಿಕಳುಹಿಸೋಣ ಎಂದರೆ ರಾಣಿಯುವರು, ಬೇಡ, ಎಂದರು. ಲೇಲಾ ಹೋಗಿ ಬಾದಷಹರಿಗೆ ಏನೇನೋ ಹೇಳಿದಳಂತೆ. ನನ್ನ ಲೇಲಾನ ಸರಿಯಾಗಿ ಕಾಣಲಿಲ್ಲ ಎಂತ ಬಾದಷಾಹರು ಷಹಜಾದರನ್ನ ಗದರಿಸಿದರಂತೆ. ಆ ಮಾತು ಅವರಿಗೆ ರಾಣಿಯುವರು ಹೇಳಿರಬೇಕು ಎಂತ ಷಹಜಾದರು ತಿಳಿದರಂತೆ. ಏನಮ್ಮ ಈ ಗ್ರಹಚಾರ! ಈ ಅರಮನೆಯ ಬಾಳೇ ಇಷ್ಟು! ರಾಣಿಯುವರೋ, ಇದು ಮಾಡು ಎಂತ ನಮಗೆ ಹೇಳಿದ್ದರೆ ನಾವು ನೋಡಬಹುದಿತ್ತು, ಬಾದಷಹರೇ ಸೂತ್ರ ಹಿಡೀತೇವೆ ಎಂದರೆ ನಮುಗೇಕೆ ಅದರ ಗೋಜು, ಎಂದರು. ಆಯಿತು! ಸ್ವಲ್ಪ ಹೊತ್ತಿನ ಮೇಲೆ ಬಾದಷಾಹರು ಈ ಅರಮನೆಗೇ ಬಂದರು. ಇಲ್ಲೇ ತಂಗಿದರು. ಸಂಜೆಯ ಕೋಪ ರಾತ್ರೀಲಿ ತಿಳಿದಿರುತ್ತೆ ಅನ್ನು. ಇನ್ನೆಲ್ಲ ಸರಿ ಹೋಗುತ್ತೆ.

ಲೇಲಾ : (ದೂರದಲ್ಲಿ ಕಾಣಿಸಿಕೊಂಡು ಮೆಲ್ಲನೆ ಬಂದು) ಏನು ಜೂಲೀ ನಿನ್ನೆ ನನಗೆ ಒಳ್ಳೇ ಮೋಸಮಾಡಿದಿ ಅಲ್ಲ?

ಜುಲೇ : ನಿನಗೆ ಏನು ಮೋಸ, ಲೇಲಾ? ನನಗೂ ಮೋಸ ಅಲ್ಲವೇನು?

ಲೇಲಾ : ಅಯ್ಯೋ ಪಾಪ ಯಾಕಲ್ಲ? ಆದರೆ ನಿನ್ನ ಮಾತು ಹಿಂದಿನ ಮಾತು. ನನ್ನ ಮಾತು ನಿನ್ನೆಯದು.

ಜುಲೇ : ಯಾರ ಮಾತೂ ನಿನ್ನೆಯದೆ; ಇಂದಿನ ಮಾತು ಯಾರದಕ್ಕ?

ಲೇಲಾ : ನಿನ್ನ ಗೆಳತೀದು! ಅನಾರ್ಕಳೀದು! ಅವಳು ಒಳ್ಳೆ ಚೆಲುವೆ ಅಲ್ಲ?

ಜುಲೇ : ಅಲ್ಲ ಎಂದರೆ ಆಗುತ್ತೆಯೆ?

ಲೇಲಾ : ಅದಕ್ಕೇ ಷಹಜಾದರು ಅವಳಿಗೆ ಹಾಗೆ ತೀರಾ ಮರುಳಾಗಿದ್ದಾರೆ ಅಲ್ಲ?

ಜುಲೀ : ಹಾಗೆ ತೀರಾ! ಹೇಗೆ ತೀರಾ?

ಲೀಲಾ : ನಿದ್ದೆಯಲ್ಲೂ ಲೀಲಾ ಅನ್ನುತಿದ್ದವರು ಅವಳನ್ನು ಕಂಡದ್ದೇ ನನ್ನ ಕೈಬಿಟ್ಟರು.

ಖತೀ : ಈಗಲೂ ನಿದ್ದೇಲಿ ಲೀಲಾ ಅಂತಲೇ ಅನ್ನುತ್ತಾರೆ. ಎಚ್ಚರವಾದಾಗ ಅನಾರ್ಕಲಿ.

(ಜುಲೇಯಿಕಾ ಸ್ವಲ್ಪ ನಕ್ಕು ತಡೆದುಕೊಳ್ಳುವಳು)

ಲೀಲಾ : ಅದೂ ನಿಜ ಅಲ್ಲ ಅಕ್ಕ ?

ಜುಲೇ : ಈ ಮಾತು ಈಗೇಕೆ ಲೀಲಾ ? ಇದು ನಮ್ಮೆಲ್ಲರ ಹಣೇಬರಹ. ಇಹೊತ್ತು ನೀನು. ನಾಳೆ ಅನಾರ್ಕಲಿ.

ಲೀಲಾ : ಷಾಹಜಾದರು ನಾಳೆ ಅನಾರ್ಕಲಿಯನ್ನೂ ಬಿಟ್ಟುಬಿಡುತ್ತಾರೆ ಅಂತೀಯಾ ?

ಜುಲೇ : ಬಿಡೋದಿಲ್ಲ ಅಂತ ಯಾರು ಹೇಳಬೇಕು ? ಚಂದ್ರನನ್ನ ನೋಡಿ ನೂರು ಹೂ ನಗುತ್ತವೆ. ಅವನು ನಗುವುದು ಒಂದು ಹೂವನ್ನ ನೋಡಿಯೆ ? ನಕ್ಕ ಎಂತ ಒಂದು ಹೂ ಅಂದು ಕೊಂಡಿತು. ಅವನದೇನು ತಪ್ಪು ? ಹೂವಿನ ತಿಳಿವಳಿಕೆ ತಪ್ಪು. ಅದಕ್ಕೇ ತಿಳಿಯುತ್ತೆ, ಇಂದಲ್ಲ ನಾಳೆ, ತಾನು ತಿಳಿದದ್ದು ತಪ್ಪು ಅಂತ.

ಲೀಲಾ : (ತೂಕತಪ್ಪಿ) ಅಯ್ಯೋ ನಾನು ಸಹಿಸಲಾರೆ, ಸಹಿಸಲಾರೆ. ನೆನ್ನೆ ಷಹಜಾದರು ನನ್ನನ್ನ ಕಾಲಿಂದ ಒದ್ದುಬಿಟ್ಟರು.

ಜುಲೇ : ಅಯ್ಯೋ ತಾಯಿ, ಏನು ಮಾತೇ ಇದು ?

ಖತೀ : ಯಾಕೇ ತಾಯಿ, ಏನಾಯಿತು ?

ಲೀಲಾ : ನೀನು ತಪ್ಪು ದಿಕ್ಕು ತೋರಿಸಿದೆ, ನಾನು ಹುಡುಕಿಕೊಂಡು ಹೋದೆನಲ್ಲಾ, ಜೂಲೀ ....

ಜುಲೇ : ತಿರಿಗಿ ಅದೇ ಮಾತು ಹೇಳುತೀಯಲ್ಲಾ ! ನನ್ನದು ತಪ್ಪಾಯಿತು ; ಮರೆತುಬಿಡು.

ಲೀಲಾ : ತಪ್ಪು ಇರಲಿ ; ಹೇಳೋದು ಕೇಳು. ಅಲ್ಲಿ ಇಲ್ಲ ಅಂತ ತಿಳೀತು. ಸುತ್ತಿಕೊಂಡು ಇತ್ತ ಹೋದೆ. ಅಲ್ಲಿ ಬಳ್ಳೀ ಮನೇಲಿ ಇವರು ಅವಳನ್ನು ಅಪ್ಪಿಕೊಂಡು ನಿಂತಿದಾರೆ.

ಇಬ್ಬರಿಗೂ ವೈಮನಸ್ಯ. ನನ್ನ ನೋಡಿದರು; ಅವಳನ್ನು ಬಿಟ್ಟರು. ಅವಳು ನನ್ನ ನೋಡಿ ಇತ್ತಲಾಗಿ ಹೊರಟಳು.

ಜುಲೇ: ಹೌದು ಅವಳು ಸ್ವಲ್ಪ ಮುಂದಾಗಿ ಬಂದಳು.

ಲೇಲಾ: ನಾನು ಅವರ ಹತ್ತಿರ ಹೋದೆ. ನನ್ನ ಕೈಬಿಟ್ಟರಲ್ಲ ಎಂದೆ.

ಖತೀ: ಉಂ.

ಲೇಲಾ: ಹಿಂದೆ ಹಿಡಿದಿದ್ದೆ ಅಂದರೆ ಈಗಲೂ ಹಿಡಿದೇ ಇದೇನೆ, ಬಿಟ್ಟದ್ದು ಎನ್ನುವುದು ಇಲ್ಲ, ಎಂದರು.

ಖತೀ: ಆಮೇಲೆ ?

ಲೇಲಾ: ನಾ ಹೇಳಿದೆ "ನನ್ನ ನೀವು ಮದುವೆಯಾಗುತೀರಿ ಅಂತ ಎಲ್ಲಾ ತಿಳಿದಿದಾರೆ. ಆಗದೇ ಹೋದರೆ ಎಲ್ಲಾ ಮಂದಿ ನನ್ನ ನೋಡಿ ನಗತಾರೆ" ಅಂತ.

ಖತೀ: ಅದಕ್ಕೆ ?

ಲೇಲಾ: "ಅವರು ತಿಳುಕೊಂಡರೆ ನಾನು ಹೊಣೆಯೆ?" ಎಂದರು. ನಾನು ಕಾಲಿಗೆ ಬಿದ್ದೆ, ಕೇಳಿಕೊಳ್ಳೋಕೆ.

ಖತೀ: ಆಮೇಲೆ ?

ಲೇಲಾ: ಏನು ಆಮೇಲೆ? ಒದ್ದು ಬಿಡಿಸಿಕೊಂಡರು, ಇತ್ತ ನಡೆದು ಬಂದರು. ದೈವವೇ ಅಂತ ನಾನು ಪೆಚ್ಚುಮುಖ ಹಾಕಿಕೊಂಡು ಅವರ ಹಿಂದೆ ಬಂದೆ.

ಖತೀ: ಹೌದು ನೀನು ಹಿಂದೆ ಬಂದೆ. ಇಷ್ಟೆಲ್ಲಾ ಆಯಿತೆ ನಿನ್ನೆ?

ಲೇಲಾ: ಆಯಿತಕ್ಕಾ. ನಾನು ಒದೇ ತಿಂದೆ; ನಮ್ಮ ಜೂಲೀ ಗೆಳತಿಗಾಗಿ.

(ರಾಣಿ ಬರುವಳು: ಮರ್ಯಾದೆ ಪಡೆದು)

ರಾಣಿ: ಆಯಿತೇನಿರೆ ಹುಡುಗಿಯರಾ ?

ಖತೀ: ಆಯಿತು ಮಾಜೀ

(ಷಾಪಜಾದ ಬರುವನು. ಮರ್ಯಾದೆಗಳು ನಡೆದ ಮೇಲೆ)

ರಾಣಿ: ನಿನ್ನೆ ಹೊರಡಲಿಲ್ಲ ಷಾಹಜಾದ್ ?

ಸಲೀಂ: ಸ್ವಲ್ಪ ದೂರ ಹೋದವನು ಹಿಂದಕ್ಕೆ ಬಂದೆ. ಬಾಪ್ ಇನ್ನೂ ಬರಲಿಲ್ಲ?

ರಾಣಿ: ಬಂದು ಬಿಡುತ್ತಾರೆ. ನನ್ನ ಜೊತೆಗೇ ಹೊರಟಿದ್ದರು. ಇಲ್ಲಿ ಇದನ್ನೆಲ್ಲ ನೋಡಿ ಕೊಳ್ಳೋಣ ಎಂತ ನಾನು ಕ್ಷಣ ಮುಂದಾಗಿ ಬಂದೆ.

ಸಲೀಂ ನಿನ್ನೆ ಏನು ಬಾಪ್ ಹಾಗೆ ತಿಳಿದರು?

ರಾಣಿ: (ಮೆಲ್ಲನೆ ದನಿಯಲ್ಲಿ) ಸ್ವಲ್ಪ ತಡೆದರೆ ಎಲ್ಲಾ ತಿಳಿಯುತ್ತದೆ. (ಎಂದು ಹುಬ್ಬಿನ ಆಟದಿಂದ ಲೇಲಾವನ್ನು ಸೂಚಿಸುತ್ತಾಳೆ. ಅಕ್ಬರನು ಬರುತ್ತಾನೆ. ಮರ್ಯಾದೆಗಳಾಗುತ್ತಿರುವಂತೆಯೇ)

ಬಾದ: ಇದೇನು ಷಾಹಜಾದ್ ಇಲ್ಲಿದೀರಿ. (ರಾಣಿ ಸೇವಕಿಯರಿಗೆ ಸನ್ನೆ ಮಾಡುತ್ತಾಳೆ) ಬಂಗಾಳದ ದಾರಿಯಲ್ಲಿರಬೇಕಲ್ಲ? (ರಾಣಿ ಸಲೀಂ ಹೊರತು ಉಳಿದವರು ದೂರ ಸರಿಯುತ್ತಾರೆ. ಲೇಲಾ ಮೆಲ್ಲಮೆಲ್ಲನೆ ಹೋಗಿ ಒಂದು ಮರದ ಮರೆಯಲ್ಲಿ ನಿಲ್ಲುತ್ತಾಳೆ).

ಸಲೀಂ: ಆಜ್ಞಾಪತ್ರ ಮುಟ್ಟಿತು. ಹಿಂತಿರುಗಿ ಬಂದೆ.

ಬಾದ: ಆಜ್ಞಾಪತ್ರ? ಯಾರದು? ನಿಮ್ಮ ಮಾಜೀ ಸಾಹೇಬಾ ಬರ ಹೇಳಿದರೊ?

(ರಾಣಿ ಚಕಿತಳಾಗಿ ಷಾಹಜಾದನನ್ನು ನೋಡುವಳು)

ಸಲೀಂ: (ಪಾಗಿನಿಂದ ಒಂದು ಪತ್ರವನ್ನು ತೆಗೆದು) ಪರಾಂಬರಿಸಬೇಕು.

ಬಾದ: (ಅದನ್ನು ನೋಡಿ) ನಮ್ಮ ಮುದ್ರೆ ಇದೆ! ಯಾರು ಕಳುಹಿಸಿದರು? ಇಲ್ಲ ನಿಮ್ಮದೇ ಇದಕ್ಕೆಲ್ಲಾ ಏರ್ಪಾಡು ಇದೆಯೋ?

ಸಲೀಂ: (ಬೇಸರದಿಂದ) ಇಂಥ ಮಾತಿಗೆ ಉತ್ತರ ಹೇಳುವುದಕ್ಕೆ ನನಗೆ ಯೋಗ್ಯತೆ ಇಲ್ಲ. ಮಗ ಬಹು ದುಷ್ಟ ಎಂತ ತಾವಂತೂ ನಿಶ್ಚಯಮಾಡಿಕೊಂಡಿದೀರಿ.

ಬಾದ: ಒಳ್ಳೆಯದು ನೋಡೋಣ. ನಮ್ಮ ಮುದ್ರೆ ಇದೆ ಎಂದಮೇಲೆ ನಾವು ಒಪ್ಪಿಕೊಳ್ಳುತ್ತೇವೆ. ಯಾರದು? ಹೋಗಿ ಕೊತ್ವಾಲನಿಗೆ ಹೇಳಿ ಆ ಹುಡುಗಿಯನ್ನು ಕರೆತನ್ನಿ.

(ಖತೀಜಾ ಹೋಗುವಳು)

ರಾಣಿ: ಪೀಠದಲ್ಲಿ ಮಂಡಿಸಬಹುದಲ್ಲ.

ಬಾದ: ಹೌದು ಕುಳ್ಳಿರಿ. ಕುಳ್ಳಿರಿ ಷಾಹಜಾದ್.

ಸಲೀಂ: (ಬಾಗಿ ಸಲಾಂ ಮಾಡಿ) ಅಪ್ಪಣೆ ಕೊಡಬೇಕು. ಈ ವಿಷಯ ಇತ್ಯರ್ಥವಾಗುವವರೆಗೆ ನಾನು ನಿಂತಿರುವುದು ಸರಿ.

ಬಾದ: ಯಾವ ವಿಷಯ?

ಸಲೀಂ: (ರಾಣಿಯ ಕಡೆ ನೋಡುತ್ತ) ಈ ಕಾಗದ ಹೇಗೆ ಹುಟ್ಟಿತು ಎನ್ನುವುದು.

ರಾಣಿ: ಏನು ಅಣ್ಣ ನನ್ನನ್ನು ಹಾಗೆ ನೋಡುತ್ತೀರಿ? ಕಾಗದವನ್ನು ನಾನು ಬರೆಸಿ ಕಳುಹಿಸಿದೆ ಎಂತಲೆ?

ಸಲೀಂ: ಬರೆಸಿದರೆ ಏನು ತಪ್ಪು? ನಾನು ಅಪರಾಧಿ. ಶಿಕ್ಷೆ ಪಡೆದು ಆಮೇಲೆ ಬಂಗಾಳಕ್ಕೆ ಹೋಗಲಿ ಎಂತ ಕರೆಸಿರಬಹುದಲ್ಲ?

ರಾಣಿ: ಬಹುದಪ್ಪ ಬಹುದು. ಆದರೆ ನಾನಿನ್ನೂ ಅಷ್ಟು ರಾಣಿಯಾಗಿಲ್ಲ.

ಬಾದ: ಅವರು ಶಿಕ್ಷಿಸಬೇಕಾದ ಅಪರಾಧ ಯಾವುದು?

ಸಲೀಂ: ಅವರ ಪರಿವಾರದ ವಿಷಯದಲ್ಲಿ ಅತಿ ಸ್ವಾತಂತ್ರ್ಯ ವಹಿಸಿಕೊಂಡದ್ದು.

ರಾಣಿ: ಇಂಥ ತಪ್ಪಿಗೆ ನಿಮಗೆ ನಿಮ್ಮ ಹೆತ್ತ ತಾಯಿ ಶಿಕ್ಷೆ ಮಾಡಬಹುದು. ನಮಗೆ ಎಲ್ಲಿ ಆ ಅಧಿಕಾರ? ಕಿರಿಯ ರಾಣಿಯಾದವಳಿಗೆ ಷಾಹಜಾದರು ಬಾದಷಹರು ಇಬ್ಬರೂ ಹಿರಿಯರೆ.

(ಖತೀಜಾ ಕೊತ್ವಾಲನೊಂದಿಗೆ ಬರುವಳು)

ಖತೀ: (ರಾಣಿಗೆ) ಕೊತ್ವಾಲರು ಏನೋ ಅರಿಕೆಮಾಡುತ್ತಾರೆ.

ರಾಣಿ: (ಅವನನ್ನು ನೋಡಿ) ಅರಿಕೆ ಮಾಡಿ.

ಕೊತ್ವಾಲ: ಏನಪ್ಪಣೆ ಎಂತ ಕೇಳೋದಕ್ಕೆ ಬಂದೆ.

ಬಾದ: (ಖತೀಜಾಗೆ) ಯಾಕೆ? ನೀ ಹೇಳಲಿಲ್ಲ?

ಖತೀ: ಹೇಳಿದೆ. ಅವರು ಮುಖ ಕೆಟ್ಟರು. ಮುದ್ರೆ ಉಂಗುರ ತೆಗೆದುಕೊಂಡು ಇತ್ತಲಾಗಿ ಬಂದರು.

ಬಾದ: ಹುಡುಗೀನ ಕರೆತಾ ಎಂದರೆ ಮುದ್ರೆ ಉಂಗುರ ತಂದದ್ದೇನು?

ಕೊತ್ವಾಲ: ಖುದಾವಂದ್ ಅಪ್ಪಣೆಪ್ರಕಾರ ಗೋಡೆಸೆರೆಮಾಡಿದೆ. ತಾ ಎಂದರೆ ಗೋಡೆ ಒಡೆಸಿ ಲಾಷ್ ತರುತ್ತೇನೆ.

ಬಾದ: ಗೋಡೆ ಸೆರೆ?

ಸೆಲೀಂ: ಲಾಷ್?

(ಖತೀಜಾ ಜುಲೇಯಿಕಾ ಗೋಳೋ ಎಂದು ಅಳುವರು. ರಾಣಿ ಮುಖ ಮುಚ್ಚಿಕೊಂಡು ಅಳುವನ್ನು ತಡೆದುಕೊಳ್ಳುವಳು. ಸೆಲೀಂ ಪ್ರಜ್ಞೆ ತಪ್ಪಿದಂತೆ ಪೀಠದಮೇಲೆ ಕುಳಿತುಕೊಳ್ಳುವನು)

ಬಾದ: ಗೋಡೆಸೆರೆ ಮಾಡು ಎಂತ ಯಾರು ಹೇಳಿದರು?

ಕೊತ್ವಾಲ: ಮುದ್ರೆಉಂಗುರ ತಂದ ಹೆಣ್ಮಗಳು (ಎಂದು ಖತೀಜಾ ಮೂಲಕ ಉಂಗುರವನ್ನು ಒಪ್ಪಿಸುವನು).

ಬಾದ: ಎಲ್ಲಿ ಅವಳು?

ಕೊತ್ವಾಲ: ಅಲ್ಲಿದಾರೆ (ಎಂದು ದೂರದಲ್ಲಿ ನಿಂತಿರುವ ಲೇಲಾಕಡೆಗೆ ಕೈ ತೋರಿಸುವನು).

ಬಾದ: ಅವಳನ್ನು ಬರಹೇಳು ಇಲ್ಲಿ. (ಲೇಲಾ ತಾನೇ ಬರುತ್ತಾಳೆ) ಇವರಿಗೆ ನೀನು ಏನು ಅಪ್ಪಣೆ ಮುಟ್ಟಿಸಿದೆ?

ಲೇಲಾ: (ಉನ್ಮತ್ತಳಾಗಿ ನಗುತ್ತ) ಗೋಡೇ ಸೆರೆ ಮಾಡಿ ಎಂತ.

ಬಾದ: ನಾವು ಅದನ್ನ ಹೇಳಲಿಲ್ಲವಲ್ಲ.

ಲೇಲಾ: ಪ್ರಭುಗಳು ಹೇಳಿದ ಶಿಕ್ಷೆ ಸಾಲದು ಅಂತ ನಾನೇ ಅದನ್ನ ಹೆಚ್ಚಿಸಿದೆ. ಹಹ್ಹಹ್ಹ! ಹಹ್ಹಹ್ಹ! (ನಗುತ್ತಾಳೆ).

ಬಾದ: ಹಾಗಾದರೆ ನೀನು ಹಗೆ ತೀರಿಸಿಕೊಳ್ಳುವುದಕ್ಕೆ ಆ ಬಡಪಾಯಿಯನ್ನ ಕೊಂದುಬಿಟ್ಟೆ?

ಲೇಲಾ: ಕೊಂದುಬಿಟ್ಟೇ! ಕೊಂದುಬಿಟ್ಟೇ!

ರಾಣಿ: ಅಯ್ಯೋ ಪಾಪಿ ಏನು ಕೆಲಸ ಮಾಡಿದಿಯೆ?

ಲೇಲಾ: ನೋಡು. ನೀ ಮಾಡುತಿದ್ದೆಯಾ ಇಂಥಾ ಕೆಲಸಾನ?

ಬಾದ: ಏನು ಹಾಗಾದರೆ ಷಾಹಜಾದರನ್ನು ಹಿಂದಕ್ಕೆ ಬರಹೇಳಿ ಈ ಕಾಗದವನ್ನೂ ನೀನೇ ಕಳುಹಿಸಿದೆಯೋ?

ಲೇಲಾ: ಹೌದು ನಾ ಕಳುಹಿಸಿದೆ.

ಬಾದ: ಯಾಕೆ?

ಲೀಲಾ: ಬದುಕಿದ್ದಾಗ ಅಷ್ಟು ಚೆನ್ನಾಗಿದ್ದ ಮುಖ ಸತ್ತಾಗ ಇನ್ನೆಷ್ಟು ಚೆನ್ನಾಗಿರುತ್ತೆ ನೋಡಲಿ ಎಂತ.

ಸಲೀಂ: ಅಯ್ಯೊ ದೇವ್ರಾ (ಎಂದು ಸುರಗಿಯನ್ನು ಸೆಳೆದು ಏಳುತ್ತಾನೆ).

ಲೀಲಾ: ಜಾ ಏನುಮಾಡುತೀಯೋ ಮಾಡು. ಪ್ರಾಣಾ ಅಲ್ಲವೇ ತೆಗೀತಿ? ತೆಗಿ: ದೆವ್ವವೇ ಆಗಿ ಕಾಡುತೇನೆ.

ರಾಣಿ: ಲೇ ಹುಚ್ಚೀ ಏನು ಮಾತಾಡುತೀಯೇ? ನಾಲಿಗೆ ಸ್ವಲ್ಪ ಹಿಡಿದಿರೇ.

ಲೀಲಾ: ಇನ್ನು ನಾಲಿಗೆ ಹಿಡಿದು ಆಗಬೇಕಾದದ್ದೇನು? ನಿನ್ನೆ ಒದ್ದ; ಇವತ್ತು ಕೊಂದ. ಕೊಲ್ಲಲಿ ಬಿಡು; ಸಾಯುತೇನೆ. ಈ ರಂಡೇಮಕ್ಕಳನ್ನು ನಂಬಿ ಯಾವ ಮುಂಡೇ ಬದುಕಿದಳು? ಈ ಹೆಣ್ಣಿಗ ಒಲಿದ ಅನಾರ್ಕಳಿಯೇ ಸತ್ತಳು. ಇವನು ಒಲ್ಲದೆ ಇರುವ ನಾನು ಬದುಕುತೇನೆಯೆ? (ಎಂದು ನೋವನ್ನು ನೆನೆದು) ಅಯ್ಯೋ ಇವ ನನ್ನ ಒದ್ದ. ಒದ್ದುಬಿಟ್ಟ. ಒದ್ದೇ ಬಿಟ್ಟ. ಅಯ್ಯೋ ನಾನು ಸಹಿಸಲಾರೇ. ಸಹಿಸಲಾರೆ.

ರಾಣಿ: ಅಣ್ಣ ಏನಿವಳದು ಈ ಮಾತು?

ಸಲೀಂ: ನನ್ನ ಬಿಡಬೇಡ ಎಂತ ಕಾಲಿಗೆ ಬಿದ್ದಳು. ಕಾಲು ಬಿಡಿಸಿಕೊಂಡೆ. ಮೈಗೆ ನೋಕಿರಬಹುದು. ನಾನು ಒದೆಯಲಿಲ್ಲ.

ರಾಣಿ: ಕಾಲಿಗೆ ಬಿದ್ದವರು ಯಾರೇ ಆಗಲಿ ಕೈಹಿಡಿದಲ್ಲವೇ ಎತ್ತಬೇಕು.

ಲೀಲಾ: ಹೂಂ ಕೈಹಿಡಿದು ಎತ್ತುತಾನೆ! ಕೈಹಿಡಿದು! ಅನಾರ್ಕಳೀನ ಅಪ್ಪಿ ತೋಳು ಅಪರಂಜಿ ಚಿನ್ನ ಆಗಿತ್ತು. ನನ್ನ ಮುಟ್ಟಿದರೆ ಕಬ್ಬಿಣ ಆಗಿ ಹೋಗೋಲ್ಲವೆ?

ರಾಣಿ: (ಕನಿಕರದಿಂದ) ಅಯ್ಯೋ ಹುಚ್ಚಿ, ಸುಮ್ಮನಿರೇ. ಯಾಕೆ ರೇಗಿಸುವ ಮಾತನಾಡುತೀ?

ಲೀಲಾ: ರೇಗಿಸದಿದ್ದರೆ ತಾನೇ ಅಪ್ಪ ಮಗ ನನ್ನ ಉಸಿರನ್ನ ಉಳಿಸುತಾರೆಯೇನು? ಹೇಗೂ ಸಾಯೋದಾಯ್ತು. ಆದಷ್ಟು ಬೈದು ಸಾಯುತೇನೆ.

ರಾಣಿ: (ಬಾದಷಾಹನಿಗೆ) ತೀರಾ ಹುಚ್ಚೀ ಆಗಿದೆ ಇವಳಿಗೆ. ಈ ಮಾತನ್ನ ಮನಸ್ಸಿಗೆ ತೆಗೆದುಕೊಳ್ಳಬಾರದು.

ಬಾದ: (ಕೈಗಳಲ್ಲಿ ತಲೆಯಿಟ್ಟು ಕುಳಿತಿದ್ದವನು) ಅವಳಿಗೇನೋ ಹುಚ್ಚು ಸರಿ. ಆದರೆ ಅವಳ ಜೊತೆಗೆ ನಾನೂ ಹುಚ್ಚನಾದೆ.

ರಾಣಿ: ಜಹಾಪನಾ !

ಬಾದ: ನಿನ್ನೆ ಬಂದು ಕಾಲು ಒತ್ತುತಾ ತೋಚಿದ್ದನೆಲ್ಲಾ ಹೇಳಿ ಬಿಟ್ಟಳು. ಹುಚ್ಚಿ ಹೇಳಿದ್ದನ್ನೆಲ್ಲಾ ಹುಚ್ಚ, ನಾನು ನಂಬಿ ಬಿಟ್ಟೆ. ಷಾಹಜಾದರು ತಪ್ಪಿನಡೆದರು ಎಂದುಕೊಂಡೆ. ನೀವು ಅವರಿಗೆ ಅತಿಸಲಿಗೆ ಕೊಟ್ಟಿರಿ ಎಂದುಕೊಂಡೆ. ಅನಾರ್ಕಲಿಗೆ ರೂಪಿನ ಗರ್ವ ಎಂದುಕೊಂಡೆ. ಈ ಹುಡುಗಿ, ಬಾಯಲ್ಲಿ ಬೆರಳಿಟ್ಟರೆ ಕಡಿಯೋಳಲ್ಲ, ಇವಳ ಮೈಯಲ್ಲಿ ರೋದು ರಕ್ತ ಅಲ್ಲ ಹಾಲು, ಎಂದುಕೊಂಡೆ.

ರಾಣಿ: ಹೀಗಾಗುತ್ತದೆ ಒಂದೊಂದು ಸಲ.

ಬಾದ: ಒಂದು ಸಲ ಆಯಿತಲ್ಲ. ಇಲ್ಲಿಗೆ ಬಂದಮೇಲಾದರೂ ನನಗೆ ತಿಳಿಯಬೇಡವೇ ? ಕಣ್ಣಿಗೇ ಬಣ್ಣ ಬಂದಿತ್ತು, ಎಲ್ಲಾ ಆ ಬಣ್ಣವಾಗಿ ಕಂಡಿತು. ಹೋಗಲಿ, ಅದನ್ನೆಲ್ಲಾ ಮರೆತೇನು ! ಆದರೆ ಆ ತಿಳಿಯದ ಹುಡುಗಿಯನ್ನ ಇವಳ ಕೈಗೆ ಒಪ್ಪಿಸಿದೆನಲ್ಲಾ, ಆ ತಪ್ಪನ್ನ ನಾನು ಹೇಗೆ ಮರೆಯಲಿ ?

(ಸಲೀಂ ದುಃಖದಿಂದ ಮರುಗುವನು)

ರಾಣಿ: ಆದದ್ದಾಯಿತು. ಚಿಂತಿಸಿ ಫಲವಿಲ್ಲ. ಮುಂದೆ ಏನು, ಅಪ್ಪಣೆಯಾಗಲಿ.

ಬಾದ: ಆ ದೇಹವನ್ನು ತೆಗೆಸಿ ಮರ್ಯಾದೆಯಿಂದ ಶವ ಸಂಸ್ಕಾರ ಮಾಡಿಸಬೇಕು.

ಸಲೀಂ: ಮಾಜೀ ಸಾಹೇಬಾ, ಅವಳ ಸಮಾಧಿಯನ್ನ ಅವಳೂ ನಾನೂ ನಿನ್ನೆ ಕುಳಿತಿದ್ದ ಕಡೆ ಮಾಡಿಸಿರಿ.

ಜುಲೇ: (ಅಳುತ್ತ) ಖುದಾವಂದ್, ಸಮಾಧಿ ಈ ಮರದ ನೆರಳಲ್ಲಿ ಆಗಲಿ.

ಷಹಜಾದರನ್ನು ಅನಾರ್ಕಲಿ ಮೊದಲು ಇಲ್ಲಿ ನೋಡಿದಳು. ಸತ್ತ ದಿನ ಇಲ್ಲಿ ಮಲಗಬೇಕು ಎಂತ ಅವಳ ಆಸೆ.

ಸಲೀಂ: ನನ್ನಡ್ಡಿ ಇಲ್ಲ.

ರಾಣಿ: ಹಾಗೇ ಆಗಲಿ. ಹೋದವಳ ಮಾತಾಯಿತು. ಈ ಹುಚ್ಚು ಹಿಡಿದವಳನ್ನ ಸರಿಯಾಗಿ ನೋಡಿಕೊಂಡು ಕಾಪಾಡಿಕೊಳ್ಳ ಬೇಕು.

ಬಾದ: ಅಲೆಯಲಿ ಬೀದೀಲಿ ಕಳ್ಳರಂಡೆ ಮುಗಳು. ಉಸಿರೇ ತೆಗೆಸಿ ಯೇನು! ಎಂದರೆ ಅದಕ್ಕಿಂತ ಹುಚ್ಚುಹಿಡಿದು ಬೀದಿಯಲ್ಲಿ ಅಲೆಸುವುದೇ ತಕ್ಕ ಶಿಕ್ಷೆ.

ಲೀಲಾ: ನೀ ಶಿಕ್ಷೆ ಕೊಟ್ಟೀಯೆ ದಡ್ಡಣ್ಣ ಬುಡ್ಡ. ಅದನ್ನ ತಿನ್ನೋಕೆ ನಾನಿರಬೇಕಲ್ಲ ಇಲ್ಲಿ? (ಎಂದು ಒಂದು ಗುಳಿಗೆಯನ್ನು ಬಾಯಿಗೆ ಹಾಕಿಕೊಂಡು ನುಂಗುವಳು) ಹ್ಯಾಗೂ ಹಳ್ಳ ಅಗೆಸುತ್ತೀರಿ. ನನಗೂ ಒಂದು ಅಗೆಸಿ ಬಿಡಿ (ಎಂದು ಮಲಗುವಳು)

ಖತೀ: (ಅವಳ ಕಡೆ ನೋಡುತ್ತಾ) ಮಾಜೀ ಇವಳ ಪಾಡೂ ಆಯಿತು.

ಗವಾಯ್: (ದೂರದಲ್ಲಿ ಕಾಣಿಸಿಕೊಂಡು ಸಲಾಮು ಮಾಡುತ್ತಾ ಸಮೀಪಿಸಿ ಬಾದ ಷಾಹನಿಗೆ) ಖುದಾವಂದ್ (ರಾಣಿಗೆ) ಖುದಾವಂದ್ (ಷಾಹ ಜಾದನಿಗೆ) ಖುದಾವಂದ್.

ಬಾದ: ಇವನು ಬಂದ, ಇತ್ಯರ್ಥ ತಿಳಿಯುವುದಕ್ಕೆ. ಇಲ್ಲಿಯೋ ಈ ಅನರ್ಥ ಆಗಿ ಮುಗಿದಿದೆ.

ರಾಣಿ: (ಬಾದಷಾಹನಿಗೆ) ನಾನು ಹೇಳುತೇನೆ, ಉಪಾಯವಾಗಿ. (ಗವಾಯ್‌ಗೆ) ಗವಾಯ್ ಸಾಹೇಬ್, ರಾತ್ರಿ ಒಂದು ಅಚಾತುರ್ಯ ಆಗಿಹೋಯಿತು. ನಿಮಗೆ ಕೆಟ್ಟ ಸುದ್ದಿ ಹೇಳ ಬೇಕಾಗಿದೆ.

ಗವಾಯ್: (ಏನು ಎಂದು ತಿಳಿಯದೆ) ಖುದಾವಂದ್!

ರಾಣಿ: ಪ್ರಭುಗಳು ಹೇಳಿದ್ದೊಂದು ಕೊತ್ವಾಲ ಮಾಡಿದ್ದೊಂದು ಆಗಿ ಅನಾರ್ಕಲಿ, ಪಾಪ, ರಾತ್ರಿ ತೀರಿಕೊಂಡಳು.

ಗವಾಯ್ : ತೀರಿಕೊಂಡಳು? (ಎಂದು ಒಬ್ಬರಾದ ಮೇಲೆ ಒಬ್ಬರ ಮುಖ ವನ್ನು ನೋಡುವನು)

ರಾಣಿ: ಹೌದು ಅನರ್ಥ ಆಗಿ ಹೋಯಿತು.

ಗವಾಯ್ : (ಮಾತನ್ನು ನಂಬಲಾರದೆ) ಖುದಾವಂದ್, ನನ್ನ ಜೊತೆಗೆ ಕಳು ಹಿಸಲಾರದೆ ಈ ಮಾತನ್ನ ಹೇಳುತಿರೋಣಾಗಿದೆಯೊ? ಕಳು ಹಿಸೋದು ಆಗೋದೇ ಇಲ್ಲಾ ಎಂದರೆ ಇಲ್ಲೇ ಇರಿಸಿಕೊಳ್ಳಿರಿ. ಅವಳ ಹಣೇಲಿ ಏನು ಬರೆದಿದೆಯೋ ಅದಾಗಲಿ. ಅವಳೂ ರಾಣಿಯಾಗುವುದಾದರೆ ಆಗಲಂತೆ, ಸಂತೋಷ. ಆದರೆ ಆ ಮಾತನ್ನ ಹೀಗೆ ಕೆಟ್ಟದು ಮಾಡಿ ಹೇಳೋಣ ಬೇಡ.

ರಾಣಿ: ಇಲ್ಲ ಗವಾಯ್ ಸಾಹೇಬ್. ಅವಳು ತೀರಿಕೊಂಡಳು. ಇನ್ನೇನು ಒಂದು ಗಳಿಗೆಯಲ್ಲಿ ಶವಸಂಸ್ಕಾರ ಮಾಡಿಸುತ್ತೇವೆ.

ಗವಾಯ್ : ಶವ! ಸಂಸ್ಕಾರ! ಖುದಾವಂದ್, ತಾವೇ ಅಲ್ಲವೆ ಅವಳನ್ನ ಹಿಡಿಸಿತರಿಸಿದ್ದು?.

ರಾಣಿ: (ನಿಟ್ಟುಸಿರು ಬಿಡುತ್ತ) ಹೌದು

ಗವಾಯ್ : ಸುಖಪಡಿಸೋಕೆ ಕರೆಸಿದಿರಿ. ಪಟ್ಟಳಾಯಿತು ಸುಖಾನ. ಶವವನ್ನಾದರೂ ಊರಿಗೆ ಒಯ್ಯಲೆ?

ರಾಣಿ: ಬೇಡ. ಅವಳು ಬಯಸಿದಳಂತೆ ಇಲ್ಲೇ ಸಮಾಧಿಯಾಗಬೇಕು ಎಂತ.

ಗವಾಯ್ : ಎಂಥ ಜಾಣೆ! ಏನು ಸೂಕ್ಷ್ಮ! ಸತ್ತವರು ಮಲಗೋಕೆ ಹಳ್ಳಿಗಾಡಿನಲ್ಲಿ ಅರಮನೇ ಮರದ ಇಂಥಾ ನೆರಳು ಎಲ್ಲಿಂದ ಬರಬೇಕು? ಖುದಾವಂದ್, ಸಂಸ್ಕಾರ ಹಿಂದೂ ರೀತಿಯಲ್ಲಿ ಆಗುತ್ತದೊ?

ರಾಣಿ: (ಬಾದಶಾಹನಿಗೆ) ಹೌದು ಅಲ್ಲ ಜಹಾಪನಾ?

ಬಾದ: ಹೌದು.

ಗವಾಯ್ : ಆಗ ನಾನು ಇಲ್ಲಿರಬಹುದೋ?

ಬಾದ: ಇರಿ. ಇರಿ.

ಗವಾಯ್ : ಉಪಕಾರವಾಯ್ತು ಖುದಾವಂದ್.

## ದೃಶ್ಯ ೩

(ಅದೇ ಸ್ಥಳ. ಮರುದಿನ. ಹೊಸದಾಗಿ ಮಾಡಿದ ಸಮಾಧಿ ಒಂದು ಕಾಣುತ್ತಿದೆ.)

ಜುಲೇ : (ಒಂದು ಕಡೆಯಿಂದ ಬರುತ್ತ) ಖುದಾವಂದ್, ತಾವೇ ?

ಸೆಲೀಂ : (ಮರೆಯಿಂದ ಮುಂದೆ ಬಂದು) ಯಾರು ? ಜೂಲೀ ?

ಜುಲೇ : ಹೌದು ಬಂದೆ.

ಸೆಲೀಂ : ಇಂಥ ಮಂಜಿನ ಹೊತ್ತಿನಲ್ಲಿ . . . ?

ಜುಲೇ : ತಮಗೆ ಮಂಜಲ್ಲವೇ ? ನನಗೆ ನಿದ್ದೆ ಬರಲಿಲ್ಲ.

ಸೇಲಿಂ : ನನಗೂ ಹಾಗೆಯೇ.

ಜುಲೇ : ಹಸು ಕೂಸು, ಹೋಗಿ ಬಿಟ್ಟಿತು.

ಸೆಲೀಂ : ಹಸು ಕೂಸು ; ಅಪರಂಜಿ.

ಜುಲೇ : ಅಪರಂಜಿ ನಿಜ. ನಾನು, ನೋಡಿ, ಬೇರೆಯವರು ಎಂದರೆ ಕರುಬುವವಳು. ಇವಳನ್ನು ಕಂಡು ಕರುಬೋಕೆ ಆಗಲಿಲ್ಲ. ಅಷ್ಟು ಎಳಸು, ಅಷ್ಟು ಅಚ್ಚು, ನನ್ನ ಅನಾರ್ಕಳಿ ಮನಸ್ಸು.

ಸೆಲೀಂ : ಸ್ವರ್ಗ ಲೋಕದ ವಸ್ತು, ಮನುಷ್ಯರಿಗೆ ತರವಲ್ಲ, ಎಂತ ದೇವರು ಹೀಗೆ ವಿಧಿಸಿದರು.

ಜುಲೇ : ಚೆಲುವು ಗುಣ ಹೆಚ್ಚಾಯಿತು ಎಂತ ದೈವ ಶಿಕ್ಷೆಯನ್ನು ಕೊಟ್ಟಿತು.

ಸೆಲೀಂ : ನಾನು ಅನಾರ್ಕಳಿಗೆ ಅನ್ಯಾಯ ಮಾಡಲಿಲ್ಲ. ನಮ್ಮ ಕೈ ಮೀರಿ ಹೀಗಾಯಿತು.

ಜುಲೇ : ಅನ್ಯಾಯ ನಾನು ಮಾಡಿದೆ ಎಂತ ಅನ್ನಿಸುತ್ತಾ ಇದೆ.

ಸೆಲೀಂ : ಹೇಗೆ ?

ಜುಲೇ : ಆತುರವಾಗಿ ಅವಳನ್ನು ನಿಮ್ಮ ಕೈಗೆ ಸೇರಿಸಿದೆ. ಇಲ್ಲದಿದ್ದರೆ ಇದೆಲ್ಲಾ ಆಗುತ್ತಿರಲಿಲ್ಲ.

ಸೆಲೀಂ : ಅದೇನು ತಪ್ಪು ?

ಜುಲೇ : ತಪ್ಪೆ.

ಸಲೀಂ: ಯಾಕೆ ಹಾಗೆನ್ನುತ್ತೀಯೆ?

ಜುಲೇ: ತಾವೂ ಅವಳೂ ಸುಖವಾಗಿರಲಿ ಅನ್ನೋ ಅಷ್ಟೇ ನಿಜವಾಗಿ ನಾನು, ಲೇಲಾ ನನಗೆ ತಿನ್ನಿಸಿದ ಕಹಿಯನ್ನು ತಾನೂ ಸ್ವಲ್ಪ ತಿನ್ನಲಿ, ಅಂತ ಹೀಗೆ ಮಾಡಿದೆ.

ಸಲೀಂ: ನನ್ನ ಮೇಲೆ ನಿನಗೆ ಕೋಪ ಇಲ್ಲವಲ್ಲ?

ಜುಲೇ: ಕೋಪಮಾಡೋಕೆ ನಾನೆಷ್ಟರವಳು? ಮುಖ ತೋರಿಸೋದೋ ಮರಸಿಕೊಳ್ಳೋದೋ ಅದು ಸೂರ್ಯನ ಇಷ್ಟ. ಅವನು ಮಾಡಿದ್ದನ್ನು ಒಪ್ಪಿಕೊಂಡಿರೋದು ಭೂಮಿಯ ಕೆಲಸ.

ಸಲೀಂ: ಒಳ್ಳೆಯ ಮಾತು. ಹೆಣ್ಣು ತಾಳಿಕೊಂಡರೆ ಗಂಡು ಒಂದು ಪದಾರ್ಥ. ಅವನ ಮನಸ್ಸು ಆಡುವ ಆಟಕ್ಕೆ ಅವನೇ ಹೊಣೆ ಅಲ್ಲ.

ಜುಲೇ: ಹೆಣ್ಣಾದರೂ ಅಷ್ಟೆ. ಗಾಳಿ ಎದುರಿನ ತರಗೆಲೆ. ಬೀಸಿದತ್ತ ಹಾರುತ್ತೆ. ಗಾಳಿ ಒಳ್ಳೆಯದಾಗಿರಬೇಕು.

(ಗವಾಯ್ ಕಾಣಿಸಿಕೊಳ್ಳುವನು)

ಈತ ಬಂದ.

ಸಲೀಂ: ಇವನು ಹೇಗೆ ಇಲ್ಲಿ ಬರುತ್ತಾನೆ?

ಜುಲೇ: ರಾಣೀ ಸಾಹೇಬಾ ಅಪ್ಪಣೆ ಕೊಟ್ಟಿದಾರೆ.

ಗವಾಯ್: (ಇವರತ್ತ ಗಮನವಿಲ್ಲ. ತನ್ನ ಪಾಡಿಗೆ ತಾನು)

ಅನಾರ್ಕಳೀ ಅನಾರ್ಕಳೀ

ಸಲೀಂ: ಇವನನ್ನ ಇಲ್ಲಿಗೆ ಬಿಡಬಾರದು.

ಜುಲೇ: ಹುಚ್ಚನಹಾಗಾಗಿದಾನೆ. ಹತ್ತು ದಿನ ಬಂದು ಹೋಗಲಿ. ಮನಸ್ಸು ಸಮಾಧಾನವಾಗುತ್ತೆ.

ಗವಾಯ್: (ಸಮಾಧಿಯ ಬಳಿ ನಿಂತು ಮೆಲ್ಲನೆಯ ದನಿಯಲ್ಲಿ)

ಎಂತು
ಬಣ್ಣಿಸಲಿ ಅನಾರ್ಕಳಿಯಾ
ಬಣ್ಣಿಸಲಸದಳ ಎಂಬುದನರಿತೂ

ಎಂತು
ಬಣ್ಣಿಸಲಿ ಅನಾರ್ಕಳಿಯು.
(ಎಂದು ಹಾಡನ್ನು ನೀಲಾಂಬರಿಯಲ್ಲಿ ತೀರಾ
ಹಾಡುವನು. ಆಮೇಲೆ)

ಅನಾರ್ಕಳೀ ಅನಾರ್ಕಳೀ
ಯಾವಸುಮಾರಾಮದಂತರದಲಿ
ಈಗ ನೀನು ಇರುವೆ
(ಎಂದು ಆ ಹಾಡನ್ನು "ಅನಾರ್ಕಳೀ" ಪಲ್ಲವಿ
ಯೊಡನೆ ಜಂಜೂಟಿಯಲ್ಲಿ ಹಾಡುವನು).

ಅನಾರ್ಕಳೀ ಅನಾರ್ಕಳೀ

---

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು 2.